**ಉದು ತ್ವಾ ವಿಶ್ವೇ ದೇವಾ ಅಗ್ನೇ ಭರಂತು ಚಿತ್ತಿಭಿಃ। ಸ ನೋ ಭವ ಶಿವತಮಸ್ಸುಪ್ರತೀಕೋ ವಿಭಾವಸುಃ॥**

---

**ಉದಿತಿ। ಉ। ತ್ವಾ। ವಿಶ್ವೇ। ದೇವಾಃ। ಅಗ್ನೇ। ಭರಂತು। ಚಿತ್ತಿಭಿರಿತಿ ಚಿತ್ತಿ-ಭಿಃ॥ ಸಃ। ನಃ। ಭವ। ಶಿವತಮ ಇತಿ ಶಿವ-ತಮಃ। ಸುಪ್ರತೀಕ ಇತಿ ಸು-ಪ್ರತೀಕಃ। ವಿಭಾವಸುರಿತಿ ವಿಭಾ-ವಸುಃ॥**

---

| ಮಂತ್ರ | ವಿನಿಯೋಗ |
|---|---|
| **ಉದು ತ್ವಾ...ವಿಭಾವಸುಃ॥** | **ಉಖ್ಯಾಗ್ನಿಯನ್ನು ಮೇಲಕ್ಕೆ ಎತ್ತಲು.** |

---

▲ **ಅಗ್ನೇ**=ಅಗ್ನಿದೇವನೇ! **ವಿಶ್ವೇ ದೇವಾಃ**=ಪ್ರಾಣರೂಪರಾದ ಸಮಸ್ತದೇವತೆಗಳು; **ತ್ವಾ**=ನಿನ್ನನ್ನು; **ಚಿತ್ತಿಭಿಃ**=ಕರ್ಮಕುಶಲವಾದ ಮನೋವೃತ್ತಿಗಳಿಂದ; **ಉತ್ ಉ ಭರಂತು**=ಮೇಲೆಯೇ ಧರಿಸಿರಲಿ; **ಸಃ**=ಅಂತಹ ನೀನು; **ನಃ**=ನಮಗೆ; **ಶಿವತಮಃ**= ಅತ್ಯಂತ ಶಾಂತನೂ; **ಸುಪ್ರತೀಕಃ**=ಸುಮುಖನೂ; **ವಿಭಾವಸುಃ**=ಪ್ರಭೆಯ ವಾಸ ಸ್ಥಾನವೂ; **ಭವ**=ಆಗು.

---

**ಅಗ್ನಿಯು ಅನ್ನಕ್ಕೆ ಒಡೆಯನು. ಅವನು ರೋಗರಹಿತವಾದ ಬಲವನ್ನುಂಟು ಮಾಡುವ ಆಹಾರವನ್ನು ನಮಗೆ ಕೊಡಲಿ. ಯಜಮಾನನ ಪಾಪಗಳನ್ನು ಪರಿಹರಿಸಲಿ. ನಮಗೆ ಸಂಬಂಧಿಸಿದ ಮಾನವರಿಗೂ, ಜಂತುಗಳಿಗೂ ಬಲವನ್ನು ಕೊಡಲಿ.**

**ವಿಶ್ವೇದೇವರು ಪ್ರಾಣರೂಪರು. ಅವರು ಅಗ್ನಿಯನ್ನು ಕರ್ಮಕುಶಲವಾದ ಮನೋವೃತ್ತಿಗಳಿಂದ ಮೇಲೆಯೇ ಧರಿಸಲಿ. ಅವರ ಅನುಗ್ರಹದಿಂದ ನಾವು ಕರ್ಮಸಮರ್ಥರಾಗೋಣ.**

**ಅಗ್ನಿಯು ನಮಗೆ ಅತ್ಯಂತ ಶಾಂತನೂ, ಸುಮುಖನೂ, ಪ್ರಭಾಯುಕ್ತನೂ ಆಗಿರಲಿ.**

**ಪ್ರೇದಗ್ನೇ ಜ್ಯೋತಿಷ್ಮಾನ್ ಯಾಹಿ ಶಿವೇಭಿರರ್ಚಿಭಿಸ್ತ್ವಮ್ ।**

**ಬೃಹದ್ಭಿರ್ಭಾನುಭಿರ್ಭಾಸನ್ಮಾ ಹಿಗ್ಂಸೀಸ್ತನುವಾ ಪ್ರಜಾಃ ॥**

**ಸಮಿಧಾಽಗ್ನಿಂ ದುವಸ್ಯತ ಘೃತೈರ್ಬೋಧಯತಾತಿಥಿಮ್ ।**

---

ಪ್ರೇತಿ । ಇತ್ । ಅಗ್ನೇ । ಜ್ಯೋತಿಷ್ಮಾನ್ । ಯಾಹಿ । ಶಿವೇಭಿಃ । ಅರ್ಚಿಭಿರಿತ್ಯರ್ಚಿ-ಭಿಃ । ತ್ವಮ್ ॥ ಬೃಹದ್ಭಿರಿತಿ ಬೃಹತ್-ಭಿಃ । ಭಾನುಭಿರಿತಿ ಭಾನು-ಭಿಃ । ಭಾಸನ್ನ್ । ಮಾ । ಹಿಗ್ಂಸೀಃ । ತನುವಾ । ಪ್ರಜಾ ಇತಿ ಪ್ರ-ಜಾಃ ॥ ಸಮಿಧೇತಿ ಸಮ್-ಇಧಾ । ಅಗ್ನಿಮ್ । ದುವಸ್ಯತ । ಘೃತೈಃ । ಬೋಧಯತ । ಅತಿಥಿಮ್ ॥

---

| ಮಂತ್ರ | ವಿನಿಯೋಗ |
|---|---|
| ಪ್ರೇದಗ್ನೇ...ಪ್ರಜಾಃ ॥ | ದೇವಯಜನಪ್ರದೇಶಕ್ಕೆ ಅಗ್ನಿಸಹಿತನಾಗಿ ಹೋಗಲು. |
| ಸಮಿಧಾಗ್ನಿಂ...ಜುಹೋತನ ॥ | ಯಜಮಾನನು ಬ್ರಾಹ್ಮಣನಾದರೆ ಸಮಿದಾಧಾನ ವನ್ನು ಮಾಡಲು. |

---

▲ **ಅಗ್ನೇ**=ಅಗ್ನಿಯೇ! **ಜ್ಯೋತಿಷ್ಮಾನ್**=ಜ್ಯೋತಿರ್ಯುಕ್ತನಾದ; **ತ್ವಮ್**=ನೀನು; **ಶಿವೇಭಿಃ**=ಶಾಂತವಾದ; **ಅರ್ಚಿಭಿಃ**=ಜ್ವಾಲೆಗಳಿಂದ ಕೂಡಿದವನಾಗಿ; **ಪ್ರ ಇತ್ ಯಾಹಿ**=ದೇವಯಜನಪ್ರದೇಶಕ್ಕೆ ಹೋಗು. **ಬೃಹದ್ಭಿಃ**=ಪ್ರೌಢವಾದ; **ಭಾನುಭಿಃ**=ಜ್ವಾಲೆಗಳಿಂದ; **ಭಾಸನ್**=ಪ್ರಕಾಶಗೊಳಿಸುತ್ತಾ; **ತನುವಾ**=ದಾಹಕವಾದ ಶರೀರದಿಂದ; **ಪ್ರಜಾಃ**=ಪ್ರಜೆಗಳನ್ನು; **ಮಾ ಹಿಂಸೀಃ**=ಹಿಂಸಿಸಬೇಡ; ▲ [ಋತ್ವಿಗ್ಯಜಮಾನರೇ!] **ಸಮಿಧಾ**=ಘೃತಾಕ್ತವಾದ ಸಮಿತ್ತಿನಿಂದ; **ಅಗ್ನಿಮ್ ದುವಸ್ಯತ**=ಅಗ್ನಿಯ ಪರಿಚರ್ಯೆಯನ್ನು ಮಾಡಿರಿ; **ಘೃತೈಃ**=ಅಗ್ನಿಗೆ ಪ್ರಿಯವಾದ ತುಪ್ಪಗಳಿಂದ; **ಅತಿಥಿಮ್**=ಅತಿಥಿಯಂತಿರುವ ಅಗ್ನಿಯನ್ನು; **ಬೋಧಯತ**=ಜ್ವಲಿಸುವಂತೆ ಮಾಡಿರಿ.

ಆ [ಆ(೧೦)ಅಸ್ಮಿನ್, ಹವ್ಯಾ] ಸ್ಮಿನ್, ಹವ್ಯಾ ಜುಹೋತನ ॥
ಪ್ರಪ್ರಾಯಮಗ್ನಿರ್ಭರತಸ್ಯ ಶೃಣ್ವೇ ವಿ ಯತ್ಸೂರ್ಯೋ ನ
ರೋಚತೇ ಬೃಹದ್ಭಾಃ । ಅಭಿ ಯಃ ಪೂರುಂ ಪೃತನಾಸು
ತಸ್ಥೌ ದೀದಾಯ ದೈವ್ಯೋ ಅತಿಥಿಶ್ಶಿವೋ ನಃ ॥

---

ಏತಿ [೧೦] ಅಸ್ಮಿನ್ನ್ । ಹವ್ಯಾ । ಜುಹೋತನ ॥ ಪ್ರಪ್ರೇತಿ ಪ್ರ-ಪ್ರ । ಅಯಮ್ । ಅಗ್ನಿಃ ।
ಭರತಸ್ಯ । ಶೃಣ್ವೇ । ವೀತಿ । ಯತ್ । ಸೂರ್ಯಃ । ನ । ರೋಚತೇ । ಬೃಹತ್ । ಭಾಃ ॥
ಅಭೀತಿ । ಯಃ । ಪೂರುಮ್ । ಪೃತನಾಸು । ತಸ್ಥೌ । ದೀದಾಯ । ದೈವ್ಯಃ । ಅತಿಥಿಃ ।
ಶಿವಃ । ನಃ ॥

| ಮಂತ್ರ | ವಿನಿಯೋಗ |
|---|---|
| ಪ್ರಪ್ರಾಯಮಗ್ನಿಃ...ಶಿವೋ ನಃ ॥ | ಯಜಮಾನನು ಕ್ಷತ್ರಿಯನಾದರೆ ಸಮಿದಾಧಾನವನ್ನು ಮಾಡಲು. |

**ಅಸ್ಮಿನ್**=ಈ ಅಗ್ನಿಯಲ್ಲಿ; **ಹವ್ಯಾ**=[ದೇವತೆಗಳಿಗೆ ಸಮರ್ಪಿಸುವ] ಎಲ್ಲ ಹವಿಸ್ಸುಗಳನ್ನೂ; **ಆ ಜುಹೋತನ**=ಸಂಪೂರ್ಣವಾಗಿ ಹೋಮ ಮಾಡಿರಿ; 🔔 **ಅಯಮ್ ಅಗ್ನಿಃ**=ಈ ಅಗ್ನಿಯು; **ಭರತಸ್ಯ**=ಹವಿಸ್ಸುಗಳನ್ನು ಧರಿಸಿರುವ ಯಜಮಾನನ [ಆಹ್ವಾನವನ್ನು] **ಪ್ರಪ್ರ ಶೃಣ್ವೇ**=ಚೆನ್ನಾಗಿ ಕೇಳಲಿ; **ಯತ್**=ಯಾವ ಅಗ್ನಿಯು; **ಸೂರ್ಯಃ ನ**=ಸೂರ್ಯನಂತೆ; **ಭಾಃ**=ಪ್ರಕಾಶಮಾನನಾಗಿ; **ಬೃಹತ್ ವಿ ರೋಚತೇ**=ಹೆಚ್ಚಾಗಿ ಬೆಳಗುತ್ತಾನೆಯೋ; [ಆ ಅಗ್ನಿಯು ಪ್ರೀತನಾಗಲಿ] **ಯಃ**=ಯಾವ ಅಗ್ನಿಯು; **ಪೃತನಾಸು**=ಯುದ್ಧಗಳಲ್ಲಿ; **ಪೂರುಮ್**=ಜಯಪೂರ್ತಿಯನ್ನು; **ಅಭಿ ತಸ್ಥೌ**= ಮಾಡುತ್ತಿದ್ದಾನೆಯೋ [ಅಂತಹ]; **ದೈವ್ಯಃ**=ದೇವತೆಗಳಿಗೆ ಹವಿಃಪ್ರದಾನದಿಂದ ಹಿತನಾಗಿರುವ; **ನಃ ಶಿವಃ**=ನಮಗೆ ಮಂಗಲಸ್ವರೂಪನಾಗಿ ಇರುವ [ಆ ಅಗ್ನಿಯು] **ಅತಿಥಿಃ ದೀದಾಯ**=ಅತಿಥಿಯಂತೆ ಇರಲಿ.

**ಆಪೋ ದೇವೀಃ ಪ್ರತಿ ಗೃಹ್ಣೀತ ಭಸ್ಮೈತತ್ಸ್ಯೋನೇ ಕೃಣುಧ್ವಗ್ಂ ಸುರಭಾವು ಲೋಕೇ । ತಸ್ಮೈ ನಮಂತಾಂ ಜನಯಃ ಸುಪತ್ನೀರ್ಮಾತೇವ ಪುತ್ರಂ ಬಿಭೃತಾ ಸ್ವೇನಮ್ ॥**

ಆಪಃ । ದೇವೀಃ । ಪ್ರತೀತಿ । ಗೃಹ್ಣೀತ । ಭಸ್ಮ । ಏತತ್ । ಸ್ಯೋನೇ । ಕೃಣುಧ್ವಮ್ । ಸುರಭೌ । ಉ । ಲೋಕೇ ॥ ತಸ್ಮೈ । ನಮಂತಾಮ್ । ಜನಯಃ । ಸುಪತ್ನೀರಿತಿ ಸು–ಪತ್ನೀಃ । ಮಾತಾ । ಇವ । ಪುತ್ರಮ್ । ಬಿಭೃತ । ಸ್ವಿತಿ । ಏನಮ್ ॥

| ಮಂತ್ರ | ವಿನಿಯೋಗ |
|---|---|
| **ಆಪೋ ದೇವೀಃ...ಸ್ವೇನಮ್ ॥** | ಉಖ್ಯಾಗ್ನಿಯ ಮೇಲಿರುವ ಭಸ್ಮವನ್ನು ನೀರಿನಲ್ಲಿ ಹಾಕಲು ಮೊದಲನೆಯ ಮಂತ್ರ. |

🔔 **ಆಪಃ ದೇವೀಃ**=ಹೇ! ಜಲದೇವತೆಗಳೇ! **ಏತತ್ ಭಸ್ಮ**=ಈ ಬೂದಿಯನ್ನು; **ಪ್ರತಿಗೃಹ್ಣೀತ**=ಸ್ವೀಕರಿಸಿರಿ. [ಇದನ್ನು] **ಸ್ಯೋನೇ**=ಸುಖಕರವಾದ; **ಸುರಭೌ ಉ**=ಸುಗಂಧಯುಕ್ತವಾಗಿಯೇ ಇರುವ; **ಲೋಕೇ**=ಸ್ಥಾನದಲ್ಲಿ; **ಕೃಣುಧ್ವಮ್**=ಸ್ಥಾಪಿಸಿರಿ. **ಸುಪತ್ನೀಃ**=ವರುಣರೂಪನಾದ ಒಳ್ಳೆಯ ಪತಿಯುಳ್ಳ; **ಜನಯಃ**=ಅಗ್ನಿಯ ಮಾತೃಗಳಾದ ಸಲಿಲಗಳು; **ತಸ್ಮೈ ನಮಂತಾಮ್**=ಆ ಅಗ್ನಿಯನ್ನು ರಕ್ಷಿಸುವುದರಲ್ಲಿ ಸಾವಧಾನವಾಗಿರಲಿ; [ಬಾಗಿರಲಿ] [ಅಬ್ದೇವತೆಗಳೇ!] **ಮಾತಾ ಪುತ್ರಮ್ ಇವ**=ತಾಯಿಯು ಮಗನನ್ನು ಹೇಗೋ ಹಾಗೆ [ರಕ್ಷಿಸುವಂತೆ] **ಏನಮ್**=ಈ ಅಗ್ನಿಯನ್ನು; **ಸು ಬಿಭೃತ**=ಚೆನ್ನಾಗಿ ಪೋಷಿಸಿರಿ.

ಹೇ! ಜ್ಯೋತಿಷ್ಮಂತನಾದ ಅಗ್ನಿಯೇ! ಶಾಂತವಾದ ಜ್ವಾಲೆಗಳಿಂದ ಕೂಡಿದವನಾಗಿ ದೇವಯಜನಪ್ರದೇಶಕ್ಕೆ ಹೋಗು. ಪ್ರೌಢವಾದ ಕಿರಣಗಳಿಂದ/ಜ್ವಾಲೆಗಳಿಂದ ಪ್ರಕಾಶಿಸುತ್ತಿರು. ನಿನ್ನ ದಾಹಕಶರೀರದಿಂದ ಪ್ರಜೆಗಳನ್ನು ಹಿಂಸಿಸದಿರು.

ಹೇ! ಋತ್ವಿಗ್ಯಜಮಾನರೇ! ಮನೆಗೆ ಬಂದಿರುವ ಅತಿಥಿಯನ್ನು ತುಪ್ಪದಿಂದ ಕೂಡಿದ

ಅಪ್ಸ್ವಗ್ನೇ ಸಧಿಷ್ಟವ [...ಸಧಿಷ್ಟವ..(೧೧)] ಸೌಷಧೀರನು

ರುಧ್ಯಸೇ । ಗರ್ಭೇ ಸಂಜಾಯಸೇ ಪುನಃ ॥

---

ಅಪ್ಸ್ವಿತ್ಯಪ್-ಸು । ಅಗ್ನೇ । ಸಧಿಃ । ತವ [೧೧] ಸಃ । ಓಷಧೀಃ । ಅನ್ವಿತಿ । ರುಧ್ಯಸೇ ॥

ಗರ್ಭೇ । ಸನ್ । ಜಾಯಸೇ । ಪುನಃ ॥

---

| ಮಂತ್ರ | ವಿನಿಯೋಗ |
|---|---|
| ಅಪ್ಸ್ವಗ್ನೇ...ಪುನಃ ॥ | ನೀರಿನಲ್ಲಿ ಭಸ್ಮವನ್ನು ಹಾಕಲು ಎರಡನೆಯ ಮಂತ್ರ. |

---

▲ **ಅಗ್ನೇ**=ಅಗ್ನಿದೇವನೇ! **ತವ**=ನಿನ್ನ; **ಸಧಿಃ**=[ಭಸ್ಮರೂಪವಾದ] ಬಲವು; **ಅಪ್ಸು**= ನೀರಿನಲ್ಲಿ [ಇದೆ]. **ಸಃ**=ಅಂತಹ ನೀನು; **ಓಷಧೀಃ**=ವ್ರೀಹಿಯವಾದಿ ಸಸ್ಯವರ್ಗವನ್ನು; **ಅನು ರುಧ್ಯಸೇ**=ಜಠರಾಗ್ನಿರೂಪದಿಂದ/ಶಾಖದ ರೂಪದಿಂದ ಅನುಸರಿಸುತ್ತೀಯೆ. **ಗರ್ಭೇ ಸನ್**=ಅರಣಿಗಳಲ್ಲಿ ಅಂತರ್ಹಿತನಾಗಿದ್ದುಕೊಂಡು; **ಪುನಃ**=ಮತ್ತೆ; **ಜಾಯಸೇ** =[ಮಂಥನದಿಂದ] ಪ್ರಕಟನಾಗುತ್ತೀಯೆ.

---

ಅನ್ನದಿಂದ ತೃಪ್ತಿಪಡಿಸುವಂತೆ ಘೃತದಿಂದ ನೆನೆಸಿರುವ ಸಮಿತ್ತಿನಿಂದ ಅಗ್ನಿಯನ್ನು ಸಂತೋಷಪಡಿಸಿರಿ. ಬಳಿಕ ಎಲ್ಲ ದೇವತೆಗಳ ಹವಿಸ್ಸುಗಳನ್ನೂ ಅಗ್ನಿಯಲ್ಲಿ ಹೋಮ ಮಾಡಿರಿ. ಎಲ್ಲ ದೇವತೆಗಳನ್ನೂ ತೃಪ್ತಿಪಡಿಸಿರಿ.

ಹವಿಸ್ಸನ್ನು ದೇವತೆಗಳಿಗೆ ಕೊಡಲು ಅಗ್ನಿಯನ್ನು ಆಹ್ವಾನಿಸುತ್ತಿರುವ ಯಜಮಾನನ ಆಹ್ವಾನವನ್ನು ಅಗ್ನಿಯು ಕೇಳಲಿ. ಈ ಅಗ್ನಿಯು ಸೂರ್ಯನಂತೆ ಪ್ರಕಾಶಿಸತಕ್ಕವನು. ಆ ಅಗ್ನಿಯು ಸಮಿತ್ತಿನಿಂದ ಪ್ರೀತನಾಗಲಿ. ಅವನು ಯಜಮಾನನಿಗೆ ಯುದ್ಧಗಳಲ್ಲಿ ಜಯ ವನ್ನು ಸಂಪಾದಿಸಿಕೊಡುವವನು. ಈತನು ದೇವತೆಗಳಿಗೆ ಹಿತನು. ನಮಗೆ ಮಂಗಳಕ ರನು. ಈತನು ಈ ಕರ್ಮದಲ್ಲಿ ಅತಿಥಿಯಂತೆ ಆಗಮಿಸಿ, ಆತಿಥ್ಯವನ್ನು ಸ್ವೀಕರಿಸಿ, ಸಂತುಷ್ಟನಾಗಲಿ. ನಮ್ಮ ಇಷ್ಟಾರ್ಥಗಳನ್ನು ಪೂರ್ಣಗೊಳಿಸಲಿ.

**'ಆಪೋ ವರುಣಸ್ಯ ಪತ್ನಯಃ'** ಎಂದಿರುವಂತೆ ನೀರುಗಳು ವರುಣನ ಪತ್ನಿಯರು. ಹಾಗೆಯೇ ಮಿಂಚಿನ ರೂಪವಾದ ಅಗ್ನಿಗೆ ಕಾರಣವಾಗಿರುವುದರಿಂದ ಅಗ್ನಿಯ ಮಾತೃಗಳು. ಇಂತಹ ನೀರುಗಳು ಉಖ್ಯಾಗ್ನಿಯ ಭಸ್ಮವನ್ನು ಸ್ವೀಕರಿಸಲಿ. ಸುಖಕರವಾದ,

ಗರ್ಭೋ᳚ ಅಸ್ಯೋಷಧೀನಾಂ ಗರ್ಭೋ᳚ ವನಸ್ಪತೀನಾಮ್ ।
ಗರ್ಭೋ᳚ ವಿಶ್ವಸ್ಯ ಭೂತಸ್ಯಾಗ್ನೇ ಗರ್ಭೋ᳚ ಅಪಾಮಸಿ ॥

---

ಗರ್ಭಃ । ಅಸಿ । ಓಷಧೀನಾಮ್ । ಗರ್ಭಃ । ವನಸ್ಪತೀನಾಮ್ ॥ ಗರ್ಭಃ । ವಿಶ್ವಸ್ಯ । ಭೂತಸ್ಯ । ಅಗ್ನೇ । ಗರ್ಭಃ । ಅಪಾಮ್ । ಅಸಿ ॥

---

| ಮಂತ್ರ | ವಿನಿಯೋಗ |
|---|---|
| ಗರ್ಭೋ᳚...ಅಪಾಮಸಿ ॥ | ಭಸ್ಮನಿಧಾನದ ಮೂರನೆಯ ಮಂತ್ರ. |

---

▲ **ಅಗ್ನೇ**=ಅಗ್ನಿಯೇ! **ಓಷಧೀನಾಮ್**=[ಜಠರಾಗ್ನಿಯನ್ನು ಉದ್ದೀಪನಗೊಳಿಸುವ] ಓಷಧಿಗಳ; **ಗರ್ಭಃ ಅಸಿ**=ಗರ್ಭರೂಪನಾಗಿದ್ದೀಯೆ; **ವನಸ್ಪತೀನಾಮ್**=ವನಸ್ಪತಿಗಳಲ್ಲಿ; **ಗರ್ಭಃ**=ಗರ್ಭದಂತೆ [ಇರುವೆ]. **ವಿಶ್ವಸ್ಯ ಭೂತಸ್ಯ**=ಸಮಸ್ತಪ್ರಾಣಿಜಾತಕ್ಕೂ; **ಗರ್ಭಃ**=[ಜಠರಾಗ್ನಿರೂಪದಿಂದ] ಗರ್ಭರೂಪನು [ನೀನು]. **ಅಪಾಮ್ ಗರ್ಭಃ ಅಸಿ**=[ಮಿಂಚು ಮತ್ತು ಬಡಬಾಗ್ನಿಯ ರೂಪದಿಂದ] [ನೀನು] ನೀರಿನ ಗರ್ಭರೂಪನಾಗಿದ್ದೀಯೆ.

---

ಸುಗಂಧಯುಕ್ತವಾದ ಸ್ಥಾನದಲ್ಲಿಡಲಿ. ಅಗ್ನಿಯನ್ನು ರಕ್ಷಿಸುವುದರಲ್ಲಿ ಸಾವಧಾನವಾಗಿರಲಿ. ತಾಯಿಯು ಮಗನನ್ನು ರಕ್ಷಿಸುವಂತೆ ಈ ಅಗ್ನಿಯನ್ನು ಪೋಷಿಸಲಿ.

ಅಗ್ನಿಯೇ! ನಿನ್ನ ಬಲರೂಪವಾದ ಭಸ್ಮವನ್ನು ನೀರಿನಲ್ಲಿ ಹಾಕಿರುತ್ತೇನೆ. ನೀನು ಸಸ್ಯಗಳನ್ನು ಅನುಸರಿಸಿರುವೆ. ಸಸ್ಯವರ್ಗವು ಬೆಳೆಯಲು ಶಾಖವು ಬೇಕಾಗಿರುವುದರಿಂದ ನಿನ್ನ ಅನುಸರಣೆಯು ಯುಕ್ತವೆನಿಸಿದೆ. ಅರಣಿಗಳಲ್ಲಿ ಪ್ರಚ್ಛನ್ನನಾದ ನೀನು ಮಂಥನದಿಂದ ಮತ್ತೆ ಹುಟ್ಟುತ್ತೀಯೆ.

ಔಷಧವು ಜಠರಾಗ್ನಿಯನ್ನು ಉದ್ದೀಪನಗೊಳಿಸುತ್ತದೆ. ಹೀಗಾಗಿ ನೀನು ಓಷಧಿಗಳ ಗರ್ಭದಲ್ಲಿರುವೆ. ಅರಣಿರೂಪವಾದ ವನಸ್ಪತಿಯಲ್ಲಿ ನೀನು ಇರುವೆ. ಅಗ್ನಿಯು ಸಮಸ್ತ ಪ್ರಾಣಿಗಳಲ್ಲಿಯೂ ಜಠರಾಗ್ನಿರೂಪದಿಂದ ಇದೆ. ನೀರಿನಲ್ಲಿ ಮಿಂಚು ಮತ್ತು ಬಡಬಾಗ್ನಿರೂಪವಾಗಿದೆ. ಇಂತಹ ಅಗ್ನಿಯ ಭಸ್ಮವನ್ನು ನಾನು ನೀರಿನಲ್ಲಿ ಹಾಕುವೆನು.

ಪ್ರಸದ್ಯ ಭಸ್ಮನಾ ಯೋನಿಮಪಶ್ಚ ಪೃಥಿವೀಮಗ್ನೇ ।
ಸಗ್ಂಸೃಜ್ಯ ಮಾತೃಭಿಸ್ತ್ವಂ ಜ್ಯೋತಿಷ್ಮಾನ್ಪುನರಾಽಸದಃ ॥
ಪುನರಾಸದ್ಯ ಸದನಮಪಶ್ಚ ಪೃಥಿವೀಮಗ್ನೇ ।

---

ಪ್ರಸದ್ಯೇತಿ ಪ್ರ-ಸದ್ಯ । ಭಸ್ಮನಾ । ಯೋನಿಮ್ । ಅಪಃ । ಚ । ಪೃಥಿವೀಮ್ । ಅಗ್ನೇ ॥ ಸಗ್ಂಸೃಜ್ಯೇತಿ ಸಮ್-ಸೃಜ್ಯ । ಮಾತೃಭಿರಿತಿ ಮಾತೃ-ಭಿಃ । ತ್ವಮ್ । ಜ್ಯೋತಿಷ್ಮಾನ್ । ಪುನಃ । ಐತಿ । ಅಸದಃ ॥ ಪುನಃ । ಆಸದ್ಯೇತ್ಯಾ-ಸದ್ಯ । ಸದನಮ್ । ಅಪಃ । ಚ । ಪೃಥಿವೀಮ್ । ಅಗ್ನೇ ॥

---

| ಮಂತ್ರ | ವಿನಿಯೋಗ |
|---|---|
| ಪ್ರಸದ್ಯ...ಅಸದಃ ॥ | ಭಸ್ಮವನ್ನು ತೆಗೆದು ಹಾಕಿ ಉಖೆಯಲ್ಲಿ ಮತ್ತೆ ಅಗ್ನಿಯನ್ನು ಹಾಕಲು. |
| ಪುನರಾಸದ್ಯ....ಶಿವತಮಃ ॥ | ಉಖೆಯಲ್ಲಿ ಅಗ್ನಿಯನ್ನು ಹಾಕಲು ಎರಡನೆಯ ಮಂತ್ರ. |

---

▲ **ಅಗ್ನೇ**=ಹೇ! ಅಗ್ನಿಯೇ! **ಭಸ್ಮನಾ**=[ನಿನ್ನನ್ನು ಆವರಿಸಿರುವ] ಭಸ್ಮದಿಂದ; **ಯೋನಿಮ್**=ಕಾರಣಭೂತವಾದ; **ಪೃಥಿವೀಮ್**=ಪೃಥಿವಿಯನ್ನೂ; **ಅಪಃ ಚ**=[ಕಾರಣಭೂತವಾದ] ನೀರನ್ನೂ; **ಪ್ರಸದ್ಯ**=ಹೊಂದಿ; **ಮಾತೃಭಿಃ**=ಮಾತೃರೂಪರಾದ ಪೃಥಿವಿಯಿಂದಲೂ, ಜಲದಿಂದಲೂ; **ಸಂಸೃಜ್ಯ**=ಕೂಡಿ; **ತ್ವಮ್**=ನೀನು; **ಜ್ಯೋತಿಷ್ಮಾನ್**=ಹೆಚ್ಚು ಪ್ರಕಾಶವಂತನಾಗಿ; **ಪುನಃ**=ಮತ್ತೆ; **ಆ ಅಸದಃ**=ನಿನ್ನ ಸ್ಥಾನವಾದ ಉಖೆಯನ್ನು ಹೊಂದು. ▲ **ಅಗ್ನೇ**=ಅಗ್ನಿದೇವನೇ! **ಸದನಮ್ ಪೃಥಿವೀಮ್ ಅಪಃ ಚ**=[ಭಸ್ಮರೂಪದಿಂದ] ಪೃಥಿವಿಯನ್ನೂ ಜಲವನ್ನೂ; **ಆಸದ್ಯ**=ಹೊಂದಿ; **ಪುನಃ**=ಮತ್ತೆ;

**ಶೇಷೇ ಮಾತುರ್ಯಥೋಪಸ್ಥೇಽನ್ತರಸ್ಯಾಗ್ಂ ಶಿವತಮಃ ॥**

**ಪುನರೂರ್ಜಾ [(೧೨)] ನಿ ವರ್ತಸ್ವ ಪುನರಗ್ನ**

**ಇಷಾಽಽಯುಷಾ । ಪುನರ್ನಃ ಪಾಹಿ ವಿಶ್ವತಃ ॥**

---

ಶೇಷೇ । ಮಾತುಃ । ಯಥಾ । ಉಪಸ್ಥ ಇತ್ಯುಪ-ಸ್ಥೇ । ಅಂತಃ । ಅಸ್ಯಾಮ್ । ಶಿವತಮ ಇತಿ ಶಿವ-ತಮಃ ॥ ಪುನಃ । ಊರ್ಜಾ ।(೧೨)। ನೀತಿ । ವರ್ತಸ್ವ । ಪುನಃ । ಅಗ್ನೇ । ಇಷಾ । ಆಯುಷಾ ॥ ಪುನಃ । ನಃ । ಪಾಹಿ । ವಿಶ್ವತಃ ॥

---

| ಮಂತ್ರ | ವಿನಿಯೋಗ |
|---|---|
| ಪುನರೂರ್ಜಾ...ವಿಶ್ವತಃ ॥ | ಉಖೆಯಲ್ಲಿ ಅಗ್ನಿಯನ್ನು ಸಂಪೂರ್ಣವಾಗಿ ಹಾಕಲು ಪ್ರಥಮಮಂತ್ರ. |

---

**ಮಾತುಃ ಉಪಸ್ಥೇ**=ತಾಯಿಯ ತೊಡೆಯ ಮೇಲೆ; **ಯಥಾ**=ಹೇಗೆ; [ಮಗುವು ಸುಖವಾಗಿ ಮಲಗುವುದೋ] [ಹಾಗೆ] **ಅಸ್ಯಾಮ್**=ಈ ಉಖೆಯಲ್ಲಿ; **ಅಂತಃ**= ಒಳಗಡೆ; **ಶಿವತಮಃ**=ಅತಿಶಯಶಾಂತನಾಗಿ; **ಶೇಷೇ**=ಮಲಗುತ್ತೀಯೆ [ಮಲಗು]; ▲ **ಅಗ್ನೇ**=ಅಗ್ನಿಯೇ! **ಪುನಃ**=ಮತ್ತೆ; **ಊರ್ಜಾ**=ಕ್ಷೀರಾದಿರಸದೊಡನೆ; **ನಿ ವರ್ತಸ್ವ** =ಹಿಂದಿರುಗು. **ಇಷಾ**=ಅನ್ನದೊಡನೆಯೂ; **ಆಯುಷಾ**=ದೀರ್ಘಾಯುಸ್ಸಿನೊಡನೆಯೂ; **ಪುನಃ**=ಮತ್ತೆ; ನಿವರ್ತಸ್ವ=ಹಿಂದಿರುಗು; **ನಃ**=ನಮ್ಮನ್ನು; **ಪುನಃ**=ಮತ್ತೆ; **ವಿಶ್ವತಃ**=ಎಲ್ಲ; [ಅಪರಾಧಗಳಿಂದಲೂ] **ಪಾಹಿ**=ರಕ್ಷಿಸು.

---

ಹೇ! ಅಗ್ನಿಯೇ! ನಿನ್ನ ಭಸ್ಮವನ್ನು ನೀರಿನಲ್ಲಿ ಹಾಕುವುದರಿಂದ ಮಾತೃರೂಪರಾದ ಭೂಮಿ-ಜಲಗಳಲ್ಲಿ ನೀನು ಸೇರಿದಂತಾಯಿತು. ಹೆಚ್ಚು ಪ್ರಕಾಶವನ್ನು ಪಡೆದವನಾದ ನೀನು ಮತ್ತೆ ನಿನ್ನ ಸ್ಥಾನವಾದ ಉಖೆಯನ್ನು ಹೊಂದು.

ಪೃಥಿವಿಯನ್ನೂ ಜಲವನ್ನೂ ಹೊಂದಿದ ಅಗ್ನಿಯೇ! ನೀನು ತಾಯಿಯ ತೊಡೆಯಲ್ಲಿ ಮಗುವು ಮಲಗುವಂತೆ ಅತಿಶಾಂತನಾಗಿ ಈ ಉಖೆಯ ಒಳಗಡೆ ಮಲಗಿರುತ್ತೀಯೆ/ ಮಲಗು.

ಸಹ ರಯ್ಯಾ ನಿವರ್ತಸ್ವಾಗ್ನೇ ಪಿನ್ವಸ್ವ ಧಾರಯಾ । ವಿಶ್ವಪ್ಸ್ನಿಯಾ ವಿಶ್ವತಸ್ಪರಿ ॥ ಪುನಸ್ತ್ವಾಽಽದಿತ್ಯಾ ರುದ್ರಾ ವಸವಸ್ಸಮಿನ್ಧತಾಂ ಪುನರ್ಬ್ರಹ್ಮಾಣೋ ವಸುನೀಥ ಯಜ್ಞೈಃ ।

---

ಸಹ । ರಯ್ಯಾ । ನೀತಿ । ವರ್ತಸ್ವ । ಅಗ್ನೇ । ಪಿನ್ವಸ್ವ । ಧಾರಯಾ ॥ ವಿಶ್ವಪ್ಸ್ನಿಯೇತಿ ವಿಶ್ವ-ಪ್ಸ್ನಿಯಾ । ವಿಶ್ವತಃ । ಪರಿ ॥ ಪುನಃ । ತ್ವಾ । ಆದಿತ್ಯಾಃ । ರುದ್ರಾಃ । ವಸವಃ । ಸಮಿತಿ । ಇಂಧತಾಮ್ । ಪುನಃ । ಬ್ರಹ್ಮಾಣಃ । ವಸುನೀಥೇತಿ ವಸು-ನೀಥ । ಯಜ್ಞೈಃ ॥

---

| ಮಂತ್ರ | ವಿನಿಯೋಗ |
|---|---|
| ಸಹ ರಯ್ಯಾ...ಪರಿ ॥ | ಎರಡನೆಯ ಹಾಗೂ ಕೊನೆಯ ಮಂತ್ರ. |
| ಪುನಸ್ತ್ವಾ....ಕಾಮಾಃ ॥ | ಉಖ್ಯಾಗ್ನಿಯನ್ನು ಪ್ರಜ್ವಲಿಸಲು |

---

▲ ಅಗ್ನೇ=ಅಗ್ನಿಯೇ! ರಯ್ಯಾ ಸಹ=ಧನದೊಡನೆ; ನಿವರ್ತಸ್ವ=ಹಿಂದಿರುಗು; ವಿಶ್ವಪ್ಸ್ನಿಯಾ=ಎಲ್ಲರಿಂದಲೂ ಕುಡಿಯಲ್ಪಡುವ; ಧಾರಯಾ=ವೃಷ್ಟಿಧಾರೆಯಿಂದ; ವಿಶ್ವತಃ ಪರಿ=ಎಲ್ಲ ತೃಣ, ಸಸ್ಯ, ಲತಾ, ವೃಕ್ಷಾದಿಗಳ ಮೇಲೆ; ಪಿನ್ವಸ್ವ=ತೋಯಿಸು/ಮಳೆಯನ್ನು ಸುರಿಸಿ ತೋಯಿಸು. ▲ ವಸುನೀಥ=ಧನವನ್ನು ಕೊಡುವ; ಅಗ್ನೇ=ಅಗ್ನಿಯೇ; ತ್ವಾ=ನಿನ್ನನ್ನು; ಪುನಃ=ಮತ್ತೆ; ಆದಿತ್ಯಾಃ=ದ್ವಾದಶಾದಿತ್ಯರೂ; ರುದ್ರಾಃ=ಏಕಾದಶರುದ್ರರೂ; ವಸವಃ=ಅಷ್ಟವಸುಗಳೂ; ಸಮಿಂಧತಾಮ್=ಪ್ರಜ್ವಲಿಸುವಂತೆ ಮಾಡಲಿ. ಬ್ರಹ್ಮಾಣಃ=ಬ್ರಾಹ್ಮಣರಾದ ಋತ್ವಿಜರು; ಯಜ್ಞೈಃ=ಯಜ್ಞಗಳಿಂದ/ಯಜ್ಞಗಳ ನಿಮಿತ್ತದಿಂದ; ಪುನಃ=ಮತ್ತೆ; ಸಮಿಂಧತಾಮ್=ಪ್ರಜ್ವಲಿಸುವಂತೆ ಮಾಡಲಿ.

---

ಹೇ! ಅಗ್ನಿದೇವನೇ! ನೀನು ಕ್ಷೀರಾದಿರಸಗಳೊಡನೆಯೂ ಅನ್ನ-ಆಯುಷ್ಯಗಳೊಡನೆಯೂ ಹಿಂದಿರುಗು. ನಮ್ಮನ್ನು ಅಪರಾಧಗಳಿಂದ ಕಾಪಾಡು.

ನೀನು ವೃಷ್ಟಿಧಾರೆಯಿಂದ ಎಲ್ಲವನ್ನೂ ತೋಯುವಂತೆ ಮಾಡು. ಸಂಪತ್ತಿನೊಡನೆ ಹಿಂದಿರುಗು.

ಘೃತೇನ ತ್ವಂ ತನುವೋ ವರ್ಧಯಸ್ವ ಸತ್ಯಾಸ್ಸಂತು ಯಜಮಾನಸ್ಯ ಕಾಮಾಃ ॥ ಬೋಧಾ ನೋ ಅಸ್ಯ ವಚಸೋ ಯವಿಷ್ಠ ಮಗ್ಂಹಿಷ್ಠಸ್ಯ ಪ್ರಭೃತಸ್ಯ ಸ್ವಧಾವಃ ।

---

ಘೃತೇನ । ತ್ವಮ್ । ತನುವಃ । ವರ್ಧಯಸ್ವ । ಸತ್ಯಾಃ । ಸಂತು । ಯಜಮಾನಸ್ಯ । ಕಾಮಾಃ ॥ ಬೋಧ । ನಃ । ಅಸ್ಯ । ವಚಸಃ । ಯವಿಷ್ಠ । ಮಗ್ಂಹಿಷ್ಠಸ್ಯ । ಪ್ರಭೃತಸ್ಯೇತಿ ಪ್ರ-ಭೃತಸ್ಯ । ಸ್ವಧಾವ ಇತಿ ಸ್ವಧಾ-ವಃ ।

---

| ಮಂತ್ರ | ವಿನಿಯೋಗ |
|---|---|
| ಬೋಧಾ ನೋ...ಅಗ್ನೇ ॥ | ಅಗ್ನ್ಯುಪಸ್ಥಾನವನ್ನು ಮಾಡಲು. |

---

**ತ್ವಮ್**=ನೀನು; **ಘೃತೇನ**=ಆಜ್ಯಾಹುತಿಗಳಿಂದ [ತೃಪ್ತನಾಗಿ] **ತನುವಃ**=[ನಮ್ಮ] ಶರೀರಗಳನ್ನು; **ವರ್ಧಯಸ್ವ**=ವೃದ್ಧಿಗೊಳಿಸು. [ನಿನ್ನ ಅನುಗ್ರಹದಿಂದ] **ಯಜಮಾನಸ್ಯ**=ಯಜಮಾನನ; **ಕಾಮಾಃ**=ಕಾಮನೆಗಳು; **ಸತ್ಯಾಃ ಸಂತು**=ಸತ್ಯಗಳಾಗಿ/ಸಫಲಗಳಾಗಿ ಪರಿಣಮಿಸಲಿ. 🔔 **ಅಗ್ನೇ**=ಅಗ್ನಿಯೇ! **ಸ್ವಧಾವಃ**=ಅನ್ನವಂತನೇ! **ಯವಿಷ್ಠ**=ಅತ್ಯಂತ ಯುವಕನೇ! **ಅಸ್ಯ**=ಈ; **ಮಂಹಿಷ್ಠಸ್ಯ**=ಅತಿವೃದ್ಧಿಗಾಗಿ; **ಪ್ರಭೃತಸ್ಯ**=ಸಂಪಾದಿಸಲ್ಪಟ್ಟಿರುವ; **ನಃ**=ನಮ್ಮದಾದ; **ವಚಸಃ**=ಮಾತಿನ [ಅಭಿಪ್ರಾಯವನ್ನು] **ಬೋಧ**=ತಿಳಿ.

---

ಹೇ! ಅಗ್ನಿಯೇ! ದೇವತೆಗಳೂ, ಬ್ರಾಹ್ಮಣರೂ ನಿನ್ನನ್ನು ಉರಿಯುವಂತೆಯೂ ಹವ್ಯಗಳನ್ನು ಸ್ವೀಕರಿಸುವಂತೆಯೂ ಮಾಡಲಿ. ನೀನು ತೃಪ್ತನಾಗು. ನೀನು ಆಜ್ಯಾಹುತಿಗಳಿಂದ ನಿನ್ನ ಜ್ವಾಲಾರೂಪವಾದ ಶರೀರಗಳನ್ನು ವೃದ್ಧಿಗೊಳಿಸು. ನೀನು ತೃಪ್ತನಾಗಿ ನಿನ್ನ ಅನುಗ್ರಹದಿಂದ ಯಜಮಾನನು ಇಷ್ಟಾರ್ಥಗಳನ್ನು ಪಡೆಯಲಿ.

ಹೇ! ಅಗ್ನಿದೇವನೇ! ನೀನು ಅನ್ನವುಳ್ಳವನು. ಯುವಕನು. ನಾನು ನಿನ್ನನ್ನು ನಮಸ್ಕರಿಸುತ್ತೇನೆ. ನಿನ್ನನ್ನು ಸ್ತುತಿಸುವವರು ಬಗೆ ಬಗೆಯಾಗಿರುತ್ತಾರೆ. ನೀನು ನಮ್ಮ ಸ್ತೋತ್ರದ

ಪೀಯತಿ ತ್ವೋ ಅನು ತ್ವೋ ಗೃಣಾತಿ ವಂದಾರುಸ್ತೇ ತನುವಂ ವಂದೇ ಅಗ್ನೇ ॥ ಸ ಬೋಧಿ ಸೂರಿರ್ಮಘವಾ ವಸುದಾವಾ ವಸುಪತಿಃ। ಯುಯೋಧ್ಯಸ್ಮದ್ದ್ವೇಷಾಗ್ಂಸಿ ॥ ೧೩-3 ॥

[ಆ ತವ್ವೋರ್ಜಾಽನು ಷೋಡಶ ಚ ॥]

---

ಪೀಯತಿ । ತ್ವಃ । ಅನ್ವಿತಿ । ತ್ವಃ । ಗೃಣಾತಿ । ವಂದಾರುಃ । ತೇ । ತನುವಮ್ । ವಂದೇ । ಅಗ್ನೇ ॥ ಸಃ । ಬೋಧಿ । ಸೂರಿಃ । ಮಘವೇತಿ ಮಘ-ವಾ । ವಸುದಾವೇತಿ ವಸು-ದಾವಾ । ವಸುಪತಿರಿತಿ ವಸು-ಪತಿಃ । ಯುಯೋಧಿ । ಅಸ್ಮತ್ । ದ್ವೇಷಾಗ್ಂಸಿ ॥ [೧೩]

---

| ಮಂತ್ರ | ವಿನಿಯೋಗ |
|---|---|
| ಸ ಬೋಧಿ...ದ್ವೇಷಾಗ್ಂಸಿ ॥ | ಉಪಸ್ಥಾನದ ಎರಡನೆಯ ಹಾಗೂ ಕೊನೆಯ ಮಂತ್ರ. |

---

**ತ್ವಃ**=ಒಬ್ಬ ಸ್ತುತಿಸುವವನು; **ಪೀಯತಿ**=ಅಸತ್ಯವಾಗಿ ಅಥವಾ ಅತಿಶಯವಾಗಿ ಹೊಗಳುತ್ತಾನೆ; **ತ್ವಃ**=ಒಬ್ಬನು; **ಅನು ಗೃಣಾತಿ**=ಅನುಕೂಲವಾಗಿ ಹೇಳುತ್ತಾನೆ; **ವಂದಾರುಃ**=ಅಭಿವಾದಶೀಲನಾದ ನಾನು; **ತೇ**=ನಿನ್ನ; **ತನುವಮ್**=ಶರೀರವನ್ನು; **ವಂದೇ**=ನಮಸ್ಕರಿಸುತ್ತೇನೆ. ▲ [ಅಗ್ನಿಯೇ] **ಸೂರಿಃ**=ವಿದ್ವಾಂಸನಾದ; **ಮಘವಾ**=ಅನ್ನವಂತನಾದ; **ವಸುದಾವಾ**=ಧನಪ್ರದನಾದ; **ವಸುಪತಿಃ**=ಧನಕ್ಕೆ ಸ್ವಾಮಿಯಾದ; **ಸಃ**=ಅಂತಹ; **ತ್ವಮ್**=ನೀನು; **ಬೋಧಿ**=[ನಮ್ಮ ಅಭಿಪ್ರಾಯವನ್ನು] ತಿಳಿ. **ಅಸ್ಮತ್**=ನಮ್ಮಿಂದ; **ದ್ವೇಷಾಂಸಿ**=ಶತ್ರುಗಳ ದ್ವೇಷಕಾರ್ಯವನ್ನು; **ಯುಯೋಧಿ**=ಬೇರ್ಪಡಿಸು.

---

ತಾತ್ಪರ್ಯವನ್ನು ತಿಳಿದು ಅನುಗ್ರಹಿಸು.

ಹೇ! ಅಗ್ನಿಯೇ! ವಿದ್ವಾಂಸನೂ, ಧನಪ್ರದನೂ, ಅನ್ನವಂತನೂ ಆದ ನೀನು ನಮ್ಮ ಅಭಿಪ್ರಾಯವನ್ನು ತಿಳಿದು, ನಮ್ಮ ಶತ್ರುಗಳ ದ್ವೇಷಕಾರ್ಯವನ್ನು ಬೇರ್ಪಡಿಸಿ ನಮ್ಮನ್ನು ರಕ್ಷಿಸು.

## ವಿನಿಯೋಗಸಂಗ್ರಹ

1ಅನ್ನಾದಧಾತಿ ಸಮಿಧಮುದ್ಯಚ್ಛೇ2ದುತ್ ಋಚಾನಿಲಮ್ ।
3ಪ್ರೇತ್ಪ್ರಯಾತ್ಯಥ4 ಸಮಿಧಾ ಗಮ್ಯಂತೇ ಸಮಿಧಂ ಕ್ಷಿಪೇತ್ ॥
ರಾಜನ್ಯಶ್ಚೇತ್5 ಪ್ರೇತಿ ಮಂತ್ರ 6-8ಆಪೋ ಭಸ್ಮಾಪ್ಸು ವೇಶಯೇತ್ ।
ತ್ರಿಭಿಃ ಪ್ರಸೇತ್ರಿ9-10 ತು ದ್ವಾಭ್ಯಾಮುಖಾಯಾಂ ಸ್ಥಾಪಯೇದಮುಮ್ ॥
11-12ಪುನರ್ದ್ವಾಭ್ಯಾಮುದ್ವೈತ್ಯಗ್ನಿಂ 13ಪುನಸ್ತ್ವೇತಿ ಸಮಿಂಧಯೇತ್ ।
14-15ಬೋಧ ದ್ವಾಭ್ಯಾಮುಪಸ್ಥಾನಂ ಮಂತ್ರಾಃ ಪಂಚದಶೇರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–15

## ॥ ಚತುರ್ಥೋಽನುವಾಕಃ ॥

ಅಪೇತ ವೀತ ವಿ ಚ ಸರ್ಪತಾತೋ ಯೇಽತ್ರ ಸ್ಥ

ಪುರಾಣಾ ಯೇ ಚ ನೂತನಾಃ ।

---

ಅಪೇತಿ । ಇತ । ವೀತಿ । ಇತ । ವೀತಿ । ಚ । ಸರ್ಪತ । ಅತಃ । ಯೇ । ಅತ್ರ । ಸ್ಥ ।

ಪುರಾಣಾಃ । ಯೇ । ಚ । ನೂತನಾಃ ॥

---

ಮೂರನೆಯ ಅನುವಾಕದಲ್ಲಿ ಚಯನಪ್ರದೇಶಕ್ಕೆ ಉಖ್ಯಾಗ್ನಿನಯನವು ಹೇಳಲ್ಪಟ್ಟಿತು. ಈ ನಾಲ್ಕನೆಯ ಅನುವಾಕದಲ್ಲಿ ಗಾರ್ಹಪತ್ಯಚಯನವು ಹೇಳಲ್ಪಟ್ಟಿದೆ.

---

| ಮಂತ್ರ | ವಿನಿಯೋಗ |
|---|---|
| ಅಪೇತ...ಲೋಕಮಸ್ಮೈ ॥ | ದೀಕ್ಷಾಪರಿಮಾಣಾನಂತರ ಒಂದು ಮಾರಿನಷ್ಟು ಚೌಕ ಅಥವಾ ವರ್ತುಲಾಕಾರವಾಗಿ ಪ್ರದೇಶ ವನ್ನು ಕೆತ್ತಲು |

---

[ಎಲೈ! ಯಮಭೃತ್ಯರೇ!] **ಅತ್ರ**=ಈ ದೇವಯಜನಪ್ರದೇಶದಲ್ಲಿ; **ಪುರಾಣಾಃ ಯೇ**=ಪ್ರಾಚೀನರಾದ ಯಾವ ನೀವು; **ಸ್ಥ**=ಇರುವಿರೋ; **ಚ**=ಮತ್ತು; **ಯೇ ನೂತನಾಃ ಸ್ಥ**=ನವೀನರಾದ ಯಾವ ನೀವು ಇರುವಿರೋ; [ಅಂತಹ ನೀವು] **ಅತಃ**=ಈ ಪ್ರದೇಶದಿಂದ; **ಅಪ ಇತ**=ಹೊರಟುಹೋಗಿರಿ; **ವಿ ಇತ**=ತುಂಬ ದೂರಕ್ಕೆ ಹೋಗಿರಿ; **ವಿ ಚ ಸರ್ಪತ**=ಬೇರೆ ಬೇರೆಯ ಪ್ರದೇಶಕ್ಕೆ ಹೋಗಿರಿ.

---

ಯಮನು ಭೂಮಿಯ ಒಡೆಯನು. ಅವನು ಈ ಪ್ರದೇಶವನ್ನು ನಮಗೆ ಕೊಟ್ಟಿರುವನು. ಆದುದರಿಂದ ಯಮದೂತರು ಈ ಪ್ರದೇಶವನ್ನು ಬಿಟ್ಟು ತೊಲಗಲಿ.

ಅದಾದಿದಂ ಯಮೋಽವಸಾನಂ ಪೃಥಿವ್ಯಾ ಅಕ್ರನ್ನಿಮಂ ಪಿತರೋ ಲೋಕಮಸ್ಮೈ ॥ ಅಗ್ನೇರ್ಭಸ್ಮಾಸ್ಯಗ್ನೇಃ ಪುರೀಷಮಸಿ ಸಂಜ್ಞಾನಮಸಿ ಕಾಮಧರಣಂ

---

ಅದಾತ್ । ಇದಮ್ । ಯಮಃ । ಅವಸಾನಮಿತ್ಯವ-ಸಾನಮ್ । ಪೃಥಿವ್ಯಾಃ । ಅಕ್ರನ್ನ್ । ಇಮಮ್ । ಪಿತರಃ । ಲೋಕಮ್ । ಅಸ್ಮೈ ॥ ಅಗ್ನೇಃ । ಭಸ್ಮ । ಅಸಿ । ಅಗ್ನೇಃ । ಪುರೀಷಮ್ । ಅಸಿ । ಸಂಜ್ಞಾನಮಿತಿ ಸಮ್-ಜ್ಞಾನಮ್ । ಅಸಿ । ಕಾಮಧರಣಮಿತಿ ಕಾಮ-ಧರಣಮ್ ।

---

| ಮಂತ್ರ | ವಿನಿಯೋಗ |
|---|---|
| ಅಗ್ನೇಃ...ಪುರೀಷಮಸಿ ॥ | ಮರಳನ್ನು ಹಾಕುವುದಕ್ಕಾಗಿ |
| ಸಂಜ್ಞಾನಂ...ಭೂಯಾತ್ ॥ | ಉಪ್ಪು/ಚೌಳುಮಣ್ಣನ್ನು ದೇವಯಜನದಲ್ಲಿ ಹಾಕಲು |

---

**ಯಮಃ**=ಭೂಮಿಯ ಒಡೆಯನಾದ ಯಮನು; **ಇದಮ್ ಅವಸಾನಮ್**=ಈ ಪ್ರದೇಶವನ್ನು; **ಅದಾತ್**=ನಮಗೆ ಕೊಟ್ಟನು. **ಪೃಥಿವ್ಯಾಃ**=ಭೂಮಿಯ; **ಇಮಮ್ ಲೋಕಮ್**=ಈ ಭೂಪ್ರದೇಶವನ್ನು; **ಪಿತರಃ**=ಪಿತೃದೇವತೆಗಳು; **ಅಸ್ಮೈ**=ಈ ಯಜಮಾನನಿಗಾಗಿ; **ಅಕ್ರನ್**=[ದೇವಯಜನವನ್ನಾಗಿ] ಮಾಡಿದರು. 🔔 [ಎಲೈ! ಮರಳೇ!] **ಅಗ್ನೇಃ**=ಅಗ್ನಿಯ; **ಭಸ್ಮ ಅಸಿ**=ಪ್ರಕಾಶವಾಗಿರುತ್ತೀಯೆ. **ಅಗ್ನೇಃ**=ಅಗ್ನಿಯ; **ಪುರೀಷಮ್ ಅಸಿ**=ಆಶ್ರಯವಾದ ಧೂಳೂ ಆಗಿರುತ್ತೀಯೆ. 🔔 [ಎಲೈ! ಚೌಳುಪ್ಪಿನ ಧೂಳೇ!] **ಸಂಜ್ಞಾನಮ್ ಅಸಿ**=[ವಾಸನೆಯಿಂದ ಪಶುಗಳ] ಒಳ್ಳೆಯ ಜ್ಞಾನಕ್ಕೆ ವಿಷಯವಾಗಿರುವೆ; **ಕಾಮಧರಣಮ್**=[ಯಜ್ಞಸಂಬಂಧಿಯಾದುದರಿಂದ] ಫಲಗಳನ್ನು ಧರಿಸಿದವನು ನೀನು.

ಮಯಿ ತೇ ಕಾಮಧರಣಂ ಭೂಯಾತ್ ॥ ಸಂ ಯಾ ವಃ ಪ್ರಿಯಾ ಸ್ತನುವ ಸ್ಸಂ ಪ್ರಿಯಾ ಹೃದಯಾನಿ ವಃ । ಆತ್ಮಾ ವೋ ಅಸ್ತು [ಅಸ್ತು(೧೪)] ಸಂಪ್ರಿಯಸ್ಸಂಪ್ರಿಯಾಸ್ತನುವೋ ಮಮ ॥

---

ಮಯಿ । ತೇ । ಕಾಮಧರಣಮಿತಿ ಕಾಮ-ಧರಣಮ್ । ಭೂಯಾತ್ ॥ ಸಮಿತಿ । ಯಾಃ । ವಃ । ಪ್ರಿಯಾಃ । ತನುವಃ । ಸಮಿತಿ । ಪ್ರಿಯಾ । ಹೃದಯಾನಿ । ವಃ ॥ ಆತ್ಮಾ । ವಃ । ಅಸ್ತು ।(೧೪)। ಸಂಪ್ರಿಯ ಇತಿ ಸಮ್-ಪ್ರಿಯಃ । ಸಂಪ್ರಿಯಾ ಇತಿ ಸಮ್-ಪ್ರಿಯಾಃ । ತನುವಃ । ಮಮ ॥

---

| ಮಂತ್ರ | ವಿನಿಯೋಗ |
|---|---|
| ಸಂ ಯಾ ವಃ...ಮಮ ॥ | ಸಿಕತೆಗಳನ್ನೂ ಊಷಗಳನ್ನೂ ಮಿಶ್ರಣ ಮಾಡಲು |

---

ತೇ=ನಿನ್ನ; ಕಾಮಧರಣಮ್=ಯಜ್ಞಫಲಧಾರಣೆಯು; ಮಯಿ=ನನ್ನಲ್ಲಿ; ಭೂಯಾತ್ =ಆಗಲಿ. ▲ [ಎಲೈ! ಮರಳು-ಉಪ್ಪುಗಳೇ!] ವಃ=ನಿಮಗೆ; ಯಾಃ ಪ್ರಿಯಾಃ ತನುವಃ=ಪ್ರಿಯವಾಗಿರುವ ಯಾವ ಶರೀರಗಳುಂಟೋ; [ಅವುಗಳು] ಸಮ್ ಸೃಜ್ಯಂತಾಮ್=ಚೆನ್ನಾಗಿ ಮಿಶ್ರವಾಗಲಿ. ವಃ=ನಿಮ್ಮ; ಪ್ರಿಯಾ ಹೃದಯಾನಿ=ಇಷ್ಟ ವಾದ ಹೃದಯಗಳು; ಸಮ್ ಸೃಜ್ಯಂತಾಮ್=ಚೆನ್ನಾಗಿ ಸೇರಿಕೊಳ್ಳಲಿ. ವಃ=ನಿಮ್ಮ; ಆತ್ಮಾ=ಆತ್ಮವು; ಸಂಪ್ರಿಯಃ ಅಸ್ತು=ಪರಸ್ಪರ ಪ್ರೀತಿಯುಕ್ತವಾಗಿರಲಿ; ಮಮ ತನುವಃ=ನನ್ನ ಶರೀರಗಳೂ; ಸಂಪ್ರಿಯಾಃ ಭವಂತು=ನಿಮಗೆ ಪ್ರಿಯವಾಗಿರಲಿ.

---

ಪಿತೃದೇವತೆಗಳು ಈ ಪ್ರದೇಶವನ್ನು ದೇವಯಜನವನ್ನಾಗಿ ಮಾಡಿರುತ್ತಾರೆ. ಆದುದ ರಿಂದ ಯಜ್ಞವಿರೋಧಿಗಳೂ ಯಮದೂತರೂ ಈ ಪ್ರದೇಶವನ್ನು ತೊರೆದು ದೂರಕ್ಕೆ ಹೊರಟುಹೋಗಲಿ.

ಎಲೈ! ಸಿಕತವೇ! ನೀನು ಅಗ್ನಿಯ ಪ್ರಕಾಶವೂ ಆಶ್ರಯವಾದ ಧೂಳಿಯೂ ಆಗಿರುವೆ.

ಅಯಗ್ಂ ಸೋ ಅಗ್ನಿರ್ಯಸ್ಮಿನ್ತ್ಸೋಮಮಿಂದ್ರಸ್ಸುತಂ

ದಧೇ ಜಠರೇ ವಾವಶಾನಃ । ಸಹಸ್ರಿಯಂ ವಾಜಮತ್ಯಂ ನ

ಸಪ್ತಿಗ್ಂ ಸಸವಾನ್ತ್ಸನ್ತ್ಸ್ತೂಯಸೇ ಜಾತವೇದಃ ॥

---

ಅಯಮ್ । ಸಃ । ಅಗ್ನಿಃ । ಯಸ್ಮಿನ್ನ್ । ಸೋಮಮ್ । ಇಂದ್ರಃ । ಸುತಮ್ । ದಧೇ ।

ಜಠರೇ । ವಾವಶಾನಃ ॥ ಸಹಸ್ರಿಯಮ್ । ವಾಜಮ್ । ಅತ್ಯಮ್ । ನ । ಸಪ್ತಿಮ್ ।

ಸಸವಾನಿತಿ ಸ–ಸವಾನ್ । ಸನ್ನ್ । ಸ್ತೂಯಸೇ । ಜಾತವೇದ ಇತಿ ಜಾತ–ವೇದಃ ॥

---

| ಮಂತ್ರ | ವಿನಿಯೋಗ |
|---|---|
| ಅಯಗ್ಂ ಸೋ...ಜಾತವೇದಃ ॥ | ಗಾರ್ಹಪತ್ಯಚಿತಿಯ ಪೂರ್ವಭಾಗದಲ್ಲಿ ನಾಲ್ಕು ಇಟ್ಟಿಗೆಗಳನ್ನು ಜೋಡಿಸಲು ಮೊದಲನೆಯ ಮಂತ್ರ. |

---

▲ **ಯಸ್ಮಿನ್**=ಯಾವ ಗಾರ್ಹಪತ್ಯಚಯನಾಗ್ನಿಯಲ್ಲಿ; **ವಾವಶಾನಃ**=[ಹವಿಸ್ಸುಗಳನ್ನು] ಬಯಸುವವನಾದ; **ಇಂದ್ರಃ**=ಇಂದ್ರದೇವನು; **ಸುತಮ್**=ಅಭಿಷವ ಮಾಡಲ್ಪಟ್ಟ; **ಸೋಮಮ್**=ಸೋಮನನ್ನು; **ಜಠರೇ**=ತನ್ನ ಹೊಟ್ಟೆಯಲ್ಲಿ; **ದಧೇ**=ಧರಿಸುವನೋ; **ಸಃ ಅಯಮ್ ಅಗ್ನಿಃ**=ಅಂತಹ ಈ ಅಗ್ನಿಯು [ಇಟ್ಟಿಗೆಗಳಿಂದ ಚಯನ ಮಾಡಲ್ಪಡುತ್ತಾನೆ] **ಜಾತವೇದಃ**=ಎಲ್ಲವನ್ನೂ ತಿಳಿದಿರುವ ಅಗ್ನಿಯೇ! **ಸಹಸ್ರಿಯಮ್**=ಸಹಸ್ರಧನಕ್ಕೆ ಸಮಾನವಾದ; **ಅತ್ಯಮ್ ಸಪ್ತಿಮ್ ನ**=ಶೀಘ್ರಗಮನವುಳ್ಳ ಕುದುರೆಯಂತೆ ಇರುವ; **ವಾಜಮ್**=ಅನ್ನವನ್ನು; **ಸಸವಾನ್ ಸನ್**=ಕೊಡುವವನಾಗಿದ್ದುಕೊಂಡು; **ಸ್ತೂಯಸೇ**=[ಯಜಮಾನರಿಂದ]ಸ್ತುತಿಸಲ್ಪಡುತ್ತೀಯೆ.

---

ಎಲೈ! ಧೂಳಿಯೇ! ನೀನು ಪಶುಗಳ ಜ್ಞಾನಕ್ಕೆ ವಿಷಯವಾಗಿ, ಯಜ್ಞಫಲವನ್ನು ಧರಿಸಿರುವೆ. ನನ್ನಲ್ಲಿ ಆ ಯಜ್ಞಫಲಧಾರಣೆಯಾಗಲಿ.

ಈ ಮಂತ್ರದಲ್ಲಿ ಸಿಕತಾ, ಊಷ–ಮುಂತಾದವುಗಳ ಅಭಿಮಾನಿದೇವತೆಗಳನ್ನು

ಅಗ್ನೇ ದಿವೋ ಅರ್ಣಮಚ್ಛಾ ಜಿಗಾಸ್ಯಚ್ಛಾ ದೇವಾಗ್ಂ

ಊಚಿಷೇ ಧಿಷ್ಣಿಯಾ ಯೇ । ಯಾಃ ಪರಸ್ತಾದ್ರೋಚನೇ

ಸೂರ್ಯಸ್ಯ ಯಾಶ್ಚಾವಸ್ತಾದುಪತಿಷ್ಠಂತ ಆಪಃ ॥

---

ಅಗ್ನೇ । ದಿವಃ । ಅರ್ಣಮ್ । ಅಚ್ಛ । ಜಿಗಾಸಿ । ಅಚ್ಛ । ದೇವಾನ್ । ಊಚಿಷೇ । ಧಿಷ್ಣಿಯಾಃ । ಯೇ ॥ ಯಾಃ । ಪರಸ್ತಾತ್ । ರೋಚನೇ । ಸೂರ್ಯಸ್ಯ । ಯಾಃ । ಚ । ಅವಸ್ತಾತ್ । ಉಪತಿಷ್ಠಂತ ಇತ್ಯುಪ-ತಿಷ್ಠಂತೇ । ಆಪಃ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇ...ಆಪಃ ॥ | ಇಟ್ಟಿಗೆಗಳನ್ನು ಜೋಡಿಸಲು ಎರಡನೆಯ ಮಂತ್ರ. |

---

▲ ಅಗ್ನೇ=ಇಷ್ಟಕಾರೂಪಾಗ್ನಿಯೇ! ದಿವಃ=ಅಂತರಿಕ್ಷದಿಂದ; ಅರ್ಣಮ್=ನೀರನ್ನು; ಅಚ್ಛ ಜಿಗಾಸಿ=ಅಭಿಮುಖವಾಗಿ ಹೊಂದುತ್ತೀಯೆ. ಯೇ ದೇವಾಃ=ಯಾವ ದೇವತೆಗಳು; ಧಿಷ್ಣಿಯಾಃ=ಧಿಷ್ಣಿಯವನ್ನು ಆಧಾರವನ್ನಾಗಿ ಹೊಂದಿರುವರೋ; ತಾನ್ ದೇವಾನ್=ಆ ದೇವತೆಗಳನ್ನು; ಅಚ್ಛ ಊಚಿಷೇ=[ಹವ್ಯಗಳನ್ನು ಸ್ವೀಕರಿಸಿರೆಂದು] ಅಭಿಮುಖವಾಗಿ ಹೇಳುತ್ತೀಯೆ. ಯಾಃ=ಯಾವ ನೀರುಗಳು; ಸೂರ್ಯಸ್ಯ ರೋಚನೇ=ಸೂರ್ಯಮಂಡಲದಲ್ಲಿ ಇವೆಯೋ; ಯಾಃ ಪರಸ್ತಾತ್=ಯಾವ ನೀರುಗಳು ಮೇಲ್ಭಾಗದಲ್ಲಿವೆಯೋ; ಯಾಃ ಚ ಅವಸ್ತಾತ್=ಯಾವುವು ಕೆಳಗಿವೆಯೋ; ತಾಃ ಆಪಃ ಉಪತಿಷ್ಠಂತೇ=[ಆ] ನೀರುಗಳೆಲ್ಲವೂ [ನೀನು ಉಪಹಿತನಾದಾಗ ಇಲ್ಲಿಗೆ] ಬರುತ್ತವೆ.

---

ಪ್ರಾರ್ಥಿಸಲಾಗಿದೆ. ನಿಮ್ಮ ಶರೀರ-ಮನಸ್ಸುಗಳು ಚೆನ್ನಾಗಿ ಹೊಂದಿಕೊಳ್ಳಲಿ. ನನ್ನ ಶರೀರಗಳೂ ನಿಮಗೆ ಪ್ರಿಯವಾಗಿರಲಿ.

ಇಂದ್ರನು ಗಾರ್ಹಪತ್ಯಚಯನಾಗ್ನಿಯಲ್ಲಿ ಸಮರ್ಪಿಸುವ ಸೋಮರಸವನ್ನು ಬಯಸಿ ಕುಡಿದು ತನ್ನ ಜಠರದಲ್ಲಿ ಧರಿಸುತ್ತಾನೆ. ಅಂತಹ ಗಾರ್ಹಪತ್ಯಾಗ್ನಿಯ ಚಯನವನ್ನು

ಅಗ್ನೇ ಯತ್ತೇ ದಿವಿ ವರ್ಚಃ ಪೃಥಿವ್ಯಾಂ ಯದೋಷಧೀಷ್ವ

[...ಷಧೀಷು(೧೫)ಅಪ್ಸು ವಾ]ಪ್ಸು ವಾ ಯಜತ್ರ । ಯೇನಾಂತ

ರಿಕ್ಷಮುರ್ವಾತತನ್ಥ ತ್ವೇಷಸ್ಸ ಭಾನುರರ್ಣವೋ ನೃಚಕ್ಷಾಃ ॥

---

ಅಗ್ನೇ । ಯತ್ । ತೇ । ದಿವಿ । ವರ್ಚಃ । ಪೃಥಿವ್ಯಾಮ್ । ಯತ್ । ಓಷಧೀಷು ।

(೧೫)। ಅಪ್ಸ್ವಿತ್ಯಪ್–ಸು । ವಾ । ಯಜತ್ರ ॥ ಯೇನ । ಅಂತರಿಕ್ಷಮ್ । ಉರು ।

ಆತತನ್ಥೇತ್ಯಾ–ತತನ್ಥ । ತ್ವೇಷಃ । ಸಃ । ಭಾನುಃ । ಅರ್ಣವಃ । ನೃಚಕ್ಷಾ ಇತಿ ನೃ–

ಚಕ್ಷಾಃ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇ ಯತ್ತೇ...ನೃಚಕ್ಷಾಃ ॥ | ಇಷ್ಟಕೋಪಧಾನದ ಮೂರನೆಯ ಮಂತ್ರ. |

---

🔔 **ಯಜತ್ರ**=ಯಾಗನಿಷ್ಪಾದಕನಾದ; **ಅಗ್ನೇ**=ಅಗ್ನಿದೇವನೇ! **ತೇ**=ನಿನ್ನ; **ದಿವಿ ಯತ್ ವರ್ಚಃ**=ದ್ಯುಲೋಕದಲ್ಲಿ ಸೂರ್ಯರೂಪವಾದ ಯಾವ ತೇಜಸ್ಸು ಇದೆಯೋ; **ಪೃಥಿವ್ಯಾಮ್**=ಭೂಮಿಯಲ್ಲಿ; **ಯತ್ ಓಷಧೀಷು**=ಯಾವ ತೇಜಸ್ಸು ಸಸ್ಯವರ್ಗದಲ್ಲಿ ಫಲಪಾಕಹೇತುವಾಗಿ ಇದೆಯೋ; **ಅಪ್ಸು ವಾ**=ಸಮುದ್ರದಲ್ಲಿ ಬಡಬಾಗ್ನಿರೂಪವಾಗಿದೆಯೋ; **ಯೇನ**=ಯಾವ ವಿದ್ಯುದ್ರೂಪವಾದ ತೇಜಸ್ಸಿನಿಂದ; **ಉರು ಅಂತರಿಕ್ಷಮ್**=ವಿಶಾಲವಾದ ಅಂತರಿಕ್ಷವನ್ನು; **ಆತತಂಥ**=ವ್ಯಾಪಿಸಿರುವೆಯೋ/ಬೆಳಗುವೆಯೋ; **ಸಃ**=ಆ; **ತ್ವೇಷಃ**=ಪ್ರಕಾಶಯುಕ್ತವಾದ; **ಅರ್ಣವಃ**=ಸಮುದ್ರದಂತೆ ವಿಶಾಲವಾದ; **ಭಾನುಃ**=ಪ್ರಕಾಶಕವಾದ ತೇಜಃಸಮೂಹವು; **ನೃಚಕ್ಷಾಃ**=ಮನುಷ್ಯರನ್ನು ಪ್ರಖ್ಯಾತಿಗೊಳಿಸುತ್ತದೆ. [ಅದನ್ನು ಉಪಧಾನ ಮಾಡುತ್ತೇವೆ]

---

**ಈಗ ಮಾಡುತ್ತೇವೆ. ಅಗ್ನಿಯು ಸಹಸ್ರಸಂಖ್ಯೆಯ ಧನಕ್ಕೆ ಸಮಾನವಾದ ಕುದುರೆಯಂತೆ ಶೀಘ್ರಗತಿಯುಳ್ಳ ಅನ್ನವನ್ನು ಯಜಮಾನರಿಗೆ ಕೊಡುತ್ತಾನೆ. ಅವರು ಅಗ್ನಿಯನ್ನು**

ಪುರೀಷ್ಯಾಸೋ ಅಗ್ನಯಃ ಪ್ರಾವಣೇಭಿಸ್ಸಜೋಷಸಃ ।
ಜುಷಂತಾಗ್ಂ ಹವ್ಯಮಾಹುತಮನಮೀವಾ ಇಷೋ
ಮಹೀಃ ॥

---

ಪುರೀಷ್ಯಾಸಃ । ಅಗ್ನಯಃ । ಪ್ರಾವಣೇಭಿರಿತಿ ಪ್ರ-ವನೇಭಿಃ । ಸಜೋಷಸ ಇತಿ ಸ-ಜೋಷಸಃ ॥ ಜುಷಂತಾಮ್ । ಹವ್ಯಮ್ । ಆಹುತಮಿತ್ಯಾ-ಹುತಮ್ । ಅನಮೀವಾಃ । ಇಷಃ । ಮಹೀಃ ॥

---

| ಮಂತ್ರ | ವಿನಿಯೋಗ |
|---|---|
| ಪುರೀಷ್ಯಾಸೋ...ಮಹೀಃ ॥ | ಗಾರ್ಹಪತ್ಯೇಷ್ಟಕೋಪಧಾನದ ನಾಲ್ಕನೆಯ ಹಾಗೂ ಕೊನೆಯ ಮಂತ್ರ. |

---

ಪುರೀಷ್ಯಾಸಃ=ಧೂಳಿಗಳಲ್ಲಿ ಉತ್ಪನ್ನರಾಗಿರುವ; ಪ್ರಾವಣೇಭಿಃ=ಪರಸ್ಪರ ಹೊಂದಿಕೊಳ್ಳುವ ಸ್ವಭಾವವುಳ್ಳ ಮನಸ್ಸುಗಳಿಂದ; ಸಜೋಷಸಃ=ಸಮಾನಪ್ರೀತಿಯುಳ್ಳವರಾದ; ಅನಮೀವಾಃ=ರೋಗರಹಿತವಾದ; ಇಷಃ=ಅಭೀಷ್ಟಪ್ರದವಾದ; ಮಹೀಃ=ಪ್ರೌಢವಾದ; ಅಗ್ನಯಃ=ಅಗ್ನಿಗಳು; ಆಹುತಮ್=ಹೋಮ ಮಾಡಿದ; ಹವ್ಯಮ್=ಹವಿಸ್ಸುಗಳನ್ನು; ಜುಷಂತಾಮ್=ಸೇವಿಸಲಿ.

---

ಸ್ತುತಿಸುತ್ತಾರೆ. ಆತನು ನಮ್ಮನ್ನು ಅನುಗ್ರಹಿಸಲಿ.

ಅಗ್ನಿದೇವನೇ! ನೀನು ಆಹುತಿಗಳಿಂದ ಮಳೆಯು ಬರುವಂತೆ ಮಾಡುತ್ತೀಯೆ. ನೀನು ಧಿಷ್ಣಿಯಾಧಾರರಾದ ದೇವತೆಗಳಿಗೆ ಇಲ್ಲಿಗೆ ಬಂದು ಹವಿಸ್ಸನ್ನು ಸ್ವೀಕರಿಸುವಂತೆ ಹೇಳುತ್ತೀಯೆ.

ನೀನು ಇಲ್ಲಿಗೆ ಬರಲಾಗಿ ಸೂರ್ಯಮಂಡಲದಲ್ಲಿರುವ, ಸೂರ್ಯಮಂಡಲದ ಮೇಲೆ ಮತ್ತು ಕೆಳಗೆ ಇರುವ ನೀರುಗಳೆಲ್ಲವೂ ಇಲ್ಲಿಗೆ ಬರುತ್ತವೆ.

ಯಾಗನಿಷ್ಪಾದಕನಾದ ಅಗ್ನಿಯೇ! ನಿನ್ನ ತೇಜಸ್ಸು ಸೂರ್ಯರೂಪದಿಂದ ದ್ಯುಲೋಕ

ಇಡಾಮಗ್ನೇ ಪುರುದಗ್ಂಸಗ್ಂ ಸನಿಂ ಗೋಶ್ಶಶ್ವತ್ತಮಗ್ಂ

ಹವಮಾನಾಯ ಸಾಧ । ಸ್ಯಾನ್ನಸ್ಸೂನುಸ್ತನಯೋ

ವಿಜಾವಾಽಗ್ನೇ ಸಾ ತೇ ಸುಮತಿರ್ಭೂತ್ವಸ್ಮೇ ॥

---

ಇಡಾಮ್ । ಅಗ್ನೇ । ಪುರುದಗ್ಂಸಮಿತಿ ಪುರು-ದಗ್ಂಸಮ್ । ಸನಿಮ್ । ಗೋಃ । ಶಶ್ವತ್ತಮಮಿತಿ ಶಶ್ವತ್-ತಮಮ್ । ಹವಮಾನಾಯ । ಸಾಧ ॥ ಸ್ಯಾತ್ । ನಃ । ಸೂನುಃ । ತನಯಃ । ವಿಜಾವೇತಿ ವಿ-ಜಾವಾ । ಅಗ್ನೇ । ಸಾ । ತೇ । ಸುಮತಿರಿತಿ ಸು-ಮತಿಃ । ಭೂತು । ಅಸ್ಮೇ ಇತಿ ॥

---

| ಮಂತ್ರ | ವಿನಿಯೋಗ |
|---|---|
| ಇಡಾಮಗ್ನೇ...ಅಸ್ಮೇ ॥ | ಹಿಂದಿನ ಇಷ್ಟಕೆಗಳ ಪೂರ್ವಭಾಗದಲ್ಲಿ ಎರಡು ಇಷ್ಟಕೋಪಧಾನವನ್ನು ಮಾಡುವಾಗ ಮೊದಲನೆಯ ಮಂತ್ರ. |

---

**ಅಗ್ನೇ**=ಅಗ್ನಿಯೇ! [ನೀನು] **ಹವಮಾನಾಯ**=ಹೋಮ ಮಾಡಲು ಪ್ರವೃತ್ತನಾದ ಯಜಮಾನನಿಗೆ; **ಇಡಾಮ್**=ಹೊಗಳಲ್ಪಡುವ; **ಪುರುದಂಸಮ್**=ನೋಡಲು ಬಲು ಚೆನ್ನಾಗಿರುವ; **ಶಶ್ವತ್ತಮಮ್**=ಯಾವಾಗಲೂ ವಿಚ್ಛಿತ್ತಿಯಿಲ್ಲದಿರುವ; **ಗೋಃ ಸನಿಮ್**=ಗವಾದಿ ಪಶುಗಳ ದಾತೃವನ್ನು; [ಕೊಡತಕ್ಕವನಾದ ಮಗನನ್ನು] **ಸಾಧ**= ಸಂಪಾದಿಸಿ ಕೊಡು; **ಅಗ್ನೇ**=ಅಗ್ನಿಯೇ! **ವಿಜಾವಾ**=ವಿವಿಧವಾದ ವಸ್ತುಗಳನ್ನು ಉತ್ಪಾದಿಸುವ/ಪ್ರಜೋತ್ಪಾದಕನಾದ; **ತನಯಃ ಸೂನುಃ**=ಔರಸಪುತ್ರನು; **ನಃ ಸ್ಯಾತ್**=ನಮಗೆ ಜನಿಸಲಿ. **ತೇ ಸಾ ಸುಮತಿಃ**=ಆ ನಿನ್ನ ಅನುಗ್ರಹಬುದ್ಧಿಯು; **ಅಸ್ಮೇ**=ನಮ್ಮಲ್ಲಿ; **ಭೂತು**=ಉಂಟಾಗಲಿ.

---

ದಲ್ಲಿ ಇದೆ.

ಅಗ್ನಿರೂಪದಿಂದ ಭೂಮಿಯಲ್ಲಿಯೂ, ಫಲಪಾಕಕಾರಣವಾಗಿ ಓಷಧಿಗಳಲ್ಲಿಯೂ,

# ಅಯಂ ತೇ ಯೋನಿರ್ ಋತ್ವಿಯೋ ಯತೋ ಜಾತೋ ಅರೋಚಥಾಃ ।

---

ಅಯಮ್ । ತೇ । ಯೋನಿಃ । ಋತ್ವಿಯಃ । ಯತಃ । ಜಾತಃ । ಅರೋಚಥಾಃ ॥

---

| ಮಂತ್ರ | ವಿನಿಯೋಗ |
| --- | --- |
| ಅಯಂ ತೇ...ರಯಿಮ್ ॥ | ಎರಡನೆಯ ಇಷ್ಟಕೋಪಧಾನವನ್ನು ಮಾಡಲು. |

---

ಅಗ್ನೇ=ಅಗ್ನಿಯೇ! **ಅಯಮ್**=ಈ ಇಷ್ಟಕಾರೂಪವಾದ ಪದಾರ್ಥವು; **ತೇ ಯೋನಿಃ**=ನಿನ್ನ ಉತ್ಪತ್ತಿಸ್ಥಾನವಾಗಿದೆ. [ಇದು] **ಋತ್ವಿಯಃ**=ಋತುಕಾಲದ ಸ್ತ್ರೀ ಪುರುಷರ ಸಂಬಂಧಸಮಾನವಾಗಿದೆ. **ಯತಃ**=ಯಾವುದರಿಂದ; **ಜಾತಃ**=ಜನಿಸಿದವನಾಗಿ; **ಅರೋಚಥಾಃ**=ಪ್ರಕಾಶಿಸುತ್ತಿರುವೆಯೋ; [ಅದೇ ಇದು]

---

ಬಡಬಾಗ್ನಿರೂಪದಿಂದ ನೀರಿನಲ್ಲಿಯೂ ಇದೆ. ಮಿಂಚಿನ ರೂಪದಿಂದ ಅಂತರಿಕ್ಷವನ್ನು ಬೆಳಗುತ್ತದೆ. ಮಾನವರನ್ನು ಪ್ರಸಿದ್ಧಿಪಡಿಸುತ್ತದೆ. ಇಂತಹ ಅಗ್ನಿರೂಪವಾದ ಇಷ್ಟಕೆಯನ್ನು ಉಪಧಾನ ಮಾಡುತ್ತೇನೆ.

ಈ *ಅಗ್ನಿಗಳು ಧೂಳಿನಿಂದ ಉತ್ಪನ್ನವಾಗಿವೆ.* ಹೊಂದಿಕೊಳ್ಳುವ ಸ್ವಭಾವವುಳ್ಳವುಗಳು. ಅನ್ಯೋನ್ಯವಾಗಿ ಪ್ರೀತಿಯುಳ್ಳವುಗಳಾಗಿವೆ. ರೋಗರಹಿತವಾಗಿವೆ. ಇಷ್ಟಪ್ರಾಪ್ತಿಸಾಧನಗಳಾಗಿವೆ. ಇವು ನಾವು ಮಾಡುವ ಹೋಮಗಳ ಹವ್ಯಗಳನ್ನು ಸ್ವೀಕರಿಸಲಿ. ಇಂತಹ ಇಷ್ಟಕೆಯನ್ನು ನಾನು ಉಪಧಾನ ಮಾಡುತ್ತೇನೆ.

ಹೇ! ಅಗ್ನಿಯೇ! ನಮ್ಮ ಯಜಮಾನನು ಹವಿಸ್ಸುಗಳನ್ನು ನೀಡಲು ಪ್ರವೃತ್ತನಾಗಿರುತ್ತಾನೆ. ಅವನಿಗೆ ಗವಾದಿ ಪಶುಗಳನ್ನು ದಾನ ಮಾಡಲು ಸಮರ್ಥ ನಾದ ಪುತ್ರನನ್ನು ಕೊಡು. ಆತನು ಎಲ್ಲರ ಪ್ರಶಂಸೆಗೂ ಪಾತ್ರನಾಗಿರಲಿ. ಆತನು ದರ್ಶನೀಯನಾಗಿರಲಿ. ವಿಚ್ಛಿತ್ತಿ ಇಲ್ಲದೆ ಕಾರ್ಯಪ್ರವೃತ್ತನಾಗಿರಲಿ. ಸಂತತಿಯನ್ನು ಮುಂದುವರೆಸುವ ಔರಸಪುತ್ರನು ನಮಗೆ ನಿನ್ನ ಅನುಗ್ರಹದಿಂದ ಜನಿಸಲಿ. ಇಂತಹ ನಿನ್ನ ಅನುಗ್ರಹ

---

* ಈ ಪ್ರಸಂಗದಲ್ಲಿ ಇಷ್ಟಕೆಗಳಿಗೆ ಸಾಧನವಾದ ಮಣ್ಣು, ಇಟ್ಟಿಗೆ, ಅವುಗಳಿಂದ ನಿರ್ಮಿತವಾದ ಚಿತಿ, ಅಲ್ಲಿ ಹೋಮಾರ್ಥವಾಗಿ ಸ್ಥಾಪಿಸುವ ಅಗ್ನಿ, ಇವೆಲ್ಲವನ್ನೂ ಅಗ್ನಿಯೆಂದೇ ಹೇಳಲಾಗುವುದು. ಆದುದರಿಂದ ಇಲ್ಲಿ ಪುರೀಷ್ಯಾಸಃ ಎಂದು ಅಗ್ನಿಯನ್ನೇ ಹೇಳಲಾಗಿದೆ.

**ತಂ ಜಾನನ್ನ [ಜಾನನ್ನ್(ಗಂ)ಅಗ್ನ] ಗ್ನ ಆ ರೋಹಾಥಾ ನೋ ವರ್ಧಯಾ ರಯಿಮ್ ॥ ಚಿದಸಿ ತಯಾ ದೇವತಯಾಽಂಗಿ-ರಸ್ವದ್ಧ್ರುವಾ ಸೀದ ಪರಿಚಿದಸಿ ತಯಾ ದೇವತಯಾಽಂಗಿರಸ್ವ**

ತಮ್ । ಜಾನನ್ನ್ ।(ಗಂ)। ಅಗ್ನೇ । ಏತಿ । ರೋಹ । ಅಥ । ನಃ । ವರ್ಧಯ । ರಯಿಮ್ ॥ ಚಿತ್ । ಅಸಿ । ತಯಾ । ದೇವತಯಾ । ಅಂಗಿರಸ್ವತ್ । ಧ್ರುವಾ । ಸೀದ । ಪರಿಚಿದಿತಿ ಪರಿ–ಚಿತ್ । ಅಸಿ । ತಯಾ । ದೇವತಯಾ । ಅಂಗಿರಸ್ವತ್ ।

| ಮಂತ್ರ | ವಿನಿಯೋಗ |
|---|---|
| **ಚಿದಸಿ...ಸೀದ ॥** | ಮೊದಲಿನ ಇಟ್ಟಿಗೆಗಳ ಪಶ್ಚಿಮಭಾಗದಲ್ಲಿ ಎರಡು ಇಷ್ಟಕೆಗಳ ಉಪಧಾನದಲ್ಲಿ ಪ್ರಥಮೇಷ್ಟಕೋಪಧಾನಕ್ಕಾಗಿ |
| **ಪರಿಚಿದಸಿ...ಸೀದ ॥** | ದ್ವಿತೀಯೇಷ್ಟಕೋಪಧಾನಕ್ಕಾಗಿ |

**ತಮ್ ಜಾನನ್**=ಅದನ್ನು ತಿಳಿದವನಾಗಿ; **ಆರೋಹ**=ಇಷ್ಟಕೆಯನ್ನು ಹೊಂದು; **ಅಥ**=ಅನಂತರ; **ನಃ**=ನಮ್ಮ; **ರಯಿಮ್**=ಧನವನ್ನು; **ವರ್ಧಯ**=ವೃದ್ಧಿಗೊಳಿಸು. ▲ [ಎಲೈ! ಇಷ್ಟಕೆಯೇ!] **ಚಿತ್ ಅಸಿ**=ಭೋಗಗಳನ್ನು ಸಂಪಾದಿಸಿಕೊಡುವವಳಾಗಿದ್ದೀಯೆ. **ತಯಾ ದೇವತಯಾ**=ಆ ಅಭಿಮಾನಿದೇವತೆಯಿಂದ ಅನುಗೃಹೀತಳಾಗಿ; **ಅಂಗಿರಸ್ವತ್**=ಅಂಗಿರಸರು ಇಟ್ಟಿರುವ ಇಷ್ಟಕೆಯಂತೆ; **ಧ್ರುವಾ ಸೀದ**=ಸ್ಥಿರವಾಗಿ ದೃಢವಾಗಿರು. ▲ [ಎಲೈ ಇಷ್ಟಕೆಯೇ! ನೀನು] **ಪರಿಚಿತ್ ಅಸಿ**=ಎಲ್ಲ ಕಡೆಗಳಿಂದಲೂ ಭೋಗಗಳನ್ನು ಸಂಪಾದಿಸಿಕೊಡತಕ್ಕವಳಾಗಿದ್ದೀಯೆ. **ತಯಾ ದೇವತಯಾ**=ನಿನ್ನ ಅಭಿಮಾನಿದೇವತೆಯಿಂದ ಅನುಜ್ಞಾತಳಾದ ನೀನು; **ಅಂಗಿರಸ್ವತ್**=ಅಂಗಿರಸರು

ಬುದ್ಧಿಯು ನಮ್ಮ ಮೇಲಿರಲಿ. ಇದಕ್ಕಾಗಿ ಈ ಇಷ್ಟಕೆಯನ್ನು ಉಪಧಾನ ಮಾಡುತ್ತೇನೆ.

ಧ್ರುವಾ ಸೀದ* ಲೋಕಂ ಪೃಣ ಛಿದ್ರಂ ಪೃಣಾಥೋ ಸೀದ ಶಿವಾ ತ್ವಮ್ ॥ ಇಂದ್ರಾಗ್ನೀ ತ್ವಾ ಬೃಹಸ್ಪತಿರಸ್ಮಿನ್, ಯೋನಾ ವಸೀಷದನ್ ॥

ಧ್ರುವಾ । ಸೀದ । ಲೋಕಮ್ । ಪೃಣ । ಛಿದ್ರಮ್ । ಪೃಣ । ಅಥೋ ಇತಿ । ಸೀದ । ಶಿವಾ । ತ್ವಮ್ ॥ ಇಂದ್ರಾಗ್ನೀ ಇತೀಂದ್ರ-ಅಗ್ನೀ । ತ್ವಾ । ಬೃಹಸ್ಪತಿಃ । ಅಸ್ಮಿನ್ । ಯೋನೌ । ಅಸೀಷದನ್ ॥

| ಮಂತ್ರ | ವಿನಿಯೋಗ |
|---|---|
| ಲೋಕಂ ಪೃಣ...ಅಸೀಷದನ್ ॥ | ✱ ಲೋಕಂಪೃಣೇಷ್ಟಕೋಪಧಾನಕ್ಕಾಗಿ |

ಉಪಧಾನ ಮಾಡಿದ ಇಷ್ಟಕೆಯಂತೆ; **ಧ್ರುವಾ ಸೀದ**=ಸ್ಥಿರಳಾಗಿರು. [ನಿನ್ನನ್ನು ಉಪಧಾನ ಮಾಡುತ್ತೇನೆ] 🔔 [ಎಲೈ! ಲೋಕಂಪೃಣೇಷ್ಟಕೆಯೇ!] **ಲೋಕಮ್ ಪೃಣ**=[ಇಟ್ಟಿಗೆಗಳ] ಮಧ್ಯಪ್ರದೇಶಗಳನ್ನು ಪೂರ್ಣಗೊಳಿಸು; **ಛಿದ್ರಮ್ ಪೃಣ**= ಬಿಟ್ಟಿರುವ ಮಧ್ಯದ ರಂಧ್ರಗಳನ್ನು ತುಂಬಿಸು. **ಅಥೋ**=ಮತ್ತು; **ತ್ವಮ್**=ನೀನು; **ಶಿವಾ**=ಶಾಂತಳಾಗಿ; **ಸೀದ**=ಇರು. **ಇಂದ್ರಾಗ್ನೀ, ಬೃಹಸ್ಪತಿಃ**=ಇಂದ್ರಾಗ್ನಿದೇವತೆಗಳೂ, ಬೃಹಸ್ಪತಿದೇವನೂ; **ಅಸ್ಮಿನ್ ಯೋನೌ**=ಈ ಪ್ರದೇಶದಲ್ಲಿ; **ತ್ವಾ**=ನಿನ್ನನ್ನು; **ಅಸೀಷದನ್**=ಮೊದಲು ಸಾದನೆ ಮಾಡಿರುತ್ತಾರೆ.

**ಇಷ್ಟಕಾರೂಪವಾದ ಪದಾರ್ಥವು ಅಗ್ನಿಯ ಉತ್ಪತ್ತಿಸ್ಥಾನವಾಗಿದೆ. ಅಗ್ನಿಯು ಇದನ್ನು ತಿಳಿದು ನಮ್ಮನ್ನು ಹೊಂದಿ, ನಮ್ಮ ಧನವನ್ನು ವೃದ್ಧಿಗೊಳಿಸಲಿ.**

* ಎಲ್ಲಾ ಇಷ್ಟಕೋಪಧಾನಮಂತ್ರಗಳಲ್ಲಿಯೂ 'ತಯಾ ದೇವತಯಾಂಗಿರಸ್ವದ್ಧ್ರುವಾ ಸೀದ' ಎಂಬ ಭಾಗವನ್ನು ಸೇರಿಸಿಕೊಳ್ಳಬೇಕು.

✱ ಇಷ್ಟಕೆಗಳ ಮಧ್ಯದಲ್ಲಿರುವ ಸ್ಥಳವನ್ನು ತುಂಬುವ ಇಷ್ಟಕೆಗಳು 'ಲೋಕಂಪೃಣೇಷ್ಟಕೆ' ಗಳು. ಇವು ಹದಿಮೂರು. ಎರಡೆರಡು ಮಂತ್ರಗಳಿಂದ ಒಂದೊಂದು ಇಷ್ಟಕೋಪಧಾನ.

ತಾ ಅಸ್ಯ ಸೂದದೋಹಸಸ್ಸೋಮಗ್ಂ ಶ್ರೀಣಂತಿ ಪೃಶ್ನಯಃ।

ಜನ್ಮನ್ದೇವಾನಾಂ ವಿಶಸ್ತ್ರಿಷ್ವಾ ರೋಚನೇ ದಿವಃ ॥ [೧೭–4]

[ಅಸ್ಮೋ್ವಷಧೀಷು ಜಾನನ್ನಷ್ಟಾಚತ್ವಾರಿಗ್ಂಶಚ್ಚ ॥]

---

ತಾಃ । ಅಸ್ಯ । ಸೂದದೋಹಸ ಇತಿ ಸೂದ–ದೋಹಸಃ । ಸೋಮಮ್ । ಶ್ರೀಣಂತಿ । ಪೃಶ್ನಯಃ ॥ ಜನ್ಮನ್ನ್ । ದೇವಾನಾಮ್ । ವಿಶಃ । ತ್ರಿಷು । ಏತಿ । ರೋಚನೇ । ದಿವಃ ॥ (೧೭) ॥

---

| ಮಂತ್ರ | ವಿನಿಯೋಗ |
|---|---|
| ತಾ ಅಸ್ಯ...ದಿವಃ ॥ | ಲೋಕಂಪೃಣೇಷ್ಟಕೋಪಧಾನಕ್ಕಾಗಿ |

---

▲ ದಿವಃ ರೋಚನೇ=ಸ್ವರ್ಗಕ್ಕೆ ಪ್ರಕಾಶಕವಾದ; ಅಸ್ಯ=ಈ ಯಜಮಾನನ; ಜನ್ಮನ್ [ನಿಮಿತ್ತೇ ಸತಿ]=ಜನ್ಮವು ನಿಮಿತ್ತವಾಗಲಾಗಿ; ಸೂದದೋಹಸಃ=ಅನ್ನವನ್ನು ಸುರಿಸುವ /ಅನ್ನಪ್ರದವಾದ; ದೇವಾನಾಮ್ ವಿಶಃ=ದೇವತೆಗಳ ಪ್ರಜೆಗಳಂತಿರುವ; ಪೃಶ್ನಯಃ =ಗೋಸದೃಶವಾದ; ತಾಃ=ಆ ಇಷ್ಟಕೆಗಳು; ತ್ರಿಷು=ಪ್ರಾತಃಸವನಾದಿ ಮೂರು ಸವನಗಳಲ್ಲಿ; ಸೋಮಮ್=ಸೋಮವನ್ನು; ಆ ಶ್ರೀಣಂತಿ=ಪಕ್ವ ಮಾಡುತ್ತವೆ.

---

ಎಲೈ! ಇಷ್ಟಕೆಯೇ! ನೀನು ಭೋಗಗಳನ್ನು ಸಂಪಾದಿಸಿ ಕೊಡುವವಳಾಗಿರುವೆ. ನೀನು ಆ ಅಭಿಮಾನಿದೇವತೆಯಿಂದ ಅನುಗೃಹೀತಳಾಗಿ ಅಂಗಿರಸರು ಇಟ್ಟಿರುವ ಇಷ್ಟಕೆಯಂತೆ ದೃಢವಾಗಿ ಇರು.

ಎಲೈ! ಇಷ್ಟಕೆಯೇ! ನೀನು ಎಲ್ಲ ಕಡೆಗಳಿಂದಲೂ ಭೋಗಗಳನ್ನು ಕೊಡುವವಳು. ನೀನು ಸ್ಥಿರಳಾಗಿರು.

ಎಲೈ! ಲೋಕಂಪೃಣೇಷ್ಟಕೆಯೇ! ನೀನು ಇಟ್ಟಿಗೆಗಳ ಮಧ್ಯಭಾಗವನ್ನು ತುಂಬು. ನೀನು ಶಾಂತಳಾಗಿರು. ಇಂದ್ರಾಗ್ನಿ, ಬೃಹಸ್ಪತಿದೇವತೆಗಳು ನಿನ್ನನ್ನು ಮೊದಲು ಸಾದನ ಮಾಡಿರುತ್ತಾರೆ. ಅಂತಹ ನೀನು ಸ್ಥಿರಳಾಗಿರು.

ಯಾಗವು ಸ್ವರ್ಗಪ್ರಕಾಶಕವಾಗಿದೆ. ಯಜ್ಞಕ್ಕೆ ಇಷ್ಟಕೆಗಳು ಸಾಧನವಾದುದರಿಂದ ಅನ್ನಪ್ರದವಾಗಿವೆ. ಅವು ಗೋವುಗಳಂತೆ ಇಷ್ಟಾರ್ಥಗಳನ್ನು ಕರೆಯುತ್ತವೆ. ಅವು ದೇವತೆಗಳ ಪ್ರಜೆಗಳಂತಿವೆ. ಅವು ಸೋಮವನ್ನು ಪಕ್ವ ಮಾಡುತ್ತವೆ. ಇಂತಹ ಇಷ್ಟಕೆಗಳನ್ನು ನಾನು ಉಪಧಾನ ಮಾಡುತ್ತೇನೆ.

## ವಿನಿಯೋಗಸಂಗ್ರಹ

1ಅಪೋದ್ಧಂತಿ ಚಿತಿಸ್ಥಾನಮಗ್ನೇಸ್ತು2 ಸಿಕತಾ ವಪೇತ್ ।

3 ಸಂಜ್ಞಾನಮೂಷಾನ್ನಿವಪೇತ್ 4ಸಂಯಾಃ ಸಂಸೃಜತೇ ದ್ವಯಮ್ ॥

5-8ಅಯಂ ಚತಸೃಭಿಃ ಪ್ರಾಚೀರಿಷ್ಟಕಾ ಆದಧಾತಿ ಹಿ ।

9-10ಇಡಾಂ ದ್ವಾಭ್ಯಾಂ ಪುರಸ್ತಾದ್ದ್ವೇ ಚಿದ್ದ್ವಾಭ್ಯಾಂ 11-12ಪಶ್ಚಿಮೇ ದ್ವಯಮ್ ॥

13-14ಲೋಕಂ ಲೋಕಪೃಣಾ ದ್ವಾಭ್ಯಾಂ ಮಂತ್ರಾ ಅತ್ರ ಚತುರ್ದಶ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-14



## ॥ ಪಂಚಮೋಽನುವಾಕಃ ॥

**ಸಮಿತಗ್ಂ ಸಂ ಕಲ್ಪೇಥಾಗ್ಂ ಸಂಪ್ರಿಯೌ ರೋಚಿಷ್ಣೂ**

**ಸುಮನಸ್ಯಮಾನೌ । ಇಷಮೂರ್ಜಮಭಿ ಸಂವಸಾನೌ**

---

ಸಮಿತಿ । ಇತಮ್ । ಸಮಿತಿ । ಕಲ್ಪೇಥಾಮ್ । ಸಂಪ್ರಿಯಾವಿತಿ ಸಮ್–ಪ್ರಿಯೌ । ರೋಚಿಷ್ಣೂ

ಇತಿ । ಸುಮನಸ್ಯಮಾನಾವಿತಿ ಸು–ಮನಸ್ಯಮಾನೌ ॥ ಇಷಮ್ । ಊರ್ಜಮ್ । ಅಭೀತಿ ।

ಸಂವಸಾನಾವಿತಿ ಸಮ್–ವಸಾನೌ ।

---

ನಾಲ್ಕನೆಯ ಅನುವಾಕದಲ್ಲಿ ಗಾರ್ಹಪತ್ಯಚಯನವು ಹೇಳಲ್ಪಟ್ಟಿತು. ಈ ಐದನೆಯ ಅನುವಾಕದಲ್ಲಿ ಆಹವನೀಯಚಯನಕ್ಕಾಗಿ ಭೂಮಿಯ ಉಳುವಿಕೆಯು ಹೇಳಲ್ಪಡುತ್ತದೆ.

---

| ಮಂತ್ರ | ವಿನಿಯೋಗ |
|---|---|
| **ಸಮಿತಂ...ಆಕರಮ್ ॥** | ಗಾರ್ಹಪತ್ಯಾಗ್ನಿಚಿತಿಯಲ್ಲಿ ಉಖ್ಯಾಗ್ನಿಯನ್ನು ಸೇರಿಸಲು ಪ್ರಥಮಮಂತ್ರ. |

---

[ಎಲೈ! ಅಗ್ನಿದ್ವಯರೇ!] **ಸಮ್ ಇತಮ್**=ಚೆನ್ನಾಗಿ ಸೇರಿಕೊಳ್ಳಿರಿ. **ಸಮ್ ಕಲ್ಪೇಥಾಮ್**=[ಯಜ್ಞವನ್ನು] ಚೆನ್ನಾಗಿ ನಿರ್ವಹಿಸಿರಿ; **ಸಂಪ್ರಿಯೌ**=ಪರಸ್ಪರಪ್ರೀತಿಯುಳ್ಳವರಾಗಿ; **ರೋಚಿಷ್ಣೂ**=ಪ್ರಕಾಶಮಾನರಾಗಿ; **ಸುಮನಸ್ಯಮಾನೌ**=ಅನ್ಯೋನ್ಯವಾಗಿ ಒಳ್ಳೆಯ ಮನಸ್ಸುಳ್ಳವರಾಗಿರಿ. **ಇಷಮ್**=ಅನ್ನವನ್ನೂ; **ಊರ್ಜಮ್**=ರಸವನ್ನೂ; **ಅಭಿ ಸಂವಸಾನೌ**=ಎಲ್ಲ ಕಡೆಗಳಿಂದಲೂ ಚೆನ್ನಾಗಿ ಸಂಪಾದಿಸಿಕೊಡುವವರಾಗಿ.

---

ಹೇ! ಅಗ್ನಿಗಳೇ! ನೀವು ಒಂದಾಗಿರಿ. ನೀವು ಸೇರಿ ಈ ಯಜ್ಞವನ್ನು ನಿರ್ವಹಿಸಿರಿ.

ಸಂ ವಾಂ ಮನಾಗ್ಂಸಿ ಸಂ ವ್ರತಾ ಸಮು ಚಿತ್ತಾನ್ಯಾಽಕರಮ್ ॥

ಅಗ್ನೇ ಪುರೀಷ್ಯಾಧಿಪಾ ಭವಾ ತ್ವಂ ನಃ । ಇಷಮೂರ್ಜಂ

ಯಜಮಾನಾಯ ಧೇಹಿ ॥

---

ಸಮಿತಿ । ವಾಮ್ । ಮನಾಗ್ಂಸಿ । ಸಮಿತಿ । ವ್ರತಾ । ಸಮಿತಿ । ಉ । ಚಿತ್ತಾನಿ । ಏತಿ ।

ಅಕರಮ್ ॥ ಅಗ್ನೇ । ಪುರೀಷ್ಯ । ಅಧಿಪಾ ಇತ್ಯಧಿ-ಪಾಃ । ಭವ । ತ್ವಮ್ । ನಃ ॥

ಇಷಮ್ । ಊರ್ಜಮ್ । ಯಜಮಾನಾಯ । ಧೇಹಿ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇ...ಧೇಹಿ ॥ | ಸಂನಿವಪನ [ಸೇರಿಸುವಿಕೆ]ದ ಎರಡನೆಯ ಮಂತ್ರ. |

---

ವಾಮ್=ನಿಮ್ಮಿಬ್ಬರ; ಮನಾಂಸಿ=ಮನೋಜನ್ಯವಾದ ಸಂಕಲ್ಪಗಳನ್ನು; ಸಮ್ ಆಕರಮ್=ಚೆನ್ನಾಗಿ ಹೊಂದಿಕೊಳ್ಳುವಂತೆ ಮಾಡುವೆನು. ವ್ರತಾ=ಕರ್ಮಗಳನ್ನು; ಸಮ್ ಆಕರಮ್=ಚೆನ್ನಾಗಿ ಹೊಂದಿಕೊಳ್ಳುವಂತೆ ಮಾಡುವೆನು. ಚಿತ್ತಾನಿ ಉ= ಕರ್ಮವಿಷಯಜ್ಞಾನಗಳನ್ನೂ; ಸಮ್ ಆಕರಮ್=ಹೊಂದಿಕೊಳ್ಳುವಂತೆ ಮಾಡುವೆನು. 🔔 ಪುರೀಷ್ಯ ಅಗ್ನೇ=ಪಾಂಸುಜನ್ಯನಾದ ಅಗ್ನಿಯೇ! ತ್ವಮ್=ನೀನು; ನಃ=ನಮಗೆ; ಅಧಿಪಾಃ ಭವ=ಅಧಿಕವಾಗಿ ರಕ್ಷಕನಾಗು. ಇಷಮ್ ಊರ್ಜಮ್= ಅನ್ನವನ್ನೂ, ಕ್ಷೀರಾದಿರಸಗಳನ್ನೂ; ಯಜಮಾನಾಯ ಧೇಹಿ=ಯಜಮಾನನಿಗೆ ಪ್ರಾಪ್ತವಾಗುವಂತೆ ಅನುಗ್ರಹಿಸು.

---

ಪರಸ್ಪರ ಪ್ರೀತಿಯುಳ್ಳವರಾಗಿರಿ. ಪ್ರಕಾಶಮಾನರಾಗಿರುವ ನೀವು ಒಳ್ಳೆಯ ಮನಸ್ಸುಳ್ಳವರಾಗಿರಿ. ಯಜಮಾನನಿಗೆ ಅನ್ನವನ್ನೂ ರಸವನ್ನೂ ಅನುಗ್ರಹಿಸಿರಿ. ನಿಮ್ಮ ಮನೋಜನ್ಯಸಂಕಲ್ಪಗಳೂ, ಕರ್ಮಗಳೂ, ಕರ್ಮವಿಷಯಜ್ಞಾನಗಳೂ ಒಂದಾಗುವಂತೆ ಮಾಡುವೆನು. ಒಂದಾಗಲೆಂದು ಪ್ರಾರ್ಥಿಸುವೆನು.

ಪುರೀಷ್ಯಸ್ತ್ವಮಗ್ನೇ ರಯಿಮಾನ್ಪುಷ್ಟಿಮಾಗ್ಂ ಅಸಿ । ಶಿವಾಃ ಕೃತ್ವಾ ದಿಶಸ್ಸರ್ವಾಸ್ಸ್ವಾಂ ಯೋನಿಮಿಹಾಽಸದಃ ॥ ಭವತಂ ನಃ ಸಮನಸೌ ಸಮೋಕಸಾ [ಸಮೋಕಸೌ(೧೮)ಅರೇಪಸೌ ।] ವರೇಪಸೌ ।

---

ಪುರೀಷ್ಯಃ । ತ್ವಮ್ । ಅಗ್ನೇ । ರಯಿಮಾನಿತಿ ರಯಿ-ಮಾನ್ । ಪುಷ್ಟಿಮಾನಿತಿ ಪುಷ್ಟಿ-ಮಾನ್ । ಅಸಿ ॥ ಶಿವಾಃ । ಕೃತ್ವಾ । ದಿಶಃ । ಸರ್ವಾಃ । ಸ್ವಾಮ್ । ಯೋನಿಮ್ । ಇಹ । ಏತಿ । ಅಸದಃ ॥ ಭವತಮ್ । ನಃ । ಸಮನಸಾವಿತಿ ಸ-ಮನಸೌ । ಸಮೋಕಸಾವಿತಿ ಸಮ್-ಓಕಸೌ ।(೧೮)। ಅರೇಪಸೌ ॥

---

| ಮಂತ್ರ | ವಿನಿಯೋಗ |
|---|---|
| ಪುರೀಷ್ಯಃ...ಆ ಸದಃ ॥ | ಸಂನಿವಪನದ ಮೂರನೆಯ ಮಂತ್ರ. |
| ಭವತಂ...ಅದ್ಯ ನಃ ॥ | ಸಂನಿವಪನದ ನಾಲ್ಕನೆಯ ಮಂತ್ರ. |

---

▲ಅಗ್ನೇ=ಉಭಯಾಗ್ನಿಸ್ವರೂಪನಾದ ಅಗ್ನಿಯೇ! **ಪುರೀಷ್ಯಃ**=ಧೂಳಿಗೆ ಅರ್ಹನಾದ; **ತ್ವಮ್**=ನೀನು; **ರಯಿಮಾನ್**=ಧನವಂತನೂ; **ಪುಷ್ಟಿಮಾನ್**=ಸರ್ವವಿಧವಾದ ಪುಷ್ಟಿಯುಳ್ಳವನೂ; **ಅಸಿ**=ಆಗಿರುತ್ತೀಯೆ. **ಸರ್ವಾಃ ದಿಶಃ**=ಎಲ್ಲ ದಿಕ್ಕುಗಳನ್ನೂ; **ಶಿವಾಃ ಕೃತ್ವಾ**=ಶಾಂತವನ್ನಾಗಿ ಮಾಡಿ; **ಇಹ**=ಇಲ್ಲಿ; **ಸ್ವಾಮ್ ಯೋನಿಮ್**=ಸ್ವಸ್ಥಾನವನ್ನು; **ಆ ಸದಃ**=ಹೊಂದಿ ಸ್ಥಿರವಾಗಿರು. ▲[ಪುರಾತನವಾಗಿರುವ ಅಗ್ನಿಯೇ! ಮತ್ತು ಉಖೆಯಲ್ಲಿರುವ ಅಗ್ನಿಯೇ! ನೀವಿಬ್ಬರೂ] **ನಃ**=ನಮ್ಮನ್ನು ಕುರಿತು; **ಸಮನಸೌ**=ಸಮಾನಮನಸ್ಸುಳ್ಳವರಾಗಿಯೂ; **ಸಮೋಕಸೌ**=ಸಮಾನನಿವಾಸವುಳ್ಳವರಾಗಿಯೂ; **ಅರೇಪಸೌ**=ಪಾಪರಹಿತವಾದ ಮನಸ್ಸುಳ್ಳವರಾಗಿಯೂ; **ಭವತಮ್**=ಆಗಿರಿ.

# ಮಾ ಯಜ್ಞಗ್‍ಂ ಹಿಗ್‍ಂಸಿಷ್ಟಂ ಮಾ ಯಜ್ಞಪತಿಂ ಜಾತವೇದಸೌ ಶಿವೌ ಭವತಮದ್ಯ ನಃ ॥ ಮಾತೇವ ಪುತ್ರಂ ಪೃಥಿವೀ ಪುರೀಷ್ಯಮಗ್ನಿಗ್‍ಂ ಸ್ವೇ ಯೋನಾವಭಾರುಖಾ ।

ಮಾ । ಯಜ್ಞಮ್ । ಹಿಗ್‍ಂಸಿಷ್ಟಮ್ । ಮಾ । ಯಜ್ಞಪತಿಮಿತಿ ಯಜ್ಞ-ಪತಿಮ್ । ಜಾತವೇದಸಾವಿತಿ ಜಾತ-ವೇದಸೌ । ಶಿವೌ । ಭವತಮ್ । ಅದ್ಯ । ನಃ ॥ ಮಾತಾ । ಇವ । ಪುತ್ರಮ್ । ಪೃಥಿವೀ । ಪುರೀಷ್ಯಮ್ । ಅಗ್ನಿಮ್ । ಸ್ವೇ । ಯೋನೌ । ಅಭಾಃ । ಉಖಾ ॥

| ಮಂತ್ರ | ವಿನಿಯೋಗ |
| --- | --- |
| ಮಾತೇವ...ವಿಮುಂಚತು ॥ | *ನೆಲವಿನಿಂದ ಉಖೆಯನ್ನು ಹೊರಗಿಡಲು |

ಜಾತವೇದಸೌ=ಅಗ್ನಿದ್ವಯರೇ! ಅದ್ಯ=ಈಗ [ಈ ಕರ್ಮದಲ್ಲಿ] ಯಜ್ಞಮ್=ಯಾಗವನ್ನು; ಮಾ ಹಿಂಸಿಷ್ಟಮ್=ಹಿಂಸಿಸಬೇಡಿರಿ; ಯಜ್ಞಪತಿಮ್=ಯಜಮಾನನನ್ನೂ; ಮಾ ಹಿಂಸಿಷ್ಟಮ್=ತೊಂದರೆಪಡಿಸಬೇಡಿರಿ; ನಃ=ನಮಗೆ; ಶಿವೌ ಭವತಮ್=ಮಂಗಳಕರರಾಗಿರಿ; ▲ ಮಾತಾ=ತಾಯಿಯು; ಪುತ್ರಮ್ ಇವ=ಮಗನನ್ನು ಹೇಗೋ ಹಾಗೆ; ಪೃಥಿವೀ ಉಖಾ=ಭೂರೂಪವಾದ ಉಖೆಯು; ಪುರೀಷ್ಯಮ್=ಧೂಳಿನಿಂದ ಉತ್ಪನ್ನವಾದ; ಅಗ್ನಿಮ್=ಅಗ್ನಿಯನ್ನು; ಸ್ವೇ ಯೋನೌ=ತನ್ನ ಗರ್ಭದಲ್ಲಿ; ಅಭಾಃ=ಧರಿಸಿದೆ.

ಬೆರೆತಿರುವ ಅಗ್ನಿದ್ವಯರೂಪನಾದ ಅಗ್ನಿಯೇ! ನೀನು ನಮ್ಮನ್ನು ಕಾಪಾಡು. ಯಜಮಾನನಿಗೆ ಅನ್ನ-ಕ್ಷೀರಾದಿರಸಗಳನ್ನಿತ್ತು ಅನುಗ್ರಹಿಸು.

ಉಖಯಾಗ್ನಿಸ್ವರೂಪನಾದ ಅಗ್ನಿಯೇ! ನೀನು ಧೂಳಿಗೆ ಅರ್ಹನು. ಧೂಳಿನಿಂದ

* ವಸ್ತುಗಳನ್ನು ತೂಗು ಹಾಕಲು ಹಗ್ಗಗಳಿಂದ ನಿರ್ಮಿತವಾದ ವಸ್ತು.

ತಾಂ ವಿಶ್ವೈರ್ದೇವೈರ್ ಋತುಭಿಃ ಸಂವಿದಾನಃ ಪ್ರಜಾಪತಿ

ರ್ವಿಶ್ವಕರ್ಮಾ ವಿ ಮುಂಚತು ॥ ಯದಸ್ಯ ಪಾರೇ ರಜಸ

ಶ್ಶುಕ್ರಂ ಜ್ಯೋತಿರಜಾಯತ । ತನ್ನಃ ಪರ್‌ಷದತಿ

ದ್ವಿಷೋಽಗ್ನೇ ವೈಶ್ವಾನರ ಸ್ವಾಹಾ ॥

---

ತಾಮ್ । ವಿಶ್ವೈಃ । ದೇವೈಃ । ಋತುಭಿರಿತ್ಯೃತು–ಭಿಃ । ಸಂವಿದಾನ ಇತಿ ಸಮ್–ವಿದಾನಃ । ಪ್ರಜಾಪತಿರಿತಿ ಪ್ರಜಾ–ಪತಿಃ । ವಿಶ್ವಕರ್ಮೇತಿ ವಿಶ್ವ–ಕರ್ಮಾ । ವೀತಿ । ಮುಂಚತು ॥ ಯತ್ । ಅಸ್ಯ । ಪಾರೇ । ರಜಸಃ । ಶುಕ್ರಮ್ । ಜ್ಯೋತಿಃ । ಅಜಾಯತ ॥ ತತ್ । ನಃ । ಪರ್‌ಷತ್ । ಅತೀತಿ । ದ್ವಿಷಃ । ಅಗ್ನೇ । ವೈಶ್ವಾನರ । ಸ್ವಾಹಾ ॥

---

| ಮಂತ್ರ | ವಿನಿಯೋಗ |
|---|---|
| ಯದಸ್ಯ...ಸ್ವಾಹಾ ॥ | ಶಿಕ್ಯವನ್ನು ತೆಗೆದುಕೊಳ್ಳಲು. |

---

**ತಾಮ್**=ಆ ಉಖೆಯನ್ನು; **ವಿಶ್ವೈಃ ದೇವೈಃ**=ಎಲ್ಲ ದೇವತೆಗಳಿಂದಲೂ; **ಋತುಭಿಃ**=ಋತುಗಳಿಂದಲೂ; **ಸಂವಿದಾನಃ**=ಐಕಮತ್ಯವನ್ನು ಹೊಂದಿದ; **ವಿಶ್ವಕರ್ಮಾ**=ಪ್ರಪಂಚಸೃಷ್ಟಿಕರ್ತನಾದ; **ಪ್ರಜಾಪತಿಃ**=ಪ್ರಜಾಪತಿದೇವನು; **ವಿಮುಂಚತು**=[ಶಿಕ್ಯದಿಂದ/ನೆಲವಿನಿಂದ] ಬೇರ್ಪಡಿಸಲಿ. 🔔 **ರಜಸಃ ಪಾರೇ**=ಧೂಳಿನಂತಿರುವ ಹೊಗೆಯು ಕಳೆದು ಹೋದ ಮೇಲೆ; **ಅಸ್ಯ**=ಈ ಅಗ್ನಿಯ; **ಯತ್**=ಯಾವ; **ಶುಕ್ರಮ್ ಜ್ಯೋತಿಃ**=ನಿರ್ಮಲವಾದ ಪ್ರಕಾಶವು; **ಅಜಾಯತ**=ಹುಟ್ಟಿತೋ; **ತತ್**=ಆ ತೇಜಸ್ಸು; **ಅತಿ ದ್ವಿಷಃ**=ನಮ್ಮ ಹಗೆಗಳನ್ನು ಅತಿಕ್ರಮಿಸಿ/ಮೀರಿ; **ನಃ**=ನಮ್ಮನ್ನು; **ಪರ್‌ಷತ್**=ಸಂತೋಷಪಡಿಸಲಿ. **ಅಗ್ನೇ ವೈಶ್ವಾನರ**=ಹೊಟ್ಟೆಯಲ್ಲಿ ಜಠರಾಗ್ನಿಸ್ವರೂಪನಾದ/ಪರಮಾತ್ಮಸ್ವರೂಪನಾದ ಅಗ್ನಿಯೇ! **ಸ್ವಾಹಾ**=[ನಿನ್ನಲ್ಲಿ ಹೋಮ ಮಾಡಿದುದು] ಚೆನ್ನಾಗಿ ಹುತವಾಗಲಿ.

# ನಮಃ ಸು ತೇ ನಿರ್‌ಋತೇ ವಿಶ್ವರೂಪೇಽ[..ರೂಪೇ(೧೯) ಅಯಸ್ಮಯಂ]ಯಸ್ಮಯಂ ವಿ ಚೃತಾ ಬಂಧಮೇತಮ್ । ಯಮೇನ ತ್ವಂ ಯಮ್ಯಾ ಸಂವಿದಾನೋತ್ತಮಂ ನಾಕಮಧಿ ರೋಹಯೇಮಮ್ ॥

---

ನಮಃ । ಸ್ವಿತಿ । ತೇ । ನಿರ್‌ಋತ ಇತಿ ನಿಃ-ಋತೇ । ವಿಶ್ವರೂಪ ಇತಿ ವಿಶ್ವ-ರೂಪೇ । (೧೯)। ಅಯಸ್ಮಯಮ್ । ವೀತಿ । ಚೃತ । ಬಂಧಮ್ । ಏತಮ್ ॥ ಯಮೇನ । ತ್ವಮ್ । ಯಮ್ಯಾ । ಸಂವಿದಾನೇತಿ ಸಮ್-ವಿದಾನಾ । ಉತ್ತಮಮಿತ್ಯುತ್-ತಮಮ್ । ನಾಕಮ್ । ಅಧೀತಿ । ರೋಹಯ । ಇಮಮ್ ॥

---

| ಮಂತ್ರ | ವಿನಿಯೋಗ |
|---|---|
| ನಮಃ...ಇಮಮ್ ॥ | ಪಾಳುಭೂಮಿಯಲ್ಲಿ ಶಿಕ್ಯವನ್ನು ಇಡಲು. |

---

**ವಿಶ್ವರೂಪೇ**=ಬಹುವಿಧ ರೂಪಗಳುಳ್ಳವಳೇ! **ನಿರ್‌ಋತೇ**=ನೈರ್‌ಋತ್ಯದಿಗಭಿಮಾನಿಯಾದ ದೇವತೆಯೇ! **ತೇ**=ನಿನಗೆ; **ಸು ನಮಃ**=ಒಳ್ಳೆಯ ನಮಸ್ಕಾರವಾಗಲಿ. **ಅಯಸ್ಮಯಮ್**=ಲೋಹದ ಸರಪಳಿಯಂತೆ ದೃಢವಾಗಿರುವ; **ಏತಮ್ ಬಂಧಮ್**=ಸ್ವರ್ಗಪ್ರತಿಬಂಧಕವಾದ ಪಾಪರೂಪವಾದ ಈ ಪಾಶವನ್ನು; **ವಿ ಚೃತ**=ಚೆನ್ನಾಗಿ ನಾಶಪಡಿಸು. **ಯಮೇನ**=*ಅಗ್ನಿಯಿಂದಲೂ; **ಯಮ್ಯಾ**=*ಭೂದೇವಿಯಿಂದಲೂ; **ಸಂವಿದಾನಾ**=ಐಕಮತ್ಯವನ್ನು ಹೊಂದಿದವಳಾಗಿ; **ತ್ವಮ್**=ನೀನು; **ಇಮಮ್**=ಈ ಯಜಮಾನನನ್ನು; **ಉತ್ತಮಮ್**=ದುಃಖರಹಿತ ಸುಖರೂಪವಾದ; **ನಾಕಮ್**=ಸ್ವರ್ಗವನ್ನು/ಸ್ವರ್ಗಕ್ಕೆ; **ಅಧಿರೋಹಯ**=ಹತ್ತಿಸು.

---

* ಅಗ್ನಿರ್ವಾವ ಯಮ ಇಯಂ ಯಮೀ [ತೈ. ಸಂ. 3.3.8] ಎಂಬ ಬ್ರಾಹ್ಮಣವಚನದಂತೆ ಈ ರೀತಿ ಅರ್ಥವನ್ನು ವಿವರಿಸಿದೆ.

**ಯತ್ತೇ ದೇವೀ ನಿರ್‍ಋತಿರಾಬಬಂಧ ದಾಮ ಗ್ರೀವಾಸ್ವ-ವಿಚರ್ತ್ಯಮ್ । ಇದಂ ತೇ ತದ್ವಿಷ್ಯಾಮ್ಯಾಯುಷೋ ನ ಮಧ್ಯಾದಥಾ ಜೀವಃ ಪಿತುಮದ್ಧಿ ಪ್ರಮುಕ್ತಃ ॥**

---

ಯತ್ । ತೇ । ದೇವೀ । ನಿರ್‍ಋತಿರಿತಿ ನಿಃ-ಋತಿಃ । ಆಬಬನ್ಧೇತ್ಯಾ-ಬಬನ್ಧ । ದಾಮ । ಗ್ರೀವಾಸು । ಅವಿಚರ್ತ್ಯಮಿತ್ಯವಿ-ಚರ್ತ್ಯಮ್ ॥ ಇದಮ್ । ತೇ । ತತ್ । ವೀತಿ । ಸ್ಯಾಮಿ । ಆಯುಷಃ । ನ । ಮಧ್ಯಾತ್ । ಅಥ । ಜೀವಃ । ಪಿತುಮ್ । ಅದ್ಧಿ । ಪ್ರಮುಕ್ತ ಇತಿ ಪ್ರ-ಮುಕ್ತಃ ॥

---

| ಮಂತ್ರ | ವಿನಿಯೋಗ |
|---|---|
| **ಯತ್ತೇ...ಪ್ರಮುಕ್ತಃ ॥** | ನಿರ್‍ಋತಿದೇವತಾಕವಾದ ಇಟ್ಟಿಗೆಗಳನ್ನು ಶಿಕ್ಯದಿಂದ ಮುಚ್ಚಲು |

---

[ಹೇ! ಯಜಮಾನನೇ!] **ತೇ ಗ್ರೀವಾಸು**=ನಿನ್ನ ಕುತ್ತಿಗೆಯ ಪ್ರದೇಶಗಳಲ್ಲಿ; **ದೇವೀ ನಿರ್‍ಋತಿಃ**=ನಿರ್‍ಋತಿದೇವಿಯು; **ಅವಿಚರ್ತ್ಯಮ್**=ಭೇದಿಸಲಾಗದಂತಹ; **ಯತ್**=ಯಾವ; **ದಾಮ**=ಹಗ್ಗವನ್ನು; **ಆಬಬನ್ಧ**=ಕಟ್ಟಿದಳೋ; **ತೇ ತತ್ ಇದಮ್ ವಿ ಸ್ಯಾಮಿ**=ನಿನ್ನ ಆ ಈ ಪಾಶಗಳನ್ನು ಬಿಚ್ಚಿ ಹಾಕುತ್ತೇನೆ. **ಆಯುಷಃ ಮಧ್ಯಾತ್ ನ ವಿ ಸ್ಯಾಮಿ**=ಆಯುಸ್ಸಿನ ಮಧ್ಯಭಾಗದಿಂದ ಬಿಚ್ಚಿಹಾಕುವುದಿಲ್ಲ. **ಅಥ**=ಬಳಿಕ; **ಪ್ರಮುಕ್ತಃ**=ಪಾಶರಹಿತನಾದ ನೀನು; **ಜೀವಃ**=ಚಿರಂಜೀವಿಯಾಗಿ; **ಪಿತುಮ್ ಅದ್ಧಿ**=ಅನ್ನವನ್ನು ಭಕ್ಷಿಸುವವನಾಗು.

---

ಜನಿಸಿದವನು. ಧನವಂತನೂ ಪುಷ್ಟಿವಂತನೂ ಆಗಿರುವೆ. ನೀನು ಎಲ್ಲ ದಿಕ್ಕುಗಳನ್ನೂ ಶಾಂತವನ್ನಾಗಿ ಮಾಡು. ಬಳಿಕ ನಿನ್ನ ಸ್ವಸ್ಥಾನದಲ್ಲಿ ಆಸೀನನಾಗು.

ಎಲೈ! ಜಾತವೇದಸರೇ/ಅಗ್ನಿಗಳೇ! ನೀವು ನಮ್ಮ ವಿಷಯದಲ್ಲಿ ಸಮಾನವಾದ ಮನಸ್ಸುಳ್ಳವರಾಗಿರಿ. ಸಮಾನವಾದ ಸ್ಥಾನವುಳ್ಳವರಾಗಿರಿ. ನಮ್ಮ ವಿಷಯದಲ್ಲಿ ಕೇಡನ್ನು

ಯಸ್ಯಾಸ್ತೇ ಅಸ್ಯಾಃ ಕ್ರೂರ ಆಸಞ್ಜುಹೋಮ್ಯೇಷಾಂ ಬಂಧಾನಾ ಮವಸರ್ಜನಾಯ । ಭೂಮಿರಿತಿ ತ್ವಾ ಜನಾ ವಿದುರ್ನಿರ್‌ಋತಿ [ನಿರ್‌ಋತಿಃ(೨೦)ಇತಿ] ರಿತಿ ತ್ವಾಽಹಂ ಪರಿ ವೇದ ವಿಶ್ವತಃ ॥

---

ಯಸ್ಯಾಃ । ತೇ । ಅಸ್ಯಾಃ । ಕ್ರೂರೇ । ಆಸನ್ನ್ । ಜುಹೋಮಿ । ಏಷಾಮ್ । ಬಂಧಾನಾಮ್ । ಅವಸರ್ಜನಾಯೇತ್ಯವ-ಸರ್ಜನಾಯ ॥ ಭೂಮಿಃ । ಇತಿ । ತ್ವಾ । ಜನಾಃ । ವಿದುಃ । ನಿರ್‌ಋತಿರಿತಿ ನಿಃ-ಋತಿಃ ।(೨೦)। ಇತಿ । ತ್ವಾ । ಅಹಮ್ । ಪರೀತಿ । ವೇದ । ವಿಶ್ವತಃ ॥

---

| ಮಂತ್ರ | ವಿನಿಯೋಗ |
|---|---|
| ಯಸ್ಯಾಸ್ತೇ...ವಿಶ್ವತಃ ॥ | ಶಿಕ್ಯವನ್ನುದ್ದೇಶಿಸಿ ಉಪಧಾನ ಮಾಡುವ ಮೂರು ನಿರ್‌ಋತೀಷ್ಟಕೆಗಳಲ್ಲಿ ಪ್ರಥಮೋಪಧಾನ. |

---

[ನಿರ್‌ಋತಿದೇವಿಯೇ] **ಯಸ್ಯಾಃ ತೇ ಅಸ್ಯಾಃ**=ಯಾವ ನಿನ್ನ ಈ; **ಕ್ರೂರೇ ಆಸನ್**= ಕ್ರೂರವಾದ ಬಾಯಿಯಲ್ಲಿ; **ಏಷಾಮ್ ಬಂಧಾನಾಮ್**=[ಯಜಮಾನನ ಸ್ವರ್ಗ ಪ್ರಾಪ್ತಿಗೆ ಅಡ್ಡಿಯಾಗಿರುವ] ಈ ಪಾಪರೂಪಬಂಧಗಳ; **ಅವಸರ್ಜನಾಯ**=ನಾಶಕ್ಕಾಗಿ; **ಜುಹೋಮಿ**=[ಶಿಕ್ಯರೂಪವಾದ] ಆಹುತಿಯನ್ನು ಸಮರ್ಪಿಸುತ್ತೇನೆಯೋ; **ತ್ವಾ**= ಅಂತಹ ನಿನ್ನನ್ನು; **ಭೂಮಿಃ ಇತಿ**=ಭೂಮಿಯೆಂದು; **ಜನಾಃ**=ಸಾಧಾರಣ ಜನರು; **ವಿದುಃ**= ತಿಳಿದಿರುತ್ತಾರೆ; **ಅಹಮ್**=ನಾನು; **ತ್ವಾ**=ನಿನ್ನನ್ನು; **ವಿಶ್ವತಃ**=ಎಲ್ಲ ಪ್ರಕಾರಗಳಿಂದಲೂ; **ನಿರ್‌ಋತಿಃ ಇತಿ**=ನಿರ್‌ಋತಿ ಎಂದು; **ಪರಿ ವೇದ**= ತಿಳಿದಿರುತ್ತೇನೆ.

---

ಎಣಿಸದೆ ಒಳ್ಳೆಯದನ್ನೇ ಚಿಂತಿಸಿರಿ. ಯಜ್ಞಕ್ಕೂ ಯಜಮಾನನಿಗೂ ಯಾವ ವಿಧವಾದ ಹಿಂಸೆಯನ್ನೂ ಉಂಟುಮಾಡದೇ ಮಂಗಳವನ್ನೇ ಉಂಟುಮಾಡಿರಿ.

ತಾಯಿಯು ಮಗನನ್ನು ಗರ್ಭದಲ್ಲಿ ಧರಿಸುವಂತೆ ಪೃಥಿವೀರೂಪವಾದ ಉಖೆಯು ಉಖ್ಯಾಗ್ನಿಯನ್ನು ಒಳಗೆ ಧರಿಸುತ್ತದೆ. ವಿಶ್ವಸ್ರಷ್ಟನಾದ ಪ್ರಜಾಪತಿದೇವನು ಎಲ್ಲ ದೇವತೆಗಳಿಂದಲೂ, ಋತುಗಳೊಡನೆಯೂ ಐಕಮತ್ಯವನ್ನು ಹೊಂದಿದವನಾಗಿ ಶಿಕ್ಯದಿಂದ ಉಖೆಯನ್ನು ಹೊರಗೆ ಬಿಡಲಿ.

ಅಸುನ್ವಂತಮಯಜಮಾನಮಿಚ್ಛ ಸ್ತೇನಸ್ಯೇತ್ಯಾಂ ತಸ್ಕರಸ್ಯಾನ್ವೇಷಿ । ಅನ್ಯಮಸ್ಮದಿಚ್ಛ ಸಾ ತ ಇತ್ಯಾ ನಮೋ ದೇವಿ ನಿರ್ಋತೇ ತುಭ್ಯಮಸ್ತು ॥

ಅಸುನ್ವಂತಮ್ । ಅಯಜಮಾನಮ್ । ಇಚ್ಛ । ಸ್ತೇನಸ್ಯ । ಇತ್ಯಾಮ್ । ತಸ್ಕರಸ್ಯ । ಅನ್ವಿತಿ । ಏಷಿ ॥ ಅನ್ಯಮ್ । ಅಸ್ಮತ್ । ಇಚ್ಛ । ಸಾ । ತೇ । ಇತ್ಯಾ । ನಮಃ । ದೇವಿ । ನಿರ್ಋತ ಇತಿ ನಿಃ-ಋತೇ । ತುಭ್ಯಮ್ । ಅಸ್ತು ॥

| ಮಂತ್ರ | ವಿನಿಯೋಗ |
|---|---|
| ಅಸುನ್ವಂತಮ್...ಅಸ್ತು ॥ | ದ್ವಿತೀಯೋಪಧಾನಕ್ಕಾಗಿ |

🔔 [ನಿರ್ಋತಿದೇವಿಯೇ!] **ಅಸುನ್ವಂತಮ್**=ಸೋಮಯಾಗವನ್ನು ಮಾಡದವನನ್ನೂ; **ಅಯಜಮಾನಮ್**=ಹವಿರ್ಯಾಗವನ್ನು ಮಾಡದವನನ್ನೂ; **ಇಚ್ಛ**=[ಕಟ್ಟಿ ಹಾಕಲು]ಇಚ್ಛಿಸು. **ಸ್ತೇನಸ್ಯ**=ಪ್ರಚ್ಛನ್ನಚೋರನ; [ಮತ್ತು] **ತಸ್ಕರಸ್ಯ**=ಪ್ರಕಟ ಚೋರನ; **ಇತ್ಯಾಮ್**=ಗಮನವನ್ನು; **ಅನು ಏಷಿ**=ಅನುಸರಿಸಿ ಹೋಗು; **ಅನ್ಯಮ್**=ಬೇರೆಯವನನ್ನು; **ಅಸ್ಮತ್**=ನಮ್ಮಿಂದ/ನಮ್ಮ ಕಡೆಯಿಂದ; **ಇಚ್ಛ**=[ಬಂಧಿಸಲು] ಇಚ್ಛಿಸು. **ಸಾ ತೇ ಇತ್ಯಾ**=ಅದು ನಿನ್ನ ಗತಿಯಾಗಲಿ; **ದೇವಿ ನಿರ್ಋತೇ**=ನಿರ್ಋತಿ ದೇವಿಯೇ! **ತುಭ್ಯಮ್**=ನಿನಗೆ; **ನಮಃ ಅಸ್ತು**=[ನನ್ನ] ನಮಸ್ಕಾರವಿರಲಿ/ನಾನು ನಮಸ್ಕರಿಸುತ್ತೇನೆ.

ವೈಶ್ವಾನರದೇವತಾಕವಾದ ಋಕ್ಕಿನಿಂದ ಶಿಕ್ಯವನ್ನು ತೆಗೆದುಕೊಳ್ಳಬೇಕು.

ವೈಶ್ವಾನರಾಗ್ನಿಯು ಸರ್ವಪ್ರಾಣಿಗಳನ್ನೂ ಆಶ್ರಯಿಸಿರುವ ಪರಮಾತ್ಮರೂಪವೇ ಆಗಿದೆ.

ಹೊಗೆಯ ಅನಂತರ ಉಂಟಾಗುವ ಅಗ್ನಿಯ ನಿರ್ಮಲಪ್ರಕಾಶವು ಶತ್ರುಗಳನ್ನು ಅತಿಕ್ರಮಿಸಿ ನಮ್ಮನ್ನು ಸಂತೋಷಪಡಿಸಲಿ. ಈ ಶಿಕ್ಯವು ಸುಹುತವಾಗಲಿ.

ದೇವೀಮಹಂ ನಿರ್‌ಋತಿಂ ವಂದಮಾನಃ ಪಿತೇವ ಪುತ್ರಂ ದಸಯೇ ವಚೋಭಿಃ । ವಿಶ್ವಸ್ಯ ಯಾ ಜಾಯಮಾನಸ್ಯ ವೇದ ಶಿರಶ್ಶಿರಃ ಪ್ರತಿ ಸೂರೀ ವಿ ಚಷ್ಟೇ ॥

---

ದೇವೀಮ್ । ಅಹಮ್ । ನಿರ್‌ಋತಿಮಿತಿ ನಿಃ-ಋತಿಮ್ । ವಂದಮಾನಃ । ಪಿತಾ । ಇವ । ಪುತ್ರಮ್ । ದಸಯೇ । ವಚೋಭಿರಿತಿ ವಚಃ-ಭಿಃ ॥ ವಿಶ್ವಸ್ಯ । ಯಾ । ಜಾಯಮಾನಸ್ಯ । ವೇದ । ಶಿರಶ್ಶಿರಇತಿ ಶಿರಃ-ಶಿರಃ । ಪ್ರತೀತಿ । ಸೂರೀ । ವೀತಿ । ಚಷ್ಟೇ ॥

---

| ಮಂತ್ರ | ವಿನಿಯೋಗ |
| --- | --- |
| ದೇವೀಮಹಂ...ವಿಚಷ್ಟೇ ॥ | ನೈರ್‌ಋತೀಷ್ಟಕೆಯ ತೃತೀಯೋಪಧಾನ |

---

▲ **ಯಾ**=ಯಾವ ನಿರ್‌ಋತಿದೇವಿಯು; **ಜಾಯಮಾನಸ್ಯ ವಿಶ್ವಸ್ಯ**=ಹುಟ್ಟುವ ತಸ್ಕರಾದಿಗಳೆಲ್ಲರ; **ವೇದ**=[ಕಾರ್ಯಗಳನ್ನು] ತಿಳಿದಿರುತ್ತಾಳೆಯೋ; **ಸೂರೀ**=ತಿಳಿದಿರುವ [ನಿರ್‌ಋತಿಯು]; **ಶಿರಃ ಶಿರಃ**=ತಲೆ ತಲೆಗಳನ್ನು [ಹಿಡಿದುಕೊಂಡು]; **ಪ್ರತಿ ವಿ ಚಷ್ಟೇ**=[ಅವರ ಅಪರಾಧಗಳನ್ನು]ತಾನು ತಿಳಿದಿರುವುದಾಗಿ ಹೇಳುವಳೋ; **ಅಹಮ್**=ನಾನು; **ದೇವೀಮ್ ನಿರ್‌ಋತಿಮ್**= ನಿರ್‌ಋತಿದೇವಿಯನ್ನು; **ವಂದಮಾನಃ**= ನಮಸ್ಕರಿಸುವವನಾಗಿ; **ಪಿತಾ ಪುತ್ರಮ್ ಇವ**=ತಂದೆಯು ಮಗನನ್ನು ಹೇಗೋ ಹಾಗೆ; **ವಚೋಭಿಃ**=ಸ್ತುತಿರೂಪವಾದ ಮಾತುಗಳಿಂದ; **ದಸಯೇ**=ಒಲಿಸಿಕೊಳ್ಳುತ್ತೇನೆ.

---

ಹೊಟ್ಟಿನಲ್ಲಿ ಬೇಯಿಸಿದ ಕಪ್ಪಾದ ಮೂರು ಇಟ್ಟಿಗೆಗಳನ್ನೂ, ಶಿಕ್ಯವನ್ನೂ, ಚಿನ್ನದ ಸೂತ್ರವನ್ನೂ, ಆಸಂದಿ(ಪೀಠ)ಯನ್ನೂ ತೆಗೆದುಕೊಂಡು ನೈರ್‌ಋತ್ಯದಿಕ್ಕಿನಲ್ಲಿ ಪಾಳು ಭೂಮಿಯಲ್ಲಿ ಇಡಬೇಕು. ಹಾಗೆ ಇಡುವಾಗ ಹೇಳುವ ಮಂತ್ರದ ತಾತ್ಪರ್ಯವಿದು.

ನಿವೇಶನಃ ಸಂಗಮನೋ ವಸೂನಾಂ ವಿಶ್ವಾ ರೂಪಾಽಭಿ ಚಷ್ಟೇ[ಚಷ್ಟೇ(೨೧)] ಶಚೀಭಿಃ । ದೇವ ಇವ ಸವಿತಾ ಸತ್ಯಧರ್ಮೇಂದ್ರೋ ನ ತಸ್ಥೌ ಸಮರೇ ಪಥೀನಾಮ್ ॥

ನಿವೇಶನ ಇತಿ ನಿ-ವೇಶನಃ । ಸಂಗಮನ ಇತಿ ಸಮ್-ಗಮನಃ । ವಸೂನಾಮ್ । ವಿಶ್ವಾ । ರೂಪಾ । ಅಭೀತಿ । ಚಷ್ಟೇ ।(೨೧)। ಶಚೀಭಿರಿತಿ ಶಚಿ-ಭಿಃ ॥ ದೇವಃ । ಇವ । ಸವಿತಾ । ಸತ್ಯಧರ್ಮೇತಿ ಸತ್ಯ-ಧರ್ಮಾ । ಇಂದ್ರಃ । ನ । ತಸ್ಥೌ । ಸಮರ ಇತಿ ಸಮ್ -ಅರೇ । ಪಥೀನಾಮ್ ॥

| ಮಂತ್ರ | ವಿನಿಯೋಗ |
|---|---|
| ನಿವೇಶನಃ...ಪಥೀನಾಮ್ ॥ | ಗಾರ್ಹಪತ್ಯ ಅಥವಾ ಆಹವನೀಯದ ಉಪಸ್ಥಾನಕ್ಕಾಗಿ. |

[ಈ ಅಗ್ನಿದೇವನು] **ನಿವೇಶನಃ**=[ಯಜಮಾನರನ್ನು]ತಮ್ಮ ತಮ್ಮ ಮನೆಗಳಲ್ಲಿ ಸುಖವಾಗಿ ವಾಸಿಸುವಂತೆ ಮಾಡತಕ್ಕವನು. **ವಸೂನಾಮ್ ಸಂಗಮನಃ**=ಪ್ರಜಾ-ಪಶುರೂಪಾದಿ ಧನಗಳನ್ನು ಕೊಡುವವನು; **ಸವಿತಾ ದೇವಃ ಇವ**=ಸರ್ವಪ್ರಕಾಶಕನಾದ ಸೂರ್ಯದೇವನಂತೆ; **ಶಚೀಭಿಃ**=ತನ್ನ ಶಕ್ತಿಗಳಿಂದ; **ವಿಶ್ವಾ ರೂಪಾ**=ಎಲ್ಲರೂಪಗಳನ್ನೂ; **ಅಭಿಚಷ್ಟೇ**=ಪ್ರಕಾಶಪಡಿಸುವವನು. **ಸತ್ಯಧರ್ಮಾ**=ಸತ್ಯಫಲವುಳ್ಳ ಅಗ್ನಿಹೋತ್ರಾದಿ ಧರ್ಮಗಳ ನಿರ್ವಾಹಕನು. **ಇಂದ್ರಃ**=ಪರಮೈಶ್ವರ್ಯಯುಕ್ತನು; **ಪಥೀನಾಮ್ ಸಮರೇ**=ಶತ್ರುಗಳ ಮೇಲಿನ ಯುದ್ಧಗಳಲ್ಲಿ; **ನ ತಸ್ಥೌ**=ತಾನು ನಿಲ್ಲದೆ ಇರುವವನು.

ಬಹುರೂಪೆಯಾದ ನಿರ್‌ಋತಿಯೇ! ನಿನಗೆ ನಮಸ್ಕರಿಸುವೆನು. ಉಕ್ಕಿನ ಸರಪಳಿಯಂತೆ ದೃಢವಾಗಿರುವ ಪಾಶದಂತಿರುವ ಶಿಕ್ಯವನ್ನು ಕತ್ತರಿಸಿ ಹಾಕು.

ಅಗ್ನಿಯೊಡನೆಯೂ, ಭೂಮಿಯೊಡನೆಯೂ ಕೂಡಿಕೊಂಡು ದುಃಖವಿಲ್ಲದ ಸುಖಸ್ವರೂಪವಾದ ಸ್ವರ್ಗವನ್ನು ಯಜಮಾನನು ಹೊಂದುವಂತೆ ಮಾಡು.

ಸಂ ವರತ್ರಾ ದಧಾತನ ನಿರಾಹಾವಾನ್ಕೃಣೋತನ ।
ಸಿಂಚಾಮಹಾ ಅವಟಮುದ್ರಿಣಂ ವಯಂ
ವಿಶ್ವಾऽಹಾऽದಸ್ತಮಕ್ಷಿತಮ್ ॥

ಸಮಿತಿ । ವರತ್ರಾಃ । ದಧಾತನ । ನಿರಿತಿ । ಆಹಾವಾನಿತ್ಯಾ-ಹಾವಾನ್ । ಕೃಣೋತನ ॥ ಸಿಂಚಾಮಹೈ । ಅವಟಮ್ । ಉದ್ರಿಣಮ್ । ವಯಮ್ । ವಿಶ್ವಾ । ಅಹಾ । ಅದಸ್ತಮ್ । ಅಕ್ಷಿತಮ್ ॥

| ಮಂತ್ರ | ವಿನಿಯೋಗ |
|---|---|
| ಸಂ ವರತ್ರಾ...ಅಕ್ಷಿತಮ್ ॥ | ಉಳುವುದಕ್ಕೆ ಸಂಬಂಧಿಸಿದ ಪ್ರೈಷಕ್ಕಾಗಿ. |

▲ [ಎಲೈ! ಉಳುವವರೇ!] **ವರತ್ರಾಃ**=ನೀರನ್ನು ಸೇದಲು ಬಳಸುವ ಚರ್ಮಮಯವಾದ ಹಗ್ಗಗಳನ್ನು; **ಸಮ್ ದಧಾತನ**=ಚೆನ್ನಾಗಿ ಇಡಿರಿ. **ಆಹಾವಾನ್**=ಮರದಿಂದ ಅಥವಾ ಕಲ್ಲಿನಿಂದ ನಿರ್ಮಿಸಿದ ದೋಣಿಗಳನ್ನು; **ನಿಃ ಕೃಣೋತನ**=ಮಾಡಿರಿ; **ವಿಶ್ವಾ ಅಹಾ**=ಎಲ್ಲ ದಿನಗಳಲ್ಲಿಯೂ; **ಅದಸ್ತಮ್**=ಹಾಳಾಗದ; **ಅಕ್ಷಿತಮ್**=ಒಣಗದಿರುವ; **ಅವಟಮ್**=ಬಾವಿಯನ್ನು; **ಉದ್ರಿಣಮ್**=ನೀರಿನಿಂದ ತುಂಬಿರುವಂತೆ; **ವಯಮ್**=ನಾವು; **ಸಿಂಚಾಮಹೈ**=ನೀರಿನಿಂದ ಸೇಚಿಸೋಣ.

ವಿವಿಧರೂಪಗಳುಳ್ಳ ನಿರ್ಋತಿದೇವಿಯು ಯಜಮಾನನ ಕಂಠದಲ್ಲಿ ಯಾವ ಪಾಶಗಳನ್ನು ಬಿಗಿದಿರುತ್ತಾಳೆಯೋ ಅವು ಕತ್ತರಿಸಲು ಅಸಾಧ್ಯವಾದವುಗಳು. ಇಂತಹ ಪಾಶಗಳನ್ನು ನಿರ್ಋತಿಯ ಅನುಗ್ರಹದಿಂದಲೇ ಸಂಪೂರ್ಣವಾದ ಆಯುಸ್ಸಿನಿಂದ ಅಂದರೆ ಜೀವನ ಪರ್ಯಂತವಾಗಿ ಕಡಿದು ಹಾಕುತ್ತೇನೆ. ಬಳಿಕ ಯಜಮಾನನು ಪಾಶವಿಮುಕ್ತನಾಗಿ ಯಾವ ತೊಂದರೆಯೂ ಇಲ್ಲದೆ ಅನ್ನವನ್ನು ಭುಂಜಿಸಲಿ.

ನಿರ್ಋತಿದೇವತೆಯೇ! ನಿನ್ನ ಕ್ರೂರವಾದ ಬಾಯಿಯಲ್ಲಿ-ಯಜಮಾನನ ಪಾಪರೂಪ ಬಂಧನಗಳ ನಾಶಕ್ಕಾಗಿ-ಶಿಕ್ಯವನ್ನು ಹಾಕುತ್ತೇನೆ. ನಿನ್ನನ್ನು ಸಾಧಾರಣ ಜನರು

ನಿಷ್ಕೃತಾಹಾವಮವಟಗ್ಂ ಸುವರತ್ರಗ್ಂ ಸುಷೇಚನಮ್ ।

ಉದ್ರಿಣಗ್ಂ ಸಿಂಚೇ ಅಕ್ಷಿತಮ್ ॥

---

ನಿಷ್ಕೃತಾಹಾವಮಿತಿ ನಿಷ್ಕೃತ-ಆಹಾವಮ್ । ಅವಟಮ್ । ಸುವರತ್ರಮಿತಿ ಸು-ವರತ್ರಮ್ । ಸುಷೇಚನಮಿತಿ ಸು-ಸೇಚನಮ್ ॥ ಉದ್ರಿಣಮ್ । ಸಿಂಚೇ । ಅಕ್ಷಿತಮ್ ॥

---

| ಮಂತ್ರ | ವಿನಿಯೋಗ |
| --- | --- |
| ನಿಷ್ಕೃತಾಹಾವಂ...ಅಕ್ಷಿತಮ್ ॥ | ದೋಣಿಗಳಲ್ಲಿ ನೀರನ್ನು ತುಂಬಿಸಲು. |

---

🔔 ನಿಷ್ಕೃತಾಹಾವಮ್=ಚೆನ್ನಾಗಿ ನಿರ್ಮಿಸಿರುವ ದೋಣಿಗಳುಳ್ಳ; ಸುವರತ್ರಮ್=ಒಳ್ಳೆಯ ಹಗ್ಗಗಳುಳ್ಳ; ಸುಷೇಚನಮ್=ನೀರನ್ನು ಎತ್ತಲು ಮತ್ತು ಹಾಕಲು ಸಾಧನವಾದ ಪಾತ್ರೆಗಳುಳ್ಳ; ಉದ್ರಿಣಮ್=ನೀರಿನಿಂದ ತುಂಬಿದ; ಅಕ್ಷಿತಮ್=ಕ್ಷಯರಹಿತವಾದ ನೀರುಳ್ಳ; ಅವಟಮ್=ಬಾವಿಯನ್ನು; ಸಿಂಚೇ=ನೀರಿನಿಂದ ತುಂಬಿರುವಂತೆ ಮಾಡುವೆನು/ಮಾಡೋಣ.

---

ಭೂಮಿಯೆನ್ನುವರು. ನೀನು ಇತರ ದೇವತೆಗಳಂತೆ ದೇವಯಜನದಲ್ಲಿ ಸಿಕ್ಕದೆ ಬಂಜರುಭೂಮಿಯಲ್ಲಿ ಸಿಕ್ಕುವುದರಿಂದ ನಿನ್ನನ್ನು ನಾನು *ನಿರ್‌ಋತಿಯೆಂದು ತಿಳಿದಿರುತ್ತೇನೆ.

ಹೇ! ನಿರ್‌ಋತಿದೇವಿಯೇ! ಸೋಮಯಾಗವನ್ನೂ ಇತರ ಹವಿರ್ಯಾಗಗಳನ್ನೂ ಮಾಡದವರನ್ನು ನಿನ್ನ ಪಾಶಗಳಿಂದ ಬಂಧಿಸು. ಬಗೆ ಬಗೆಯ ಕಳ್ಳರನ್ನು ಹಿಂಬಾಲಿಸಿ ಕಟ್ಟಿ ಹಾಕು. ಯಜಮಾನರಿಗಿಂತ ಬೇರೆಯವರನ್ನು ಕಟ್ಟಲು ಇಚ್ಛಿಸು. ನಿನಗೆ ನನ್ನ ನಮಸ್ಕಾರವಿರಲಿ.

ನಿರ್‌ಋತಿದೇವಿಯು ತಿಳಿದವಳು. ಕಳ್ಳರೇ ಮೊದಲಾದವರ ಅಪರಾಧಗಳನ್ನು ತಿಳಿದವಳು. ಅವರ ತಲೆಗಳನ್ನು ಹಿಡಿದು ಅವರ ಅಪರಾಧಗಳನ್ನು ಹೇಳಬಲ್ಲವಳು.

---

* ನಿಃ ಋತಿಃ ಯಸ್ಯಾಃ ಸಾ=ನಿರ್‌ಋತಿಃ ಸರ್ವದೇವಯಜನಸಾಧಾರಣಾತ್ । ನಿಃ=ನಿಷ್ಕೃಷ್ಯ, ಪ್ರದರಾದೌ ಋತಿಃ= ಪ್ರಾಪ್ತಿಃ ಯಸ್ಯಾಃ ಸಾ ನಿರ್‌ಋತಿಃ ॥-ಸಾ.ಭಾಷ್ಯ.

ಸೀರಾ ಯುಂಜಂತಿ ಕವಯೋ ಯುಗಾ ವಿ ತನ್ವತೇ

ಪೃಥಕ್ । ಧೀರಾ ದೇವೇಷು ಸುಮ್ನಯಾ ॥

---

ಸೀರಾ । ಯುಂಜಂತಿ । ಕವಯಃ । ಯುಗಾ । ವೀತಿ । ತನ್ವತೇ । ಪೃಥಕ್ ॥ ಧೀರಾಃ ।

ದೇವೇಷು । ಸುಮ್ನಯಾ ॥

---

| ಮಂತ್ರ | ವಿನಿಯೋಗ |
|---|---|
| ಸೀರಾ...ಸುಮ್ನಯಾ ॥ | ನೇಗಿಲನ್ನು ಹೂಡಲು ಪ್ರಥಮಮಂತ್ರ. |

---

▲ **ದೇವೇಷು**=ದೇವತೆಗಳ ವಿಷಯದಲ್ಲಿ; **ಸುಮ್ನಯಾ**=ಸುಖವನ್ನು ಬಯಸುವುದ ರಿಂದ; **ಧೀರಾಃ**=ಧೈರ್ಯಯುಕ್ತರಾದ/ಆಲಸ್ಯವಿಲ್ಲದ; **ಕವಯಃ**=ವ್ಯವಸಾಯದ ವಿಷಯವನ್ನು ತಿಳಿದಿರುವ ರೈತರು; **ಸೀರಾ**=ನೇಗಿಲುಗಳನ್ನು; **ಯುಂಜಂತಿ**= ಹೂಡುತ್ತಾರೆ/ಹೂಡಬೇಕು. **ಯುಗಾ**=ನೊಗಗಳನ್ನು; **ಪೃಥಕ್ ವಿತನ್ವತೇ**= [ಮೂರು ಅಥವಾ ಆರು ನೇಗಿಲುಗಳಿಗೆ] ತಕ್ಕಂತೆ ವಿಸ್ತರಿಸಿರಿ.

---

ತಂದೆಯು ಮಗನನ್ನು ಮೃದುವಾದ ಮಾತಿನಿಂದ ಸ್ವಾಧೀನಪಡಿಸಿಕೊಳ್ಳುವಂತೆ ನಾನು ಆ ನಿರ್‌ಋತಿದೇವಿಯನ್ನು ಸ್ತುತಿಗಳಿಂದ ಒಲಿಸಿಕೊಳ್ಳುತ್ತೇನೆ.

ಈ ಅಗ್ನಿದೇವನು ಯಜಮಾನರನ್ನು ತಮ್ಮ ಮನೆಗಳಲ್ಲಿ ಸುಖವಾಗಿ ಇರಿಸತಕ್ಕವನು. ಧನವನ್ನು ನೀಡುವವನು. ಸೂರ್ಯನಂತೆ ಎಲ್ಲವನ್ನೂ ಪ್ರಕಾಶಪಡಿಸತಕ್ಕವನು. ಧರ್ಮನಿರ್ವಾಹಕನು. ಪರಮೈಶ್ವರ್ಯಯುಕ್ತನು. ತಾನು ಯುದ್ಧದಲ್ಲಿ ನಿಲ್ಲದೆ ತನ್ನ ಹೆಸರಿನಿಂದಲೇ ಶತ್ರುಗಳನ್ನು ಓಡಿಹೋಗುವಂತೆ ಮಾಡುವವನು. ಇಂತಹ ಅಗ್ನಿದೇವನು ಪ್ರಸನ್ನನಾಗಿ ನಮ್ಮ ಇಷ್ಟಾರ್ಥಗಳನ್ನು ಕರುಣಿಸಲಿ.

ಭೂಮಿಯ ಕೆಲವೆಡೆಗಳಲ್ಲಿ ನೆಲದ ಮಟ್ಟದಲ್ಲಿಯೇ ನೀರಿರುತ್ತದೆ. ಕೆಲವೆಡೆಗಳಲ್ಲಿ ಬಾವಿಯನ್ನು ತೋಡಿ ಚರ್ಮಮಯವಾದ ಅಥವಾ ನಾರಿನ ಹಗ್ಗಗಳನ್ನು ಬಳಸಿ ನೀರನ್ನು ಸೇದಿ ದೋಣಿಗಳಲ್ಲಿ ಹಾಕಿ ಎತ್ತುಗಳಿಗೆ ನೀರನ್ನು ಕುಡಿಸಬೇಕಾಗುತ್ತದೆ. ಇದೆಲ್ಲವನ್ನೂ ಮಾಡಿ ಎಂದು ಕರ್ಷಕರಿಗೆ ನೀಡುವ ಪ್ರೈಷವು ಇದು:-

ಯುನಕ್ತ ಸೀರಾ ವಿ ಯುಗಾ ತನೋತ ಕೃತೇ ಯೋನೌ ವಪತೇಹ [(೨೨)] ಬೀಜಮ್ । ಗಿರಾ ಚ ಶ್ರುಷ್ಟಿಃ ಸಭರಾ ಅಸನ್ನೋ ನೇದೀಯ ಇಥ್ಸೃಣ್ಯಾ ಪಕ್ವಮಾಽಯತ್ ॥

---

ಯುನಕ್ತ । ಸೀರಾ । ವೀತಿ । ಯುಗಾ । ತನೋತ । ಕೃತೇ । ಯೋನೌ । ವಪತ । ಇಹ (೨೨) ಬೀಜಮ್ ॥ ಗಿರಾ । ಚ । ಶ್ರುಷ್ಟಿಃ । ಸಭರಾ ಇತಿ ಸ-ಭರಾಃ । ಅಸತ್ । ನಃ । ನೇದೀಯಃ । ಇತ್ । ಸೃಣ್ಯಾ । ಪಕ್ವಮ್ । ಏತಿ । ಅಯತ್ ॥

---

| ಮಂತ್ರ | ವಿನಿಯೋಗ |
|---|---|
| ಯುನಕ್ತ...ಆಯತ್ ॥ | ನೇಗಿಲನ್ನು ಹೂಡಲು ಎರಡನೆಯ ಮತ್ತು ಕಡೆಯ ಮಂತ್ರ. |

---

[ಕರ್ಷಕರೇ!] **ಸೀರಾ**=ನೇಗಿಲುಗಳನ್ನು; **ಯುನಕ್ತ**=ಹೂಡಿರಿ; **ಯುಗಾ**=ನೊಗಗಳನ್ನು; **ವಿ ತನೋತ**=ಜೋಡಿಸಿರಿ; **ಚ**=ಮತ್ತು; **ಕೃತೇ**=ಸಿದ್ಧಪಡಿಸಿದ; **ಇಹ ಯೋನೌ**=ಈ ಭೂಮಿಯಲ್ಲಿ; **ಗಿರಾ**=ಸಮೃದ್ಧವಾಗಲೆಂಬ ಮಂಗಲವಾಕ್ಯದಿಂದ ಕೂಡಿದ; **ಬೀಜಮ್**=ಸಸ್ಯಬೀಜಗಳನ್ನು; **ವಪತ**=ಬಿತ್ತಿರಿ. **ಶ್ರುಷ್ಟಿಃ**=ಅಲ್ಲಿ ಹುಟ್ಟಿದ ಮೊಳಕೆಯು; **ನಃ**=ನಮಗೆ; **ಸಭರಾಃ**=ಫಲಭಾರಸಹಿತವಾಗಿ; **ಅಸತ್**=ಆಗಲಿ. **ಪಕ್ವಮ್ ನೇದೀಯಃ ಇತ್**= ಫಲವು ಸ್ವಲ್ಪಕಾಲದಲ್ಲಿಯೇ; **ಅಸತ್**=ಪಕ್ವವಾಗಲಿ; **ಸೃಣ್ಯಾ**=ಕೊಯ್ಯುವ ಸಾಧನದಿಂದ ಕೊಯ್ಯಲ್ಪಟ್ಟು; **ಆ ಅಯತ್**=ಸಮೀಪಕ್ಕೆ ಬರಲಿ.

---

ಎಲೈ! ಕರ್ಷಕರೇ! ಹಗ್ಗಗಳನ್ನು ಚೆನ್ನಾಗಿ ಇಟ್ಟು ದೋಣಿಗಳನ್ನು ಮಾಡಿ ಬಾವಿಯನ್ನು ನೀರಿನಿಂದ ತುಂಬುವಂತೆ ಮಾಡಲು ಬಾವಿಯ ಕೆಸರನ್ನು ತೆಗೆದು ನೀರು ಚೆನ್ನಾಗಿ ಒಸರುವಂತೆ ಮಾಡೋಣ/ಮಾಡಿರಿ.

ಕೆಸರನ್ನು ತೆಗೆದು ಬಾವಿಯನ್ನು ಶೋಧಿಸಿದರೆ ನೀರು ಮೇಲಕ್ಕೆ ಬರುತ್ತದೆ. ಕೆಲವು ಕಡೆ ಕಪಿಲೆ ಬಾವಿಗಳೂ ಇರುತ್ತವೆ. [ಸೇದಿ ತುಂಬಿಸಲ್ಪಡುವ ಬಾವಿಗಳು] ಅವುಗಳ

ಲಾಂಗಲಂ ಪವೀರವಗ್ಂ ಸುಶೇವಗ್ಂ ಸುಮತಿತ್ಸರು ।
ಉದಿತ್ಕೃಷತಿ ಗಾಮವಿಂ ಪ್ರಫರ್ವ್ಯಂ ಚ ಪೀವರೀಮ್ ॥
ಪ್ರಸ್ಥಾವದ್ರಥವಾಹನಮ್ ।

---

ಲಾಂಗಲಮ್ । ಪವೀರವಮ್ । ಸುಶೇವಮಿತಿ ಸು-ಶೇವಮ್ । ಸುಮತಿತ್ಸರ್ವಿತಿ ಸುಮತಿ-ತ್ಸರು ॥ ಉದಿತಿ । ಇತ್ । ಕೃಷತಿ । ಗಾಮ್ । ಅವಿಮ್ । ಪ್ರಫರ್ವ್ಯಮಿತಿ ಪ್ರ-ಫರ್ವ್ಯಮ್ । ಚ । ಪೀವರೀಮ್ ॥ ಪ್ರಸ್ಥಾವದಿತಿ ಪ್ರಸ್ಥ-ವತ್ । ರಥವಾಹನಮಿತಿ ರಥ-ವಾಹನಮ್ ॥

---

| ಮಂತ್ರ | ವಿನಿಯೋಗ |
|---|---|
| ಲಾಂಗಲಂ...ವಾಹನಮ್ ॥ | ಉಳುಮೆಯನ್ನು ಮಾಡಲು ಪ್ರಥಮಮಂತ್ರ. |

---

ಪವೀರವಮ್=ವಜ್ರದಂತೆ ಅತಿ ತೀಕ್ಷ್ಣವಾಗಿರುವ; ಸುಶೇವಮ್=ಉಪಯೋಗಿಸಲು ಸುಲಭವಾಗಿರುವ; ಸುಮತಿತ್ಸರು=ಚೆನ್ನಾಗಿದೆಯೆಂದು (ಕರ್ಷಕರು) ಹೇಳುವ ಹಿಡಿಯುಳ್ಳ; ಲಾಂಗಲಮ್=ನೇಗಿಲು; ಉತ್ ಇತ್ ಕೃಷತಿ=ದೊಡ್ಡ ಮಣ್ಣು ಹೆಂಟೆಗಳು ಮೇಲಕ್ಕೆದ್ದು ಬರುವಂತೆ ಉಳುತ್ತದೆ/ಉಳಲಿ. [ಈ ಉಳುಮೆಯಿಂದ] [ಒಳ್ಳೆಯ ಕೃಷಿಯಿಂದ] [ಯಜಮಾನನು] ಪ್ರಫರ್ವ್ಯಮ್=ಪ್ರಥಮವಯಸ್ಸಿನ; ಚ=ಮತ್ತು; ಪೀವರೀಮ್=ಪುಷ್ಟವಾಗಿರುವ; ಗಾಮ್=ಗೋವುಗಳನ್ನೂ; ಅವಿಮ್=ಕುರಿಗಳನ್ನೂ; ಪ್ರಸ್ಥಾವತ್=ಪ್ರಯಾಣಸಮರ್ಥವಾದ; ರಥವಾಹನಮ್=ರಥವನ್ನು ಎಳೆಯಲು ಸಮರ್ಥವಾದ ಅಶ್ವಾದಿಗಳನ್ನೂ [ಪಡೆಯುತ್ತಾನೆ].

---

ನೀರನ್ನು ಸಂಗ್ರಹಿಸಲು ಮರದ ಅಥವಾ ಕಲ್ಲುಗಳ ದೋಣಿಗಳೂ ಇರುತ್ತವೆ. ಅವುಗಳಿಂದ ನೀರು ಸೋರಿ ಹೋಗದಂತೆ ದೃಢವಾಗಿ ನಿರ್ಮಿಸಿರುತ್ತಾರೆ. ಇಂತಹ ಬಾವಿಗಳನ್ನು/ದೋಣಿಗಳನ್ನು ನೀರಿನಿಂದ ತುಂಬುತ್ತೇವೆ.

ಶುನಂ ನಃ ಫಾಲಾ ವಿ ತುದಂತು ಭೂಮಿಗ್ಂ ಶುನಂ ಕೀನಾಶಾ ಅಭಿ ಯಂತು ವಾಹಾನ್ ॥ ಶುನಂ ಪರ್ಜನ್ಯೋ ಮಧುನಾ ಪಯೋಭಿಃ ಶುನಾಸೀರಾ ಶುನಮಸ್ಮಾಸು ಧತ್ತಮ್ ।

---

ಶುನಮ್ । ನಃ । ಫಾಲಾಃ । ವೀತಿ । ತುದಂತು । ಭೂಮಿಮ್ । ಶುನಮ್ । ಕೀನಾಶಾಃ । ಅಭೀತಿ । ಯಂತು । ವಾಹಾನ್ ॥ ಶುನಮ್ । ಪರ್ಜನ್ಯಃ । ಮಧುನಾ । ಪಯೋಭಿರಿತಿ ಪಯಃ-ಭಿಃ । ಶುನಾಸೀರಾ । ಶುನಮ್ । ಅಸ್ಮಾಸು । ಧತ್ತಮ್ ॥

---

| ಮಂತ್ರ | ವಿನಿಯೋಗ |
| --- | --- |
| ಶುನಂ...ಧತ್ತಮ್ ॥ | ಉಳುಮೆಯನ್ನು ಮಾಡಲು ಎರಡನೆಯ ಮತ್ತು ಅಂತಿಮಮಂತ್ರ. |

---

▲ **ನಃ**=ನಮಗೆ; **ಶುನಮ್**=ಸುಖವಾಗುವಂತೆ; **ಫಾಲಾಃ**=ನೇಗಿಲಿನ ಅಗ್ರಭಾಗಗಳು [ಗುಳಗಳು ಇರುವ ಭಾಗಗಳು]; **ಭೂಮಿಮ್**=ಭೂಮಿಯನ್ನು; **ವಿ ತುದಂತು**= ವಿಶೇಷವಾಗಿ ಉಳಲಿ; **ಶುನಮ್**=ಸುಖವಾಗಿರುವಂತೆ; **ಕೀನಾಶಾಃ**=ರೈತರು; **ವಾಹಾನ್**=ಎತ್ತುಗಳನ್ನು; **ಅಭಿಯಂತು**=ಸುತ್ತಲೂ ಪ್ರೇರಿಸುತ್ತಾ ತಿರುಗಲಿ; **ಶುನಮ್** =ಸುಖವಾಗಿರುವಂತೆ; **ಪರ್ಜನ್ಯಃ**=ಪರ್ಜನ್ಯದೇವನು; **ಮಧುನಾ**=ಮಧುರರಸ ದಿಂದ ಕೂಡಿರುವ; **ಪಯೋಭಿಃ**=ನೀರುಗಳಿಂದ [ಕೂಡಿರುವ ಮಳೆಯನ್ನು ಸುರಿಸಲಿ] **ಶುನಾಸೀರಾ**=ವಾಯ್ವಾದಿತ್ಯರು; **ಅಸ್ಮಾಸು**=ನಮ್ಮಲ್ಲಿ; **ಶುನಮ್**=ಸುಖವನ್ನು; **ಧತ್ತಮ್**=ಉಂಟುಮಾಡಲಿ.

---

ಕರ್ಷಕರಿಗೆ ನೀಡುವ ಪ್ರೈಷರೂಪದ ಈ ಮಂತ್ರದಲ್ಲಿ ವ್ಯವಸಾಯದ ಕ್ರಮವಾದ ಕಾರ್ಯಗಳನ್ನು ನಿರೂಪಿಸಲಾಗಿದೆ. ಮೊದಲು ನೇಗಿಲನ್ನು ಜೋಡಿಸುವುದು, ಆದಕ್ಕೆ ನೊಗವನ್ನು ಕಟ್ಟುವುದು, ಉತ್ತು ನೆಲವನ್ನು ಹಸನಾಗಿಸುವುದು. ಅಲ್ಲಿ ಬೀಜವನ್ನು ಬಿತ್ತುವುದು; ಮೊಳೆತ ಸಸಿಗಳನ್ನು ಚೆನ್ನಾಗಿ ನೋಡಿಕೊಳ್ಳುವುದು; ಪೈರು ಫಲಿಸಿದ

**ಕಾಮಂ ಕಾಮದುಘೇ ಧುಕ್ಷ್ವ ಮಿತ್ರಾಯ ವರುಣಾಯ ಚ ।**

**ಇಂದ್ರಾಯಾಗ್ನಯೇ ಪೂಷ್ಣ ಓಷಧೀಭ್ಯಃ ಪ್ರಜಾಭ್ಯಃ ॥**

---

ಕಾಮಮ್ । ಕಾಮದುಘ ಇತಿ ಕಾಮ-ದುಘೇ । ಧುಕ್ಷ್ವ । ಮಿತ್ರಾಯ । ವರುಣಾಯ । ಚ ॥ ಇಂದ್ರಾಯ । ಅಗ್ನಯೇ । ಪೂಷ್ಣೇ । ಓಷಧೀಭ್ಯ ಇತ್ಯೋಷಧಿ-ಭ್ಯಃ । ಪ್ರಜಾಭ್ಯ ಇತಿ ಪ್ರ-ಜಾಭ್ಯಃ ॥

---

| ಮಂತ್ರ | ವಿನಿಯೋಗ |
|---|---|
| **ಕಾಮಂ...ಪ್ರಜಾಭ್ಯಃ ॥** | ಪ್ರದಕ್ಷಿಣವಾಗಿ ಉತ್ತರದಿಕ್ಕಿಗೆ ಎತ್ತುಗಳನ್ನು ಬಿಡಲು. |

---

**ಕಾಮದುಘೇ**=ಕಾಮಗಳನ್ನು/ಭೋಗಗಳನ್ನು ಸುರಿಸುವ ನೇಗಿಲಿನ ಉತ್ತಿರುವ ಸಾಲೇ! **ಮಿತ್ರಾಯ**=ಮಿತ್ರದೇವನಿಗೂ; **ವರುಣಾಯ ಚ**=ಮತ್ತು ವರುಣದೇವನಿಗೂ; **ಇಂದ್ರಾಯ**=ಇಂದ್ರನಿಗೂ; **ಅಗ್ನಯೇ**=ಅಗ್ನಿದೇವನಿಗೂ; **ಪೂಷ್ಣೇ**=ಪೂಷದೇವನಿಗೂ; **ಓಷಧೀಭ್ಯಃ**=ಸಸ್ಯವರ್ಗಕ್ಕೂ; **ಪ್ರಜಾಭ್ಯಃ**=ಪ್ರಜೆಗಳಿಗೂ; **ಕಾಮಮ್**=ಭೋಗಗಳನ್ನು; **ಧುಕ್ಷ್ವ**=ಸುರಿಸು/ನಿರಂತರವಾಗಿ ಉಂಟು ಮಾಡು.

---

ಮೇಲೆ ಕೊಯ್ದು ಮನೆಗೆ ಸಾಗಿಸುವುದು. ಹೀಗೆ ಮಾಡಿರಿ ಎಂದು ಪ್ರೈಷಮಂತ್ರವು ಹೇಳುವುದು.

ಈ ನೇಗಿಲು ವಜ್ರದಂತೆ ತೀಕ್ಷ್ಣವಾಗಿದೆ. ಹಿಡಿಯಲೂ ತೊಂದರೆಯಿಲ್ಲ. ಇಂತಹ ನೇಗಿಲಿನಿಂದ ಒಳ್ಳೆಯ ಕೃಷಿಯಾಗುತ್ತದೆ. ಒಳ್ಳೆಯ ಪೈರಿನಿಂದ ಯಜಮಾನನು ಗವಾದಿ ಸಂಪತ್ತನ್ನು ಪಡೆಯುವಂತಾಗಲಿ.

ನೇಗಿಲಿನ ಅಗ್ರಭಾಗಗಳು ಸುಖವಾಗಿ ಭೂಮಿಯನ್ನು ಉಳಲಿ. ರೈತರು ತೊಂದರೆಯಿಲ್ಲದೆ ಎತ್ತುಗಳನ್ನು ಸುತ್ತಾಡಿಸಲಿ. ಪರ್ಜನ್ಯದೇವನು ಮಧುರವಾದ ನೀರುಳ್ಳ ಮಳೆಯನ್ನು ಸುಖವಾಗುವಂತೆ ಸುರಿಸಲಿ. ವಾಯು-ಆದಿತ್ಯರು ನಮಗೆ ಸುಖವನ್ನು ಕೊಡಲಿ.

ನೇಗಿಲಿನ ಉತ್ತಿರುವ ಸಾಲು ಉತ್ತಮವಾದ ಪೈರಿನ ಮೂಲಕ ಬೇಡಿದುದನ್ನು ನೀಡುತ್ತದೆ. ಅದು ಮಿತ್ರ-ವರುಣ-ಇಂದ್ರ-ಪೂಷ-ಅಗ್ನಿ ದೇವತೆಗಳಿಗೂ, ಪ್ರಜೆಗಳಿಗೂ

ಘೃತೇನ ಸೀತಾ ಮಧುನಾ ಸಮಕ್ತಾ ವಿಶ್ವೈರ್ದೇವೈರನು ಮತಾ ಮರುದ್ಭಿಃ । ಊರ್ಜಸ್ವತೀ ಪಯಸಾ ಪಿನ್ವಮಾನಾಽಸ್ಮಾನ್ಸೀತೇ ಪಯಸಾಽಭ್ಯಾವವೃತ್ಸ್ವ ॥ ೨೩-5 ॥

[ಸಮೋಕಸೌ ವಿಶ್ವರೂಪೇ ವಿದುರ್ನಿರ್‌ಋತಿರಭಿಚಷ್ಟ ಇಹ ಮಿತ್ರಾಯ ದ್ವಾವಿꣳಶತಿಶ್ಚ ॥]

ಘೃತೇನ । ಸೀತಾ । ಮಧುನಾ । ಸಮಕ್ತೇತಿ ಸಮ್-ಅಕ್ತಾ । ವಿಶ್ವೈಃ । ದೇವೈಃ । ಅನುಮತೇ ತ್ಯನು-ಮತಾ । ಮರುದ್ಭಿರಿತಿ ಮರುತ್-ಭಿಃ ॥ ಊರ್ಜಸ್ವತೀ । ಪಯಸಾ । ಪಿನ್ವಮಾನಾ । ಅಸ್ಮಾನ್ । ಸೀತೇ । ಪಯಸಾ । ಅಭ್ಯಾವವೃತ್ಸ್ವೇತ್ಯಭಿ-ಆವವೃತ್ಸ್ವ ॥ (೨೩) ॥

| ಮಂತ್ರ | ವಿನಿಯೋಗ |
|---|---|
| ಘೃತೇನ...ಅಭ್ಯಾವವೃತ್ಸ್ವ ॥ | ನೇಗಿಲಿನ ಸಾಲುಗಳ ಒಳಭಾಗಗಳನ್ನು ಸ್ಪರ್ಶಿಸಲು. |

🔔 ಮಧುನಾ=ರುಚಿಯಾದ; ಘೃತೇನ=ನೀರಿನಿಂದ; ಸಮಕ್ತಾ=ತೋಯಿಸಲ್ಪಟ್ಟ; ಸೀತಾ=ನೇಗಿಲಿನ ಸಾಲು; ವಿಶ್ವೈಃ ದೇವೈಃ=ಸಮಸ್ತದೇವತೆಗಳಿಂದಲೂ; ಮರುದ್ಭಿಃ=ಮರುದ್ದೇವತೆಗಳಿಂದಲೂ; ಅನುಮತಾ=[ಚೆನ್ನಾಗಿರುವಳೆಂದು] ಅಂಗೀಕೃತಳಾಗಿದ್ದಾಳೆ; ಸೀತೇ=ಎಲೈ! ನೇಗಿಲಿನ ಸಾಲೇ!; ಪಯಸಾ ಪಿನ್ವಮಾನಾ= ನೀರಿನಿಂದ ತೋಯಿಸಲ್ಪಟ್ಟವಳಾಗಿ; ಊರ್ಜಸ್ವತೀ=ಬಲವುಳ್ಳವಳಾಗಿರುವೆ; ಅಸ್ಮಾನ್= ನಮ್ಮನ್ನು; ಪಯಸಾ=ನೀರಿನಿಂದ; [ತುಂಬಿಕೊಂಡವಳಾಗಿ] ಅಭ್ಯಾವವೃತ್ಸ್ವ= ಸುತ್ತುವರೆದುಕೋ.

ಸಸ್ಯವರ್ಗಕ್ಕೂ ಕ್ಷೇಮಕರವಾಗಲಿ.

ಈ ಮಂತ್ರದಿಂದ ನೇಗಿಲಿನ ಸಾಲಿನ ಅಭಿಮಂತ್ರಣವನ್ನು ಮಾಡಬೇಕು. ದೇವತೆಗಳೆಲ್ಲರೂ ಈ ಸಾಲನ್ನು ಚೆನ್ನಾಗಿದೆಯೆಂದು ಒಪ್ಪಿದ್ದಾರೆ. ಹೇ! ನೇಗಿಲಿನ ಸಾಲೇ! ನೀನು ನೀರು ತುಂಬಿ ಸುತ್ತುವರೆದು ನಿಲ್ಲು.

---

## ವಿನಿಯೋಗಸಂಗ್ರಹ

1-4ಸಂ ಗಾರ್ಹಪತ್ಯ ಉಖ್ಯಾಗ್ನಿಂ ಚತುರ್ಭಿರ್ನಿರ್ವಪೇದಮುಮ್ ।
5ಮಾತಾಶಿಕ್ಯಾದುಖಾಂ ಮುಂಚೇದ್ಯದ್6 ಶಿಕ್ಯಪರಿಗ್ರಹಃ ॥
7ನಮೋ ನೈರ್ಋತದೇಶೇ ತಚ್ಛಿಕ್ಯಂ ತ್ಯಕ್ತ್ವಾ 8ಯದಿತ್ಯತಃ ।
ಶಿಕ್ಯಜಾಲೇನ ಯಾಃ ಕೃಷ್ಣಾ ಇಷ್ಟಕಾಃ ಸ್ಥಾಪಯೇದಮೂಃ ॥
9-11ಯಸ್ಯಾಸ್ತ್ರಿಭಿಸ್ತಿಸ್ರ ಏತಾಃ ಕೃಷ್ಣಾ ಉಪದಧಾತಿ ಹಿ ।
12ನಿವೇಽಗ್ನಿಮುಪತಿಷ್ಠೇತ ಸಂ ವ13 ಸಂಪ್ರೇಷ್ಯತೀತರಾನ್ ॥
14ನಿಷ್ಕೃತಾಹಾಽವಟೇ ಸಿಂಚೇತ್ ಸೀರಾ15-16ದ್ವಾಭ್ಯಾಂ ಹಲಾರ್ಪಣಮ್ ।
17-18ಲಾಂಗ ದ್ವಾಭ್ಯಾಂ ಕೃಷೇತ್ 19ಕಾಮಮಾವರ್ತೇತ ಪ್ರದಕ್ಷಿಣಮ್ ॥
20ಘೃತೇಽಂತರಾಲೇ ಸಂಸ್ಪರ್ಶ ಇತಿ ಮಂತ್ರಾಸ್ತು ವಿಂಶತಿಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–20

---

## ಅನುವಾಕದ ವಿಶೇಷವಿಷಯಗಳು

### ಅ) ಮೀಮಾಂಸಾ

೧) 'ನಿವೇಶನಃ...ಪಥೀನಾಮ್'ಎಂಬ ಮಂತ್ರದಲ್ಲಿ ಇಂದ್ರಶಬ್ದದ ಅರ್ಥವೇನು? [ಜೈ.ಸೂ. 3.2]

ಈ ಚಯನಪ್ರಕರಣದಲ್ಲಿ 'ನಿವೇಶನ ಇತಿ ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ' ಎಂಬ ವಾಕ್ಯವಿದೆ. ಈ ವಾಕ್ಯದಲ್ಲಿ ಇಂದ್ರೋ ದೇವತಾ ಅಸ್ಯಾ ಇತಿ ಐಂದ್ರೀ ಋಕ್

ಎಂದು ತಿಳಿಯಬೇಕಾಗಿದೆ. ಈ ಋಕ್ಕಿನಲ್ಲಿರುವ ಇಂದ್ರಶಬ್ದದಿಂದ ಪ್ರಕಾಶಿತವಾಗುವ ದೇವತೆಯು ಪ್ರಸಿದ್ಧನಾದ ಇಂದ್ರನಾದರೆ ಗಾರ್ಹಪತ್ಯಾಗ್ನಿಯ ಉಪಸ್ಥಾನವೆಂಬುದು ಹೊಂದುವುದಿಲ್ಲ. **ಗಾರ್ಹಪತ್ಯಮುಪತಿಷ್ಠತೇ** ಎಂಬಲ್ಲಿ ಗಾರ್ಹಪತ್ಯಶಬ್ದಕ್ಕೆ ಇಂದ್ರನೆಂದಾಗಲೀ, ಗಾರ್ಹಪತ್ಯದ ಸಮೀಪಪ್ರದೇಶವೆಂದಾಗಲೀ ಅರ್ಥ ಮಾಡಿದರೆ ಮಂತ್ರದಲ್ಲಿರುವ 'ಇಂದ್ರ' ಶಬ್ದದ ಅರ್ಥವು ಹೊಂದದು. ಹೀಗೆ ಮಂತ್ರ-ಬ್ರಾಹ್ಮಣಗಳಲ್ಲಿರುವ ಶಬ್ದಾರ್ಥವು ಹೊಂದಿಕೊಳ್ಳದೇ ಇರುವಾಗ ಮಂತ್ರದಲ್ಲಿರುವ ಇಂದ್ರಶಬ್ದದ ಅರ್ಥವೇನು? ಎಂಬುದು ಇಲ್ಲಿನ **ಸಂಶಯ.**

ಮಂತ್ರದಲ್ಲಿರುವ ಇಂದ್ರಶಬ್ದಕ್ಕೆ ಮುಖ್ಯವಾದ ಅರ್ಥವನ್ನು ಇಟ್ಟುಕೊಂಡು ವಿನಿಯೋಜಕವಾಕ್ಯದಲ್ಲಿರುವ ಗಾರ್ಹಪತ್ಯ ಶಬ್ದಕ್ಕೆ ಇಂದ್ರ ಎಂಬ ಗೌಣಾರ್ಥವನ್ನು ಕಲ್ಪಿಸಬೇಕು. ಇಲ್ಲಿನ **ಪೂರ್ವಪಕ್ಷ.**

ಶ್ರುತಿಯಿಂದ 'ನಿವೇಶನಃ' ಎಂಬ ಈ ಮಂತ್ರವು ಗಾರ್ಹಪತ್ಯೋಪಸ್ಥಾನದಲ್ಲಿ ವಿಹಿತವಾಗಿದೆ. ವಿಧಿವಾಕ್ಯವು ಪ್ರಬಲ. ಆದುದರಿಂದ ವಿಧಿವಾಕ್ಯಕ್ಕೆ ಅನುಗುಣವಾಗಿ ಮತ್ತು ವಿಧಿವಾಕ್ಯದಲ್ಲಿ ಲಾಕ್ಷಣಿಕವಾದ ಅರ್ಥವನ್ನು ಕಲ್ಪಿಸುವುದು ಯುಕ್ತವಲ್ಲವಾದುದರಿಂದ ಮಂತ್ರದಲ್ಲಿರುವ ಇಂದ್ರಶಬ್ದಕ್ಕೆ **'ಇದಿ-ಪರಮೈಶ್ವರ್ಯೇ'** ಎಂಬ ಧಾತ್ವರ್ಥಕ್ಕೆ ಅನುಗುಣವಾಗಿ ಪರಮೈಶ್ವರ್ಯಯುಕ್ತನಾದ ವಹ್ನಿ ಎಂಬ ಅರ್ಥವನ್ನು ಇಟ್ಟುಕೊಳ್ಳಬೇಕು. ಇದು ಯೌಗಿಕವಾದ ಅರ್ಥವಾಗುತ್ತದೆ. ಇದು ಇಲ್ಲಿನ **ಸಿದ್ಧಾಂತ.**

# ॥ ಷಷ್ಠೋಽನುವಾಕಃ ॥

**ಯಾ ಜಾತಾ ಓಷಧಯೋ ದೇವೇಭ್ಯಸ್ತ್ರಿಯುಗಂ ಪುರಾ ।**

---

ಯಾಃ । ಜಾತಾಃ । ಓಷಧಯಃ । ದೇವೇಭ್ಯಃ । ತ್ರಿಯುಗಮಿತಿ ತ್ರಿ–ಯುಗಮ್ । ಪುರಾ ॥

---

ಐದನೆಯ ಅನುವಾಕದಲ್ಲಿ ಅಗ್ನಿಕ್ಷೇತ್ರಕರ್ಷಣವು ಹೇಳಲ್ಪಟ್ಟಿತು. ಈ ಆರನೆಯ ಅನುವಾಕದಲ್ಲಿ ಹದಿನಾಲ್ಕು ಮಂತ್ರಗಳಿಂದ ಓಷಧಿವಾಪವು ಹೇಳಲ್ಪಡುತ್ತದೆ.

---

| ಮಂತ್ರ | ವಿನಿಯೋಗ |
|---|---|
| **ಯಾ ಜಾತಾ...ಸಪ್ತ ಚ ॥** | ಓಷಧಿಗಳನ್ನು ಬಿತ್ತಲು ಮೊದಲನೆಯ ಮಂತ್ರ. |

---

**ಯಾಃ ಓಷಧಯಃ**=ಯಾವ ಓಷಧಿಗಳು; **ಪುರಾ**=ಮೊದಲು; [ಸೃಷ್ಟಿಯ ಆದಿಯಲ್ಲಿ] ***ತ್ರಿಯುಗಮ್**=ವರ್ಷಾಕಾಲ, ಶರತ್ಕಾಲ ಮತ್ತು ವಸಂತಕಾಲಗಳಲ್ಲಿ; **ದೇವೇಭ್ಯಃ**=ದೇವತೆಗಳಿಂದ/ದೇವತೆಗಳ ಅನುಗ್ರಹದಿಂದ; **ಜಾತಾಃ**=ಜನಿಸಿವೆಯೋ;

---

ಸೃಷ್ಟಿಯ ಆದಿಯಲ್ಲಿ ದೇವತೆಗಳ ಅನುಗ್ರಹದಿಂದ ಮಳೆಗಾಲ, ಚಳಿಗಾಲ ಮತ್ತು ವಸಂತಕಾಲದಲ್ಲಿ ಜನಿಸಿದ ಅಸಂಖ್ಯಾತ ಸಸ್ಯಗಳು ಪ್ರಾಣಿಗಳ ಪೋಷಕಗಳಾಗಿವೆ.

---

* ಈ ಮಂತ್ರದಲ್ಲಿ **'ಯುಗ'** ಶಬ್ದವನ್ನು ಕಾಲವಿಶೇಷವಾಚಿಯಾಗಿಯೂ, **'ಶತ'** ಶಬ್ದವನ್ನು ಅಸಂಖ್ಯಾತವಾಚಿಯನ್ನಾಗಿಯೂ ಬಳಸಲಾಗಿದೆ. **'ಓಷಧ್ಯಃ ಫಲಪಾಕಾಂತಾಃ'** ಎಂಬ ಕೋಶದಂತೆ ಒಮ್ಮೆ ಫಲಿಸಿ, ಪಾಕವಾಗುವ ಬತ್ತ ಮುಂತಾದವುಗಳಿಗೆ **'ಓಷಧಿ'** ಎಂಬ ಹೆಸರಿದ್ದರೂ ಇಲ್ಲಿ ಸಸ್ಯಸಾಮಾನ್ಯವಾಚಿಯಾಗಿ ಬಳಸಲಾಗಿದೆ.

ಮಂದಾಮಿ ಬಭ್ರೂಣಾಮಹಗ್ಂ ಶತಂ ಧಾಮಾನಿ ಸಪ್ತ ಚ ॥

ಶತಂ ವೋ ಅಂಬ ಧಾಮಾನಿ ಸಹಸ್ರಮುತ ವೋ ರುಹಃ ।

ಅಥಾ ಶತಕ್ರತ್ವೋ ಯೂಯಮಿಮಂ ಮೇ ಅಗದಂ ಕೃತ ॥

---

ಮಂದಾಮಿ । ಬಭ್ರೂಣಾಮ್ । ಅಹಮ್ । ಶತಮ್ । ಧಾಮಾನಿ । ಸಪ್ತ । ಚ ॥

ಶತಮ್ । ವಃ । ಅಂಬ । ಧಾಮಾನಿ । ಸಹಸ್ರಮ್ । ಉತ । ವಃ । ರುಹಃ ॥ ಅಥ ।

ಶತಕ್ರತ್ವ ಇತಿ ಶತ–ಕ್ರತ್ವಃ । ಯೂಯಮ್ । ಇಮಮ್ । ಮೇ । ಅಗದಮ್ । ಕೃತ ॥

---

| ಮಂತ್ರ | ವಿನಿಯೋಗ |
|---|---|
| ಶತಂ ವೋ...ಕೃತ ॥ | ಓಷಧಿವಾಪದ ಎರಡನೆಯ ಮಂತ್ರ. |

---

**ಬಭ್ರೂಣಾಮ್**=ಪ್ರಾಣಿಗಳನ್ನು ಪೋಷಿಸುವ/ಪರಿಪಾಕದಿಂದ ಪಿಂಗಲವರ್ಣದಿಂದ ಕೂಡಿರುವ ಆ ಓಷಧಿಗಳ; **ಶತಮ್ ಧಾಮಾನಿ**=ನೂರಾರು ಜಾತಿಗಳನ್ನು; **ಸಪ್ತ ಚ**=ವಿಶೇಷವಾಗಿ ಏಳು ಗ್ರಾಮ್ಯಜಾತಿಗಳು ಮತ್ತು ಏಳು ಆರಣ್ಯಧಾನ್ಯಜಾತಿಗಳು–ಹೀಗೆ ಏಳು ಜಾತಿಗಳನ್ನು [ಗಮನಿಸಿ]; **ಅಹಮ್ ಮಂದಾಮಿ**=ನಾನು ಸಂತೋಷಿಸುತ್ತೇನೆ; **ಅಂಬ**=ತಾಯಿಯಂತೆ ಇರುವ ಓಷಧಿಗಳೇ! **ವಃ**=ನಿಮ್ಮ; **ಧಾಮಾನಿ**=ಜಾತಿಗಳು ಅಥವಾ ಸ್ಥಾನಗಳು; **ಶತಮ್**=ನೂರಾರು. **ಉತ**=ಮತ್ತು; **ಸಹಸ್ರಮ್**=ಸಾವಿರಾರು. **ಉತ**=ಮತ್ತು; **ವಃ ರುಹಃ**=ನಿಮ್ಮ ಮೊಳಕೆಗಳೂ; **ಶತಮ್ ಸಹಸ್ರಮ್**=ನೂರಾರು ಮತ್ತು ಸಾವಿರಾರು; **ಅಥ ಶತಕ್ರತ್ವಃ**=[ಹೀಗೆ ಬೆಳೆದು] ನೂರಾರು ಯಾಗಗಳಿಗೆ ಸಾಧಕವಾಗಿರುವ ಓಷಧಿಗಳೇ! **ಯೂಯಮ್**=ನೀವು; **ಮೇ**=ನನ್ನ/ನಮ್ಮ; **ಇಮಮ್**=ಈ ಯಜಮಾನನನ್ನು; **ಅಗದಮ್ ಕೃತ**=ರೋಗರಹಿತನನ್ನಾಗಿ ಮಾಡಿರಿ.

---

ಅವುಗಳು ಆರಣ್ಯ–ಗ್ರಾಮ್ಯ ಎಂದು ಏಳು ಧಾನ್ಯಗಳ ಎರಡು ಭಾಗವಾಗಿವೆ. ಈ ಎಲ್ಲ

ಪುಷ್ಪಾವತೀಃ ಪ್ರಸೂವತೀಃ ಫಲಿನೀರಫಲಾ ಉತ । ಅಶ್ವಾ ಇವ ಸಜಿತ್ವರೀರ್ವೀರುಧಃ ಪಾರಯಿಷ್ಣವಃ ॥ ಓಷಧೀರಿತಿ ಮಾತರಸ್ತದ್ವೋ ದೇವೀರುಪ ಬ್ರುವೇ ।

---

ಪುಷ್ಪಾವತೀರಿತಿ ಪುಷ್ಪ-ವತೀಃ । ಪ್ರಸೂವತೀರಿತಿ ಪ್ರ-ಸೂವತೀಃ । ಫಲಿನೀಃ । ಅಫಲಾಃ । ಉತ ॥ ಅಶ್ವಾಃ । ಇವ । ಸಜಿತ್ವರೀರಿತಿ ಸ-ಜಿತ್ವರೀಃ । ವೀರುಧಃ । ಪಾರಯಿಷ್ಣವಃ ॥ ಓಷಧೀಃ । ಇತಿ । ಮಾತರಃ । ತತ್ । ವಃ । ದೇವೀಃ । ಉಪೇತಿ । ಬ್ರುವೇ ॥

---

| ಮಂತ್ರ | ವಿನಿಯೋಗ |
|---|---|
| ಪುಷ್ಪಾವತೀಃ...ಪಾರಯಿಷ್ಣವಃ ॥ | ಬೀಜಾವಾಪದ ಮೂರನೆಯ ಮಂತ್ರ. |
| ಓಷಧೀರಿತಿ...ಚಾತಯಮಾನಾಃ ॥ | ಬೀಜಾವಾಪದ ನಾಲ್ಕನೆಯ ಮಂತ್ರ. |

---

▲ **ಪುಷ್ಪಾವತೀಃ**=[ಓಷಧಿಗಳಲ್ಲಿ ಕೆಲವು] ಕೇವಲ ಹೂಗಳನ್ನು ಬಿಡತಕ್ಕವುಗಳು; [ಕೆಲವು] **ಪ್ರಸೂವತೀಃ**=ಹೂವುಗಳನ್ನೂ ಫಲಗಳನ್ನೂ ಹೊಂದಿರುತ್ತವೆ; **ಉತ**=ಮತ್ತು [ಕೆಲವು] **ಫಲಿನೀಃ**=ಫಲಮಾತ್ರವುಳ್ಳವುಗಳು; [ಮತ್ತೆ ಕೆಲವು] **ಅಫಲಾಃ**=ಹೂವು-ಹಣ್ಣುಗಳಿಲ್ಲದವುಗಳು; **ಸಜಿತ್ವರೀಃ**=ಶೀಘ್ರವಾಗಿ ಹೋಗಿ ಜಯಶೀಲರಾಗುವ; **ಅಶ್ವಾಃ ಇವ**=ಕುದುರೆಗಳಂತೆ; **ವೀರುಧಃ**=ಕೆಲವು ಬಳ್ಳಿಗಳು; **ಪಾರಯಿಷ್ಣವಃ**=[ಒಟ್ಟಾಗಿ ಬೆಳೆದು] ಜೀವನದ ಕೊನೆಯನ್ನು ಮುಟ್ಟುತ್ತವೆ. ▲ **ಮಾತರಃ**=ಎಲೈ! ತಾಯಿಗೆ [ಸಮಾನರಾದ]; **ದೇವೀಃ**=ದೇವತೆಯರೇ! **ಓಷಧೀಃ ಇತಿ**=ಯಾವ ಕಾರಣದಿಂದ ನೀವು ಓಷಧಿಯರಾಗಿದ್ದೀರೋ; **ತತ್**=ಆ ಕಾರಣದಿಂದ; **ವಃ**=ನಿಮ್ಮನ್ನು; **ಉಪ ಬ್ರುವೇ**=ಪ್ರಾರ್ಥಿಸುತ್ತೇನೆ.

ರಪಾಗ್ಂಸಿ ವಿಘ್ನತೀರಿತ ರಪ [ರಪಃ (೨೪) ಚಾತಯ...]

ಶ್ಚಾತಯಮಾನಾಃ ॥ ಅಶ್ವತ್ಥೇ ವೋ ನಿಷದನಂ ಪರ್ಣೇ

ವೋ ವಸತಿಃ ಕೃತಾ । ಗೋಭಾಜ ಇತ್ಕಿಲಾಸಥ

ಯತ್ಸನವಥ ಪೂರುಷಮ್ ॥

---

ರಪಾಗ್ಂಸಿ । ವಿಘ್ನತೀರಿತಿ ವಿ-ಘ್ನತೀಃ । ಇತ । ರಪಃ (೨೪) ಚಾತಯಮಾನಾಃ ॥

ಅಶ್ವತ್ಥೇ । ವಃ । ನಿಷದನಮಿತಿ ನಿ-ಸದನಮ್ । ಪರ್ಣೇ । ವಃ । ವಸತಿಃ । ಕೃತಾ ॥

ಗೋಭಾಜ ಇತಿ ಗೋ-ಭಾಜಃ । ಇತ್ । ಕಿಲ । ಅಸಥ । ಯತ್ । ಸನವಥ ।

ಪೂರುಷಮ್ ॥

---

| ಮಂತ್ರ | ವಿನಿಯೋಗ |
|---|---|
| ಅಶ್ವತ್ಥೇ...ಪೂರುಷಮ್ ॥ | ಓಷಧಿಬೀಜಾವಾಪದ ಐದನೆಯ ಮಂತ್ರ. |

---

**ರಪಾಗ್ಂಸಿ**=ಪಾಪಗಳನ್ನು; **ವಿಘ್ನತೀಃ**=ವಿಶೇಷವಾಗಿ ನಾಶಪಡಿಸುವವರಾಗಿ; **ರಪಃ**=ಪಾಪಫಲವಾದ ದುಃಖವನ್ನು; **ಚಾತಯಮಾನಾಃ**=ಹೋಗಲಾಡಿಸುವವರಾಗಿ; **ಇತ**=[ನಮ್ಮನ್ನು] ಹೊಂದಿರಿ. ▲ ಓಷಧಿದೇವತೆಗಳೇ! **ಅಶ್ವತ್ಥೇ**=ಅಶ್ವತ್ಥವೃಕ್ಷದಲ್ಲಿ; **ವಃ**=ನಿಮ್ಮ; **ನಿಷದನಮ್**=ಇರುವಿಕೆಯು; **ಪರ್ಣೇ**=ಮುತ್ತುಗದ ಮರದಲ್ಲಿ; **ವಃ**=ನಿಮ್ಮ; **ವಸತಿಃ ಕೃತಾ**=ವಾಸಕಾರಣವಾದ ಮನೆಯು ಮಾಡಲ್ಪಟ್ಟಿದೆ. **ಗೋಭಾಜಃ ಇತ್**=[ದೇವತೆಯರಾದರೂ] ಭೂಮಿಯನ್ನು ಹೊಂದಿದವರಾಗಿಯೇ: **ಅಸಥ ಕಿಲ**=ಇರುವಿರಷ್ಟೆ; **ಯತ್**=ಯಾವ ಕಾರಣದಿಂದ; **ಪೂರುಷಮ್**=ಮಾನವನನ್ನು; **ಸನವಥ**=ಅನ್ನದಾನದಿಂದ ಪೋಷಿಸುತ್ತೀರೋ [ಅದರಿಂದ ನಿಮ್ಮ ಸ್ಥಾವರತ್ವವು ಯುಕ್ತವಾಗಿದೆ].

ಯದಹಂ ವಾಜಯನ್ನಿಮಾ ಓಷಧೀರ್ ಹಸ್ತ ಆದಧೇ ।
ಆತ್ಮಾ ಯಕ್ಷ್ಮಸ್ಯ ನಶ್ಯತಿ ಪುರಾ ಜೀವಗೃಭೋ ಯಥಾ ॥

---

ಯತ್ । ಅಹಮ್ । ವಾಜಯನ್ನ್ । ಇಮಾಃ । ಓಷಧೀಃ । ಹಸ್ತೇ । ಆದಧ ಇತ್ಯಾ-ದಧೇ ॥ ಆತ್ಮಾ । ಯಕ್ಷ್ಮಸ್ಯ । ನಶ್ಯತಿ । ಪುರಾ । ಜೀವಗೃಭ ಇತಿ ಜೀವ-ಗೃಭಃ । ಯಥಾ ॥

---

| ಮಂತ್ರ | ವಿನಿಯೋಗ |
|---|---|
| ಯದಹಂ...ಯಥಾ ॥ | ಬೀಜಾವಾಪದ ಆರನೆಯ ಮಂತ್ರ. |

---

ಯತ್=ಯಾವಾಗ; ಅಹಮ್=ನಾನು; ವಾಜಯನ್=ಅನ್ನವನ್ನು ಇಚ್ಛಿಸುತ್ತಾ; ಇಮಾಃ ಓಷಧೀಃ=ಈ ಓಷಧಿಗಳನ್ನು; ಹಸ್ತೇ=ಕೈಯಲ್ಲಿ; ಆದಧೇ=ತೆಗೆದುಕೊಳ್ಳುತ್ತೇನೆಯೋ[ಆಗ] ಯಕ್ಷ್ಮಸ್ಯ ಆತ್ಮಾ=ಹಸಿವೇ ಮೊದಲಾದ ರೋಗಗಳ ಸ್ವರೂಪವು; ಪುರಾ=[ಅನ್ನವನ್ನು ಸೇವಿಸುವ] ಮೊದಲೇ; ಯಥಾ ಜೀವಗೃಭಃ=ಪ್ರಾಣಭಯದಿಂದ ಮೊದಲೇ ಸತ್ತಂತೆ ಮಲಗಿಕೊಳ್ಳುವ ಪ್ರಾಣಿಗಳಂತೆ; ನಶ್ಯತಿ=ನಾಶವಾಗುತ್ತದೆ.

---

ಜಾತಿಯ ಸಸ್ಯಗಳನ್ನು ಗಮನಿಸಿ, ನಾನು ಹರ್ಷಿಸುವೆನು. ಇವುಗಳ ಜಾತಿಗಳನ್ನು [ಸ್ಥಾನಗಳನ್ನು] ತಿಳಿದು ಹರ್ಷಿಸಿ, ಅವುಗಳನ್ನು ಬಿತ್ತುವೆನು.

ಲೋಕಕ್ಕೆ ತಾಯಿಯಂತೆ ಪೋಷಕರಾಗಿರುವ ಓಷಧಿಗಳೇ! ನಿಮ್ಮ ಬಗೆಗಳು ನೂರಾರು ಮತ್ತು ಸಾವಿರಾರು. ನೀವು ನೂರಾರು ಯಾಗಗಳನ್ನು ನಿರ್ವಹಿಸುತ್ತೀರಿ. ನೀವು ಈ ನಮ್ಮ ಯಜಮಾನನನ್ನು ರೋಗರಹಿತನನ್ನಾಗಿ ಮಾಡಿರಿ.

ಸಸ್ಯ-ಲತಾ-ವೃಕ್ಷಾದಿಗಳು ಬಗೆ ಬಗೆಯಾಗಿವೆ. ಕೇವಲ ಹೂಗಳನ್ನು ಬಿಡತಕ್ಕವುಗಳು ಕೆಲವು. ಮತ್ತೆ ಕೆಲವು ಹೂವು-ಹಣ್ಣುಗಳಿರತಕ್ಕವುಗಳು. ಕೆಲವು ಫಲಮಾತ್ರವಿರತಕ್ಕವುಗಳು. ಇನ್ನು ಕೆಲವು ಹೂ-ಹಣ್ಣುಗಳಿಲ್ಲದವುಗಳು. ಮತ್ತೂ ಕೆಲವು ವೇಗವಾಗಿ ಹೋಗಿ ಜಯಿಸುವ ಕುದುರೆಗಳಂತೆ ಚೆನ್ನಾಗಿ ಬೆಳೆದು ಬಹುಕಾಲ ಇರತಕ್ಕವುಗಳು.

**ಯದೋಷಧಯಃ ಸಂಗಚ್ಛಂತೇ ರಾಜಾನಸ್ಸಮಿತಾವಿವ ।**

**ವಿಪ್ರಃ ಸ ಉಚ್ಯತೇ ಭಿಷಗ್ರಕ್ಷೋಹಾಽಮೀವಚಾತನಃ ॥**

---

ಯತ್ । ಓಷಧಯಃ । ಸಂಗಚ್ಛಂತ ಇತಿ ಸಮ್-ಗಚ್ಛಂತೇ । ರಾಜಾನಃ । ಸಮಿತಾವಿತಿ ಸಮ್-ಇತೌ । ಇವ ॥ ವಿಪ್ರಃ । ಸಃ । ಉಚ್ಯತೇ । ಭಿಷಕ್ । ರಕ್ಷೋಹೇತಿ ರಕ್ಷಃ-ಹಾ । ಅಮೀವಚಾತನ ಇತ್ಯಮೀವ-ಚಾತನಃ ॥

---

| ಮಂತ್ರ | ವಿನಿಯೋಗ |
| --- | --- |
| ಯದೋಷಧಯಃ...ಚಾತನಃ ॥ | ಬೀಜಾವಾಪದ ಏಳನೆಯ ಮಂತ್ರ. |

---

ಯತ್=ಯಾವಾಗ; ಓಷಧಯಃ=ಓಷಧಿಗಳು; ರಾಜಾನಃ=ಅರಸರು; ಸಮಿತೌ ಇವ=ಯುದ್ಧದಲ್ಲಿ [ಹಗೆಗಳನ್ನು ಗೆಲ್ಲಲು] [ಒಟ್ಟುಗೂಡುವಂತೆ] ಸಂಗಚ್ಛಂತೇ= [ಹಸಿವನ್ನೂ, ರಕ್ಷೋಬಾಧೆಯನ್ನೂ, ರೋಗಬಾಧೆಯನ್ನೂ] ಹೋಗಲಾಡಿಸಲು ಸೇರುತ್ತವೆಯೋ ಆಗ; ವಿಪ್ರಃ ಸಃ=ರಸಭಾವಸಾಮರ್ಥ್ಯವನ್ನು ತಿಳಿದಿರುವ ಮೇಧಾವಿಯಾದವನು; ರಕ್ಷೋಹಾ=[ಪುರೋಡಾಶಯಾಗಾದಿಗಳಿಂದ] ರಾಕ್ಷಸಪೀಡೆಯನ್ನು ಪರಿಹರಿಸುವ; ಅಮೀವಚಾತನಃ=ರೋಗಗಳನ್ನು ಪಥ್ಯಾದಿಗಳಿಂದ ಪರಿಹರಿಸುವ; ಭಿಷಕ್=ಸಮರ್ಥನಾದ ವೈದ್ಯನೆಂದು; ಉಚ್ಯತೇ=ಹೇಳಲ್ಪಡುತ್ತಾನೆ.

---

ಮಲ್ಲಿಗೆ, ಬಾಳೆ, ಅತ್ತಿಯಮರ, ವೀಳ್ಯದ ಎಲೆಬಳ್ಳಿ, ಅಲಂಕಾರದ ಬಳ್ಳಿಗಳು ಹೀಗೆ ಬಹುವಿಧವಾಗಿವೆ.

ಎಲೈ! ಮಾತೃಸಮಾನರಾದ ದೇವಿಯರೇ! ನೀವು ಓಷಧಿಯರಾದ ಕಾರಣ ನಿಮ್ಮನ್ನು-ಪಾಪಗಳನ್ನು ಪರಿಹರಿಸುವಂತೆಯೂ, ಪಾಪದ ಫಲವಾದ ದುಃಖವನ್ನು ಹೋಗಲಾಡಿಸುವಂತೆಯೂ-ಪ್ರಾರ್ಥಿಸಿಕೊಳ್ಳುತ್ತೇನೆ.

ಹೇ! ಓಷಧಿದೇವತೆಗಳೇ! ನೀವು ಅಶ್ವತ್ಥವೃಕ್ಷ, ಮುತ್ತುಗದ ಮರದಲ್ಲಿ ಇರುವಿರಿ. ನೀವು ಮಾನವನನ್ನು ಪೋಷಿಸುತ್ತೀರಿ.

ನಿಷ್ಕೃತಿರ್ನಾಮ ವೋ ಮಾತಾಽಥಾ ಯೂಯಗ್ಗ್ಂ ಸ್ಥ

ಸಂಕೃತೀಃ । ಸರಾಃ ಪತತ್ರಿಣೀ[..ತ್ರಿಣೀಃ(೨೫)ಸ್ಥನ]ಸ್ಥನ

ಯದಾಮಯತಿ ನಿಷ್ಕೃತ ॥

---

ನಿಷ್ಕೃತಿರಿತಿ ನಿಃ-ಕೃತಿಃ । ನಾಮ । ವಃ । ಮಾತಾ । ಅಥ । ಯೂಯಮ್ । ಸ್ಥ ।

ಸಂಕೃತೀರಿತಿ ಸಮ್-ಕೃತೀಃ ॥ ಸರಾಃ । ಪತತ್ರಿಣೀಃ । (೨೫) । ಸ್ಥನ । ಯತ್ ।

ಆಮಯತಿ । ನಿರಿತಿ । ಕೃತ ॥

---

| ಮಂತ್ರ | ವಿನಿಯೋಗ |
|---|---|
| ನಿಷ್ಕೃತಿಃ..ನಿಷ್ಕೃತ ॥ | ಬೀಜಾವಾಪದ ಎಂಟನೆಯ ಮಂತ್ರ. |

---

▲ [ಓಷಧಿಗಳೇ!] ನಿಷ್ಕೃತಿಃ=ರೋಗಾದಿಪರಿಹಾರವೇ; ವಃ=ನಿಮಗೆ; ಮಾತಾ ನಾಮ=ತಾಯಿಯಂತೆ ಉತ್ಪತ್ತಿನಿಮಿತ್ತವಾಗಿದೆಯಷ್ಟೆ; ಅಥ=ಮತ್ತೆ; ಯೂಯಮ್ =ನೀವು; ಸಂಕೃತೀಃ ಸ್ಥ=ಚೆನ್ನಾಗಿ ನಿಮ್ಮ ಕಾರ್ಯಗಳನ್ನು ಮಾಡಲು ಸಮರ್ಥರಾಗಿರಿ. ಸರಾಃ=ಕ್ಷುಧಾದಿಪರಿಹಾರಕರೂ; ಪತತ್ರಿಣೀಃ=ಎಲೆಗಳಿಂದ ಮತ್ತೆ ಬೆಳೆಯುವ ವರೂ; ಸ್ಥನ=ಆಗಿರಿ; ಯತ್ ಆಮಯತಿ=ಯಾವುದು ರೋಗದಂತೆ ಪೀಡಿಸುತ್ತ ದೆಯೋ; [ಅದನ್ನು] ನಿಃ ಕೃತ=ಪರಿಹರಿಸಿರಿ.

---

ಅಶ್ವತ್ಥವೃಕ್ಷವು ತ್ರಿಮೂರ್ತಿಸ್ವರೂಪವೆಂದು ಪ್ರಸಿದ್ಧವಾಗಿದೆ. ಪಲಾಶವೃಕ್ಷವು ಯಜ್ಞಸಾಧನವಾಗಿದೆ. ಓಷಧಿಗಳು ಮಾನವನನ್ನು ಅನ್ನದಾನದಿಂದ ಪೋಷಿಸುತ್ತವೆ. ಹೀಗೆ ಓಷಧಿಗಳು ದೇವತಾರೂಪವಾದರೂ ಭೂಮಿಯಲ್ಲಿಯೇ ಇದ್ದು ಮಾನವನಿಗೆ ಉಪಕಾರವನ್ನೆಸಗುತ್ತವೆ.

ಓಷಧಿಗಳೇ! ನಿಮ್ಮ ಶಕ್ತಿಯು ಅಪಾರವಾದುದು. ನಾನು ಅನ್ನವನ್ನು ಅಪೇಕ್ಷಿಸಿ, ಓಷಧಿಗಳನ್ನು ಕೈಗೆ ತೆಗೆದುಕೊಂಡ ಕೂಡಲೇ ಹಸಿವು ಮೊದಲಾದವುಗಳು ನಾಶ

ಅನ್ಯಾ ವೋ ಅನ್ಯಾಮವತ್ವನ್ಯಾऽನ್ಯಸ್ಯಾ ಉಪಾವತ । ತಾಃ ಸರ್ವಾ ಓಷಧಯಃ ಸಂವಿದಾನಾ ಇದಂ ಮೇ ಪ್ರಾವತಾ ವಚಃ ॥

---

ಅನ್ಯಾ । ವಃ । ಅನ್ಯಾಮ್ । ಅವತು । ಅನ್ಯಾ । ಅನ್ಯಸ್ಯಾಃ । ಉಪೇತಿ । ಅವತ ॥ ತಾಃ । ಸರ್ವಾಃ । ಓಷಧಯಃ । ಸಂವಿದಾನಾ ಇತಿ ಸಮ್–ವಿದಾನಾಃ । ಇದಮ್ । ಮೇ । ಪ್ರೇತಿ । ಅವತ । ವಚಃ ॥

---

| ಮಂತ್ರ | ವಿನಿಯೋಗ |
|---|---|
| ಅನ್ಯಾ ವೋ...ವಚಃ ॥ | ಬೀಜಾವಾಪದ ಒಂಬತ್ತನೆಯ ಮಂತ್ರ. |

---

ಹೇ! ಓಷಧಿಗಳೇ! ವಃ=ನಿಮ್ಮಗಳ ಪೈಕಿ; ಅನ್ಯಾ=ಒಂದು ಓಷಧಿವ್ಯಕ್ತಿಯು; ಅನ್ಯಾಮ್ ಅವತು=ಬೇರೊಂದು ಓಷಧಿಯನ್ನು ರಕ್ಷಿಸಲಿ. ಅನ್ಯಾ=[ರಕ್ಷಿತವಾದ] ಆ ಓಷಧಿಯು; ಅನ್ಯಸ್ಯಾಃ ಉಪ ಅವತ=ಮತ್ತೊಂದು ಓಷಧಿಯನ್ನು ಸಮೀಪಿಸಿ [ಅದನ್ನು] ಕಾಯಲಿ. ತಾಃ ಸರ್ವಾಃ ಓಷಧಯಃ=ಹೀಗೆ ಆ ಓಷಧಿಗಳೆಲ್ಲವೂ; ಸಂವಿದಾನಾಃ=ಐಕಮತ್ಯವನ್ನು ಹೊಂದಿದವುಗಳಾಗಿ; ಮೇ=ನನ್ನ; ಇದಮ್ ವಚಃ =ಈ ಪ್ರಾರ್ಥನಾರೂಪವಾದ ಮಾತನ್ನು; ಪ್ರಾವತ=ಚೆನ್ನಾಗಿ ರಕ್ಷಿಸಿರಿ/ನಡೆಸಿಕೊಡಿರಿ.

---

ವಾದಂತೆಯೇ ಆಗುತ್ತವೆ. ಲೋಕದಲ್ಲಿ ಮೊಲವೇ ಮೊದಲಾದವು ಜೀವಭಯದಿಂದ ಸತ್ತಂತೆ ಮಲಗಿಕೊಳ್ಳುತ್ತವೆಯಷ್ಟೆ. ಅದರಂತೆ ಓಷಧಿಗಳು ಕೈಗೆ ಬಂದೊಡನೆಯೇ ಹಸಿವು ಮೊದಲಾದವು ಹೆದರಿ ದೂರವಾಗುತ್ತವೆ. ಅಂತಹ ಶಕ್ತಿಯು ನಿಮ್ಮದು.

ರಾಜರು ಶತ್ರುಜಯಕ್ಕಾಗಿ ಒಗ್ಗೂಡುವಂತೆ ಓಷಧಿಗಳು ರೋಗಾದಿಪರಿಹಾರಕ್ಕಾಗಿ ಸೇರುತ್ತವೆ. ಪುರೋಡಾಶಾದಿಯಾಗಗಳಿಂದ ರಕ್ಷೋಬಾಧೆಯು ದೂರವಾಗುತ್ತದೆ. ಪಥ್ಯಾದಿಗಳಿಂದ ರೋಗಪರಿಹಾರವಾಗುತ್ತದೆ. ಓಷಧಿಗಳ ಇಂತಹ ರಸಭಾವ ಸಾಮರ್ಥ್ಯವನ್ನರಿತವನು ಉತ್ತಮವೈದ್ಯನಾಗುತ್ತಾನೆ.

ಉಚ್ಛುಷ್ಮಾ ಓಷಧೀನಾಂ ಗಾವೋ ಗೋಷ್ಠಾದಿವೇರತೇ ।
ಧನಗ್ಂ ಸನಿಷ್ಯಂತೀನಾಮಾತ್ಮಾನಂ ತವ ಪೂರುಷ ॥ ಅತಿ
ವಿಶ್ವಾಃ ಪರಿಷ್ಠಾಃ ಸ್ತೇನ ಇವ ವ್ರಜಮಕ್ರಮುಃ ।

---

ಉದಿತಿ । ಶುಷ್ಮಾಃ । ಓಷಧೀನಾಮ್ । ಗಾವಃ । ಗೋಷ್ಠಾದಿತಿ ಗೋ-ಸ್ಥಾತ್ । ಇವ ।
ಈರತೇ ॥ ಧನಮ್ । ಸನಿಷ್ಯಂತೀನಾಮ್ । ಆತ್ಮಾನಮ್ । ತವ । ಪೂರುಷ ॥
ಅತೀತಿ । ವಿಶ್ವಾಃ । ಪರಿಷ್ಠಾ ಇತಿ ಪರಿ-ಸ್ಥಾಃ । ಸ್ತೇನಃ । ಇವ । ವ್ರಜಮ್ । ಅಕ್ರಮುಃ ॥

---

| ಮಂತ್ರ | ವಿನಿಯೋಗ |
|---|---|
| ಉಚ್ಛುಷ್ಮಾ...ಪೂರುಷ ॥ | ಬೀಜಾವಾಪದ ಹತ್ತನೆಯ ಮಂತ್ರ. |
| ಅತಿ ವಿಶ್ವಾಃ...ರಪಃ ॥ | ಬೀಜಾವಾಪದ ಹನ್ನೊಂದನೆಯ ಮಂತ್ರ. |

---

▲ **ಪೂರುಷ**=ಮಾನವನೇ! **ತವ**=ನಿನ್ನ; **ಆತ್ಮಾನಮ್**=ದೇಹವನ್ನು; **ಧನಮ್ ಸನಿಷ್ಯಂತೀನಾಮ್**=ಧನದಂತೆ ಕೊಡಲು ಇಚ್ಛಿಸುವ; **ಓಷಧೀನಾಮ್**=ಓಷಧಿಗಳ; **ಶುಷ್ಮಾಃ**=[ಓಷಧಿಗಳನ್ನು ಸೇವಿಸುವುದರಿಂದ ಉಂಟಾಗುವ] ಬಲವಿಶೇಷಗಳು; **ಗಾವಃ**=ಹಸುಗಳು; **ಗೋಷ್ಠಾತ್ ಇವ**=ಕೊಟ್ಟಿಗೆಯಿಂದ [ಹೊರಗೆ] ಹೇಗೋ ಹಾಗೆ; **ಉತ್ ಈರತೇ**=ಮೇಲೆ ಬರುತ್ತವೆ. ▲ **ವಿಶ್ವಾಃ**=ಸಮಸ್ತವಾದ; **ಓಷಧಯಃ**=ಓಷಧಿಗಳು; **ಪರಿಷ್ಠಾಃ**=[ದೇಹದ] ಸುತ್ತಲೂ ಇರುವವುಗಳಾಗಿ; **ಸ್ತೇನಃ**=ಗುಪ್ತ ಚೋರನು; **ವ್ರಜಮ್ ಇವ**=[ಸಾವಧಾನವಾಗಿ] ಕೊಟ್ಟಿಗೆಯನ್ನು ಹೇಗೆ [ಪ್ರವೇಶಿಸುವನೋ ಹಾಗೆ] **ಅತಿ**=[ಅಜೀರ್ಣಾದಿ ದೋಷಗಳನ್ನು] ಅತಿಕ್ರಮಿಸಿ; **ಅಕ್ರಮುಃ**=ದೇಹದ ಒಳಭಾಗವನ್ನು ಪ್ರವೇಶಿಸುತ್ತವೆ.

---

ಹೇ! ಓಷಧಿಗಳೇ! ನೀವು ಹುಟ್ಟಿರುವುದೇ ರೋಗಾದಿಪರಿಹಾರದಿಂದ ಮಾನವರ ಉಪಕಾರಕ್ಕಾಗಿ. ನೀವು ನಿಮ್ಮ ಕಾರ್ಯವನ್ನು ಚೆನ್ನಾಗಿ ಮಾಡಿರಿ. ನಮ್ಮನ್ನು ಬಾಧಿಸುವ

ಓಷಧಯಃ ಪ್ರಾಚುಚ್ಯವುರ್ಯತ್ಕಿಂ ಚ ತನುವಾಗ್ಂ ರಪಃ ॥

ಯಾ [ಯಾಃ (೨೬) ತ ಆತಸ್ಥು] ಸ್ತ ಆತಸ್ಥುರಾತ್ಮಾನಂ ಯಾ

ಆವಿವಿಶುಃ ಪರುಃ ಪರುಃ ।

---

ಓಷಧಯಃ । ಪ್ರೇತಿ । ಅಚುಚ್ಯವುಃ । ಯತ್ । ಕಿಮ್ । ಚ । ತನುವಾಮ್ । ರಪಃ ॥

ಯಾಃ ।(೨೬)। ತೇ । ಆತಸ್ಥುರಿತ್ಯಾ-ತಸ್ಥುಃ । ಆತ್ಮಾನಮ್ । ಯಾಃ । ಆವಿವಿಶುರಿತ್ಯಾ-

ವಿವಿಶುಃ । ಪರುಃಪರುರಿತಿ ಪರುಃ-ಪರುಃ ॥

---

| ಮಂತ್ರ | ವಿನಿಯೋಗ |
|---|---|
| ಯಾಸ್ತ...ಇವ ॥ | ಬೀಜಾವಾಪದ ಹನ್ನೆರಡನೆಯ ಮಂತ್ರ. |

---

**ತನುವಾಮ್**=ದೇಹದಲ್ಲಿ; **ರಪಃ**=[ರೋಗಕ್ಕೆ ಕಾರಣವಾದ] ಪಾಪವು; **ಯತ್ ಕಿಂ ಚ**=ಸ್ವಲ್ಪವೇನಾದರೂ [ಇದ್ದರೆ] **ಪ್ರ ಅಚುಚ್ಯವುಃ**=[ಅದನ್ನು ಪುರೋಡಾಶಾದಿ ಯಾಗಗಳಿಂದ] ಹೋಗಲಾಡಿಸುತ್ತವೆ. 🔔 [ಎಲೈ! ಯಜಮಾನನೇ!] **ಯಾಃ**=ಯಾವ ಓಷಧಿಗಳು; **ತೇ**=ನಿನ್ನ; **ಆತ್ಮಾನಮ್**=ಶರೀರವನ್ನು; **ಆತಸ್ಥುಃ**=ಆಕ್ರಮಿಸಿ/ವ್ಯಾಪಿಸಿ ಇವೆಯೋ; **ಯಾಃ**=ಯಾವ ಓಷಧಿಗಳು; **ಪರುಃಪರುಃ**=ಆಯಾ ಗಿಣ್ಣುಗಳನ್ನೂ [ಭಾಗಗಳನ್ನು] **ಆ ವಿವಿಶುಃ**=ಪ್ರವೇಶಿಸಿವೆಯೋ;

---

ಹಸಿವು-ರೋಗ ಮೊದಲಾದವನ್ನು ದೂರ ಮಾಡಿರಿ.

ಹೇ! ಓಷಧಿಗಳೇ! ನಿಮ್ಮಲ್ಲಿ ಒಂದು ಇನ್ನೊಂದನ್ನು ರಕ್ಷಿಸುತ್ತದೆ. ಅದು ಮತ್ತೊಂದನ್ನು ರಕ್ಷಿಸಲಿ. ಹೀಗೆ ಐಕಮತ್ಯದಿಂದ ನೀವು ಕಾರ್ಯ ಮಾಡಬಲ್ಲಿರಿ. ನೀವು ನಮ್ಮ ಪ್ರಾರ್ಥನಾರೂಪವಾದ ಮಾತನ್ನು ನಡೆಸಿ ಕೊಡಿ.

ಮಾನವನೇ! ಓಷಧಿಗಳು ನಿನಗೆ ಮುಖ್ಯಧನದಂತಿರುವ ದೃಢಶರೀರವನ್ನು ಕೊಡಲು ಇಚ್ಛಿಸುತ್ತವೆ. ಆ ಓಷಧಿಗಳನ್ನು ಸೇವಿಸಿ ಬಲವನ್ನು ಪಡೆದವನು-ಗೋವುಗಳು

ತಾಸ್ತೇ ಯಕ್ಷ್ಮಂ ವಿ ಬಾಧನ್ತಾಮುಗ್ರೋ ಮಧ್ಯಮಶೀ

ರಿವ ॥ ಸಾಕಂ ಯಕ್ಷ್ಮ ಪ್ರ ಪತ ಶ್ಯೇನೇನ ಕಿಕಿದೀವಿನಾ ।

ಸಾಕಂ ವಾತಸ್ಯ ಧ್ರಾಜ್ಯಾ ಸಾಕಂ ನಶ್ಯ ನಿಹಾಕಯಾ ॥

---

ತಾಃ । ತೇ । ಯಕ್ಷ್ಮಮ್ । ವೀತಿ । ಬಾಧಂತಾಮ್ । ಉಗ್ರಃ । ಮಧ್ಯಮಶೀರಿತಿ ಮಧ್ಯಮ-ಶೀಃ । ಇವ ॥ ಸಾಕಮ್ । ಯಕ್ಷ್ಮ । ಪ್ರೇತಿ । ಪತ । ಶ್ಯೇನೇನ । ಕಿಕಿದೀವೀನಾ ॥ ಸಾಕಮ್ । ವಾತಸ್ಯ । ಧ್ರಾಜ್ಯಾ । ಸಾಕಮ್ । ನಶ್ಯ । ನಿಹಾಕಯೇತಿ ನಿ-ಹಾಕಯಾ ॥

---

| ಮಂತ್ರ | ವಿನಿಯೋಗ |
| --- | --- |
| ಸಾಕಂ...ನಿಹಾಕಯಾ ॥ | ಬೀಜಾವಾಪದ ಹದಿಮೂರನೆಯ ಮಂತ್ರ. |

---

**ತಾಃ**=ಆ ಓಷಧಿಗಳು; **ತೇ**=ನಿನ್ನ; **ಯಕ್ಷ್ಮಮ್**=ರೋಗವನ್ನು; **ಉಗ್ರಃ**=[ದುಷ್ಟರ ವಿಷಯದಲ್ಲಿ]ಕಠಿನನಾದ; **ಮಧ್ಯಮಶೀಃ ಇವ**=ಪಕ್ಷಪಾತರಹಿತನಾದ ರಾಜನಂತೆ; **ವಿಬಾಧಂತಾಮ್**=ನಾಶಪಡಿಸಲಿ. ▲ **ಯಕ್ಷ್ಮ**=ಹೇ! ಕ್ಷಯಾದಿರೋಗವೇ! **ಕಿಕಿದೀವಿನಾ**=[ಶ್ಲೇಷ್ಮದಿಂದ ಕಂಠಧ್ವನಿಯನ್ನು ತಡೆದುಬಿಡುವ] ಶ್ಲೇಷ್ಮರೋಗ ದಿಂದಲೂ; **ಶ್ಯೇನೇನ**=ಗಿಡಗದಂತೆ ಬಾಧಿಸುವ ಪಿತ್ತರೋಗದ; **ಸಾಕಮ್**=ಜೊತೆ; **ಪ್ರಪತ**=ಸಂಪೂರ್ಣವಾಗಿ ನಷ್ಟನಾಗು; **ವಾತಸ್ಯ ಧ್ರಾಜ್ಯಾ ಸಾಕಮ್**=ವಾತರೋಗದ ವ್ಯಾಪ್ತಿಯೊಡನೆ; **ನಶ್ಯ**=ನಾಶವಾಗು; **ನಿಹಾಕಯಾ ಸಾಕಮ್**=ಸಂಕಟಪಡುವಂತೆ ಮಾಡುವ ರೋಗದ ಬಾಧೆಯೊಡನೆ; ನಶ್ಯ=ನಾಶವಾಗು.

---

ಕೊಟ್ಟಿಗೆಯಿಂದ ಹುಲ್ಲುಗಾವಲುಗಳಿಗೆ ಹೋಗಿ ಹುಲ್ಲನ್ನು ತಿಂದು ಬಲಿಷ್ಠವಾಗು ವಂತೆ-ಬಲಿಷ್ಠನಾಗುತ್ತಾನೆ. ಅವನ ಬಲವು ಪ್ರಕಾಶಿಸುತ್ತದೆ.

ಕಳ್ಳರು ಗೋವುಗಳನ್ನು ಅಪಹರಿಸಲು ಯಾರಿಗೂ ತಿಳಿಯದಂತೆ ಗೋಶಾಲೆಗೆ ಪ್ರವೇಶಿ

**ಅಶ್ವಾವತೀಗ್ಂ ಸೋಮವತೀಮೂರ್ಜಯಂತೀ**

**ಮುದೋಜಸಮ್ । ಆ ವಿತ್ಸಿ ಸರ್ವಾ ಓಷಧೀರಸ್ಮಾ**

**ಅರಿಷ್ಟತಾತಯೇ ॥**

---

**ಅಶ್ವಾವತೀಮಿತ್ಯಶ್ವ–ವತೀಮ್ । ಸೋಮವತೀಮಿತಿ ಸೋಮ–ವತೀಮ್ ।**

**ಊರ್ಜಯಂತೀಮ್ । ಉದೋಜಸಮಿತ್ಯುತ್–ಓಜಸಮ್ ॥ ಏತಿ । ವಿತ್ಸಿ ।**

**ಸರ್ವಾಃ । ಓಷಧೀಃ । ಅಸ್ಮೈ । ಅರಿಷ್ಟತಾತಯ ಇತ್ಯರಿಷ್ಟ–ತಾತಯೇ ॥**

---

| ಮಂತ್ರ | ವಿನಿಯೋಗ |
|---|---|
| **ಅಶ್ವಾವತೀಮ್...ತಾತಯೇ ॥** | ಬೀಜಾವಾಪದ ಹದಿನಾಲ್ಕನೆಯ ಮಂತ್ರ. |

---

▲ **ಅಶ್ವಾವತೀಮ್**=ಕುದುರೆಗಳಿಗೆ ಪ್ರಿಯವಾದ ಓಷಧಿಜಾತಿಯನ್ನೂ/ಸಮೃದ್ಧಿಯಿಂದ ಅಶ್ವಗಳನ್ನು ಕೊಳ್ಳಲು ನೆರವಾಗುವ ಓಷಧಿಜಾತಿಯನ್ನೂ; **ಸೋಮವತೀಮ್**= ಸೋಮಯಾಗಕ್ಕೆ ಅಗತ್ಯವಾದ ಸೋಮಲತಾದಿಯಾದ ಓಷಧಿಜಾತಿಯನ್ನೂ; **ಊರ್ಜಯಂತೀಮ್**=ಬಲವರ್ಧಕವಾದ ಮತ್ತು ಪ್ರಾಣಚೇಷ್ಟೆಯನ್ನುಂಟುಮಾಡುವ ಓಷಧಿಯನ್ನೂ; **ಉದೋಜಸಮ್**=ಓಜೋರೂಪವಾದ ಅಷ್ಟಮಧಾತುವೃದ್ಧಿ ಯನ್ನು ಮಾಡುವ ಓಷಧಿವಿಶೇಷವನ್ನೂ [ಹೀಗೆ] **ಸರ್ವಾಃ ಓಷಧೀಃ**=ಎಲ್ಲ ಓಷಧಿ ಜಾತಿಗಳನ್ನೂ; **ಅಸ್ಮೈ**=ಈ ಯಜಮಾನನ; **ಅರಿಷ್ಟತಾತಯೇ**=ಹಿಂಸೆಯಾಗದಿರು ವುದಕ್ಕಾಗಿ; **ಆ ವಿತ್ಸಿ**=ಹೊಂದಿರುತ್ತೇನೆ.

---

ಸುವಂತೆ ಓಷಧಿಗಳು ದೇಹವನ್ನು ಪ್ರವೇಶಿಸಿ, ರೋಗಗಳನ್ನು ಪರಿಹರಿಸುತ್ತವೆ. ಪುರೋಡಾಶಾದಿಯಾಗಗಳ ಮೂಲಕವಾಗಿ ರೋಗಕಾರಣವಾದ ಪಾಪಗಳ ಪರಿಹಾರ ವನ್ನೂ ಮಾಡುತ್ತವೆ.

ಯಜಮಾನನೇ! ಕೆಲವು ಓಷಧಿಗಳು ನಿನ್ನ ಶರೀರವನ್ನು ವ್ಯಾಪಿಸಿರುತ್ತವೆ. ಕೆಲವು ದೇಹದ ಕೆಲವು ಭಾಗಗಳಲ್ಲಿ ತಮ್ಮ ಪ್ರಭಾವವನ್ನು ಬೀರುತ್ತವೆ. ಪಕ್ಷಪಾತರಹಿತನಾಗಿ

**ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾ ಯಾಶ್ಚ ಪುಷ್ಪಿಣೀಃ ।**

**ಬೃಹಸ್ಪತಿಪ್ರಸೂತಾಸ್ತಾ ನೋ ಮುಂಚಂತ್ವಗ್ಂಹಸಃ ॥**

---

ಯಾಃ । ಫಲಿನೀಃ । ಯಾಃ । ಅಫಲಾಃ । ಅಪುಷ್ಪಾಃ । ಯಾಃ । ಚ । ಪುಷ್ಪಿಣೀಃ ॥

ಬೃಹಸ್ಪತಿಪ್ರಸೂತಾ ಇತಿ ಬೃಹಸ್ಪತಿ-ಪ್ರಸೂತಾಃ । ತಾಃ । ನಃ । ಮುಂಚಂತು ।

ಅಗ್ಂಹಸಃ ॥

---

| ಮಂತ್ರ | ವಿನಿಯೋಗ |
|---|---|
| **ಯಾಃ ಫಲಿನೀಃ...ಅಗ್ಂಹಸಃ ॥** | ಬೀಜಾವಾಪಕ್ಕೆ ವೈಕಲ್ಪಿಕವಾಗಿರುವ ಆರು ಮಂತ್ರಗಳಲ್ಲಿ ಪ್ರಥಮಮಂತ್ರ. |

---

**ಯಾಃ ಫಲಿನೀಃ**=ಯಾವುವು ಫಲಸಹಿತವಾದ ಓಷಧಿಗಳೋ; **ಯಾಃ ಅಫಲಾಃ** =ಯಾವುವು ಫಲವಿಲ್ಲದವುಗಳೋ; **ಅಪುಷ್ಪಾಃ**=ಹೂವಿಲ್ಲದವುಗಳೋ; **ಯಾಃ ಚ ಪುಷ್ಪಿಣೀಃ**=ಯಾವುವು ಪುಷ್ಪಸಹಿತವಾಗಿವೆಯೋ; **ಬೃಹಸ್ಪತಿಪ್ರಸೂತಾಃ** = ಬೃಹಸ್ಪತಿಯಿಂದ ಉತ್ಪನ್ನವಾದ; **ತಾಃ**=ಆ ಓಷಧಿಗಳು; **ನಃ**=ನಮ್ಮನ್ನು; **ಅಗ್ಂಹಸಃ ಮುಂಚಂತು**=ಪಾಪದಿಂದ ಬಿಡಿಸಲಿ.

---

ದುಷ್ಟಶಿಕ್ಷಣವನ್ನೂ, ಶಿಷ್ಟಪರಿಪಾಲನವನ್ನೂ ಮಾಡುವ ರಾಜನಂತೆ ಆ ಓಷಧಿಗಳು ರೋಗವನ್ನು ಪರಿಹರಿಸಲಿ.

ಕಫ-ವಾತ-ಪಿತ್ತಗಳಿಗೆ ಸಂಬಂಧಿಸಿದಂತೆ ಹಲವು ರೋಗಗಳಿವೆ. ಕ್ಷಯಾದಿ ರೋಗಗಳೂ ಇವೆ. ಇವು ಮಾನವನನ್ನು ಸಂಕಟಪಡುವಂತೆ ಮಾಡುತ್ತವೆ. ಇವೆಲ್ಲವೂ ಸಹ ಓಷಧಿಗಳ ಪ್ರಭಾವದಿಂದ ಪರಿಹಾರವಾಗಲಿ. ಯಜಮಾನನು ಸ್ವಸ್ಥನಾಗಲಿ.

ಬಗೆ ಬಗೆಯ ಓಷಧಿಜಾತಿಗಳು ಇವೆ. ಓಷಧಿಗಳಿಂದ ಯಾಗಸಾಧಕವಾದ ಧನ-ಧಾನ್ಯಗಳೂ ಲಭಿಸುತ್ತವೆ. ಯಜಮಾನನ ಪೀಡಾಪರಿಹಾರವಾಗುತ್ತದೆ. ಇಂತಹ ಓಷಧಿಗಳನ್ನು ನಾನು ಪಡೆದಿರುತ್ತೇನೆ.

ಇಲ್ಲಿಗೆ **'ಚತುರ್ದಶಭಿರ್ವಪತಿ'** ಎಂದು ಹೇಳಿರುವಂತೆ ಹದಿನಾಲ್ಕು ಮಂತ್ರಗಳಾದವು.

**ಯಾ[ಯಾಃ (೨೭)] ಓಷಧಯಃ ಸೋಮರಾಜ್ಞೀಃ ಪ್ರವಿಷ್ಟಾಃ ಪೃಥಿವೀಮನು । ತಾಸಾಂ ತ್ವಮಸ್ಯುತ್ತಮಾ ಪ್ರ ಣೋ ಜೀವಾತವೇ ಸುವ ॥**

---

ಯಾಃ ।(೨೭)। ಓಷಧಯಃ । ಸೋಮರಾಜ್ಞೀರಿತಿ ಸೋಮ–ರಾಜ್ಞೀಃ । ಪ್ರವಿಷ್ಟಾ ಇತಿ ಪ್ರ–ವಿಷ್ಟಾಃ । ಪೃಥಿವೀಮ್ । ಅನು ॥ ತಾಸಾಮ್ । ತ್ವಮ್ । ಅಸಿ । ಉತ್ತಮೇತ್ಯುತ್–ತಮಾ । ಪ್ರೇತಿ । ನಃ । ಜೀವಾತವೇ । ಸುವ ॥

---

| ಮಂತ್ರ | ವಿನಿಯೋಗ |
|---|---|
| **ಯಾ ಓಷಧಯಃ...ಸುವ ॥** | ವೈಕಲ್ಪಿಕಮಂತ್ರಗಳಲ್ಲಿ ಎರಡನೆಯ ಮಂತ್ರ. |

---

**ಸೋಮರಾಜ್ಞೀಃ**=ಸೋಮಲತೆಯೇ ಪ್ರಧಾನವಾಗಿರುವ; **ಯಾಃ ಓಷಧಯಃ**=ಯಾವ ಓಷಧಿಗಳು; **ಪೃಥಿವೀಮ್**=ಭೂಮಿಯನ್ನು; **ಅನು ಪ್ರವಿಷ್ಟಾಃ**=ಅನುಸರಿಸಿ ಪ್ರವೇಶಿಸಿದವೋ; **ತಾಸಾಮ್**=ಅವುಗಳ ಮಧ್ಯದಲ್ಲಿ; **ತ್ವಮ್**=ನೀನು; **ಉತ್ತಮಾ ಅಸಿ**=ಶ್ರೇಷ್ಠಳಾಗಿದ್ದೀಯೆ. **ನಃ**=ನಮ್ಮ; **ಜೀವಾತವೇ**=ಜೀವನೌಷಧಕ್ಕಾಗಿ; **ಪ್ರ ಸುವ**=ಪ್ರೇರಿಸು.

---

ಮುಂದೆ ವೈಕಲ್ಪಿಕಮಂತ್ರಗಳನ್ನು ಹೇಳಲಾಗಿದೆ.

ಫಲವುಳ್ಳ, ಫಲ ಬಿಡದ, ಹೂವುಳ್ಳ, ಹೂ ಬಿಡದ ಓಷಧಿಗಳು ಬೃಹಸ್ಪತಿಯಿಂದ ಉತ್ಪನ್ನವಾದವು.

**'ಓಷಧ್ಯಃ ಫಲಪಾಕಾಂತಾಃ'** ಎಂಬ ಕೋಶವಾಕ್ಯವಿದ್ದರೂ ಈ ಪ್ರಕರಣದಲ್ಲಿ ಕೆಲವೆಡೆ ಓಷಧಿಪದವನ್ನು ಸಮಸ್ತಸಸ್ಯವರ್ಗಕ್ಕೂ ಅನ್ವಯಿಸಲಾಗಿದೆ.

ಬೃಹಸ್ಪತಿಯಿಂದ ಉತ್ಪನ್ನವಾದ ಈ ಸಸ್ಯಗಳು ನಮ್ಮನ್ನು ಪಾಪಮುಕ್ತರನ್ನಾಗಿಸಲಿ ಎಂದು ಪ್ರಾರ್ಥನೆ.

ಅವಪತಂತೀರವದನ್ದಿವ ಓಷಧಯಃ ಪರಿ । ಯಂ

ಜೀವಮಶ್ನವಾಮಹೈ ನ ಸ ರಿಷ್ಯಾತಿ ಪೂರುಷಃ ॥

ಯಾಶ್ಚೇದಮುಪಶೃಣ್ವಂತಿ ಯಾಶ್ಚ ದೂರಂ ಪರಾಗತಾಃ ।

---

ಅವಪತಂತೀರಿತ್ಯವ-ಪತಂತೀಃ । ಅವದನ್ನ್ । ದಿವಃ । ಓಷಧಯಃ । ಪರಿ ॥ ಯಮ್ । ಜೀವಮ್ । ಅಶ್ನವಾಮಹೈ । ನ । ಸಃ । ರಿಷ್ಯಾತಿ । ಪೂರುಷಃ ॥ ಯಾಃ । ಚ । ಇದಮ್ । ಉಪಶೃಣ್ವಂತೀತ್ಯುಪ-ಶೃಣ್ವಂತಿ । ಯಾಃ । ಚ । ದೂರಮ್ । ಪರಾಗತಾ ಇತಿ ಪರಾ-ಗತಾಃ ॥

---

| ಮಂತ್ರ | ವಿನಿಯೋಗ |
|---|---|
| **ಅವಪತಂತೀಃ...ಪೂರುಷಃ ॥** | ವೈಕಲ್ಪಿಕಮಂತ್ರಗಳಲ್ಲಿ ಮೂರನೆಯ ಮಂತ್ರ. |
| **ಯಾಶ್ಚೇದಂ...ಭೇಷಜಮ್ ॥** | ವೈಕಲ್ಪಿಕಮಂತ್ರಗಳಲ್ಲಿ ನಾಲ್ಕನೆಯ ಮಂತ್ರ. |

---

▲**ದಿವಃ ಪರಿ**=ದ್ಯುಲೋಕದ ಮೇಲ್ಭಾಗದಿಂದ; **ಅವಪತಂತೀಃ**=ಬೀಳುತ್ತಿರುವ; **ಓಷಧಯಃ**=ಓಷಧಿರೂಪವಾಗಿ ಪರಿಣಮಿಸಿರುವ ಜಲಬಿಂದುಗಳು; **ಯಮ್ ಜೀವಮ್**=ಯಾವ ಜೀವಿಯನ್ನು; **ಅಶ್ನವಾಮಹೈ**=ವ್ಯಾಪಿಸುತ್ತವೆಯೋ; **ಸಃ ಪೂರುಷಃ**=ಆ ಮಾನವನು; **ನ ರಿಷ್ಯಾತಿ**=ಹಿಂಸೆಯನ್ನು ಹೊಂದುವುದಿಲ್ಲ; [ಎಂದು] **ಅವದನ್**=ಹೇಳುತ್ತವೆ/ಹೇಳಿದವು; ▲ [ಹೇ! ಓಷಧಿದೇವತೆಗಳೇ! ನಿಮ್ಮಲ್ಲಿ] **ಇದಮ್**= [ನಮ್ಮ] ಈ ಪ್ರಾರ್ಥನೆಯನ್ನು; **ಯಾಃ ಚ ಉಪಶೃಣ್ವಂತಿ**=ಯಾವ ಓಷಧಿದೇವತೆಗಳು ಸಮೀಪದಲ್ಲಿ ಕೇಳುತ್ತಾರೆಯೋ; **ಯಾಃ ಚ**=ಯಾವ ಓಷಧಿ ದೇವತೆಗಳು; **ದೂರಮ್ ಪರಾಗತಾಃ**=ದೂರಕ್ಕೆ ಹೋಗಿದ್ದರೂ [ಕೇಳುವರೋ];

ಇಹ ಸಂಗತ್ಯ ತಾಃ ಸರ್ವಾ ಅಸ್ಮೈ ಸಂ ದತ್ತ ಭೇಷಜಮ್ ॥

ಮಾ ವೋ ರಿಷತ್ಖನಿತಾ ಯಸ್ಮೈ ಚಾಹಂ ಖನಾಮಿ ವಃ ।

ದ್ವಿಪಚ್ಚತುಷ್ಪದಸ್ಮಾಕಗ್ಂ ಸರ್ವಮಸ್ತ್ವನಾತುರಮ್ ॥

---

ಇಹ । ಸಂಗತ್ಯೇತಿ ಸಮ್–ಗತ್ಯ । ತಾಃ । ಸರ್ವಾಃ । ಅಸ್ಮೈ । ಸಮಿತಿ । ದತ್ತ । ಭೇಷಜಮ್ ॥ ಮಾ । ವಃ । ರಿಷತ್ । ಖನಿತಾ । ಯಸ್ಮೈ । ಚ । ಅಹಮ್ । ಖನಾಮಿ । ವಃ ॥ ದ್ವಿಪದಿತಿ ದ್ವಿ–ಪತ್ । ಚತುಷ್ಪದಿತಿ ಚತುಃ–ಪತ್ । ಅಸ್ಮಾಕಮ್ । ಸರ್ವಮ್ । ಅಸ್ತು । ಅನಾತುರಮಿತ್ಯನಾ–ತುರಮ್ ॥

---

| ಮಂತ್ರ | ವಿನಿಯೋಗ |
|---|---|
| **ಮಾ ವೋ...ಅನಾತುರಮ್ ॥** | ವೈಕಲ್ಪಿಕಮಂತ್ರಗಳಲ್ಲಿ ಐದನೆಯ ಮಂತ್ರ. |

---

**ತಾಃ ಸರ್ವಾಃ**=ಆ ಓಷಧಿದೇವತೆಗಳೆಲ್ಲರೂ; **ಇಹ ಸಂಗತ್ಯ**=ಇಲ್ಲಿ ಒಟ್ಟಾಗಿ ಸೇರಿ; **ಅಸ್ಮೈ**=ಈ ಯಜಮಾನನಿಗೆ; **ಭೇಷಜಮ್**=ರೋಗಚಿಕಿತ್ಸೆಯನ್ನು; **ಸಂದತ್ತ**=ಚೆನ್ನಾಗಿ ಮಾಡಿರಿ. 🔔 [ಹೇ! ಓಷಧಿಗಳೇ!] **ವಃ ಖನಿತಾ**=[ಔಷಧಕ್ಕಾಗಿ] ನಿಮ್ಮ ಬೇರುಗಳನ್ನು ಅಗೆಯುವವನು; **ಮಾ ರಿಷತ್**=ಹಿಂಸೆಗೆ ಒಳಗಾಗದಿರಲಿ; **ಅಹಮ್ ಚ**=ನಾನೂ ಸಹ; **ಯಸ್ಮೈ**=ಯಾವ ವ್ಯಾಧಿಯುಳ್ಳ ಯಜಮಾನನಿಗಾಗಿ; **ವಃ ಖನಾಮಿ**=ನಿಮ್ಮನ್ನು ಅಗೆಯುತ್ತೇನೆಯೋ; [ಅವನೂ] ಮಾ ರಿಷತ್=ಹಿಂಸೆಯನ್ನು ಹೊಂದದಿರಲಿ. **ಅಸ್ಮಾಕಮ್**=ನಮ್ಮ; **ಸರ್ವಮ್**=ಎಲ್ಲ; **ದ್ವಿಪತ್ ಚತುಷ್ಪತ್**=ಎರಡು ಕಾಲಿನ ಮತ್ತು ನಾಲ್ಕು ಕಾಲಿನ ಎಲ್ಲ ಪ್ರಾಣಿಗಳೂ; **ಅನಾತುರಮ್ ಅಸ್ತು**=ರೋಗರಹಿತವಾಗಿರಲಿ.

---

**'ಸೋಮೋ ವಾ ಓಷಧೀನಾಗ್ಂ ರಾಜಾ'** ಎಂದು ಹೇಳಿರುವಂತೆ ಸೋಮಲತೆಯು ಓಷಧಿಗಳಲ್ಲಿ ಮುಖ್ಯವಾದದ್ದು. ಅಂತಹ ಓಷಧಿಗಳಲ್ಲಿಯೂ ಸಹ ಭೂಮಿಗಳಲ್ಲಿರುವ ಓಷಧಿಗಳಲ್ಲಿ ನೀನು ಉತ್ತಮಳು. ನೀನು ನಮ್ಮ ಜೀವನೌಷಧವಾಗಿ ಪರಿಣಮಿಸು.

ಓಷಧಯಃ ಸಂ ವದಂತೇ ಸೋಮೇನ ಸಹ ರಾಜ್ಞಾ।

ಯಸ್ಮೈ ಕರೋತಿ ಬ್ರಾಹ್ಮಣಸ್ತಗ್ಂ ರಾಜನ್ಪಾರಯಾಮಸಿ

॥ ೨೮-6 ॥

[ರಪಃ ಪತತ್ರಿಣೀರ್ಯಾ ಅಗ್ಂಹಸೋ ಯಾಃ ಖನಾಮಿ ಪ್ರೋಽಷ್ಟಾದಶ ಚ ॥]

---

ಓಷಧಯಃ । ಸಮಿತಿ । ವದಂತೇ । ಸೋಮೇನ । ಸಹ । ರಾಜ್ಞಾ ॥ ಯಸ್ಮೈ । ಕರೋತಿ । ಬ್ರಾಹ್ಮಣಃ । ತಮ್ । ರಾಜನ್ । ಪಾರಯಾಮಸಿ ॥ (೨೮) ॥

---

| ಮಂತ್ರ | ವಿನಿಯೋಗ |
| --- | --- |
| ಓಷಧಯಃ...ಪಾರಯಾಮಸಿ ॥ | ಬೀಜಾವಾಪದ ವೈಕಲ್ಪಿಕಮಂತ್ರಗಳಲ್ಲಿ ಆರನೆಯ ಹಾಗೂ ಕಡೆಯ ಮಂತ್ರ. |

---

▲ **ರಾಜನ್**=ಸೋಮರಾಜನೇ! **ಯಸ್ಮೈ**=ಯಾವಾತನ ಚಿಕಿತ್ಸೆಗಾಗಿ; **ಬ್ರಾಹ್ಮಣಃ**= ಬ್ರಾಹ್ಮಣನಾದ ಋತ್ವಿಜನು; **ಕರೋತಿ**=ಚಿಕಿತ್ಸೆಯನ್ನು ಮಾಡುತ್ತಾನೆಯೋ; **ತಮ್ ಪಾರಯಾಮಸಿ**=ಆತನನ್ನು [ರೋಗದಿಂದ] ಬಿಡಿಸೋಣ; [ಎಂದು] **ಓಷಧಯಃ**= ಓಷಧಿಗಳು; **ಸೋಮೇನ ರಾಜ್ಞಾ ಸಹ**=ಓಷಧಿರಾಜನಾದ ಸೋಮನೊಡನೆ; **ಸಂವದಂತೇ**=ಸಂವಾದ ಮಾಡುತ್ತವೆ.

---

**'ಯಾವಂತಃ ಸ್ತೋಕಾ ಅವಾಪದ್ಯಂತ । ತಾವತೀರೋಷಧಯೋಽಜಾಯಂತ ।'** ಎಂದು ಹೇಳಿರುವಂತೆ ಭೂಮಿಯ ಮೇಲೆ ಬಿದ್ದ ನೀರಿನ ಹನಿಗಳು ಓಷಧಿಗಳಾಗಿ ಪರಿಣಮಿಸುತ್ತವೆ. ತಾವು ವ್ಯಾಪಿಸಿದ ಪುರುಷನು ಯಾವ ಹಿಂಸೆಯನ್ನೂ ಅನುಭವಿಸುವುದಿಲ್ಲ ಎಂದು ಹೇಳುತ್ತವೆ.

ಹತ್ತಿರದಲ್ಲಿರುವ ಹಾಗೂ ದೂರದಲ್ಲಿರುವ ಓಷಧಿದೇವತೆಗಳೇ! ನೀವು ನಮ್ಮ ಪ್ರಾರ್ಥನೆಯನ್ನು ಕೇಳಿರಿ. ಒಟ್ಟಾಗಿ ಇಲ್ಲಿಗೆ ಬಂದು ಈ ಯಜಮಾನನಿಗೆ ರೋಗಚಿಕಿತ್ಸೆಯನ್ನು ಮಾಡಿರಿ.

'ನಾಸ್ತಿ ಮೂಲಮನೌಷಧಮ್' ಎಂಬಂತೆ ಔಷಧಕ್ಕೆ ಬರದ ಬೇರೇ ಇಲ್ಲ. ಆ ಔಷಧಕ್ಕಾಗಿ ಬೇರನ್ನು ಅಗೆಯುವವನು ಹಿಂಸೆಗೆ ಗುರಿಯಾಗದಿರಲಿ. ಯಾರ ಚಿಕಿತ್ಸೆಗಾಗಿ ನಾನು ಅಗೆಯುತ್ತಿರುವೆನೋ ಅವನೂ ಸಹ ಹಿಂಸೆಗೆ ಗುರಿಯಾಗದಿರಲಿ. ನಾಲ್ಕು ಕಾಲುಗಳುಳ್ಳ ನಮ್ಮ ಪ್ರಾಣಿಗಳೂ, ಎರಡು ಕಾಲುಳ್ಳ ಪ್ರಾಣಿಗಳೂ ಸಹ ರೋಗರಹಿತರಾಗಿ ಸ್ವಸ್ಥರಾಗಿರಲಿ.

ಓಷಧಿಗಳು ತಮ್ಮ ರಾಜನಾದ ಸೋಮನೊಡನೆ–ಯಾರಿಗಾಗಿ ಬ್ರಾಹ್ಮಣನು ಚಿಕಿತ್ಸೆಯನ್ನು ಮಾಡುತ್ತಿರುವನೋ ಅವನನ್ನು ರೋಗಮುಕ್ತನನ್ನಾಗಿ ಮಾಡೋಣ ವೆಂದು–ಸಂಭಾಷಿಸುತ್ತವೆ.

ಈ ಬೀಜಾವಾಪಪ್ರಕರಣದಲ್ಲಿ ಬ್ರಾಹ್ಮಣದಲ್ಲಿ '**ಚತುರ್ದಶಭಿರ್ವಪತಿ**' [ಹದಿನಾಲ್ಕು ಮಂತ್ರಗಳಿಂದ ಬೀಜಾವಾಪವನ್ನು ಮಾಡುತ್ತಾನೆ/ಮಾಡಬೇಕು] ಎಂದು ಹೇಳಿದೆ. ಆವಾಪಕ್ಕಾಗಿ ಹದಿನಾಲ್ಕು ಧಾನ್ಯಗಳನ್ನು ಹೇಳಲಾಗಿದೆ. ಅವು ಎರಡು ಬಗೆ. ಗ್ರಾಮ್ಯ ಧಾನ್ಯಗಳು ಹಾಗೂ ಆರಣ್ಯಕಧಾನ್ಯಗಳು. ಆ ಎರಡು ಬಗೆಯ ಧಾನ್ಯಗಳು ಏಳೇಳು ಇವೆ. ತಿಲ, ಮಾಷ, ವ್ರೀಹಿ, ಯವ, ಪ್ರಿಯಂಗು, ಅಣು ಹಾಗೂ ಗೋಧೂಮ ಇವು ಗ್ರಾಮ್ಯಧಾನ್ಯಗಳು. ವೇಣು, ಶ್ಯಾಮಾಕ, ನೀವಾರ, ಜರ್ತಿಲ, ಗವೀಧುಕ, ಮರ್ಕಟಕ ಹಾಗೂ ಗಾರ್ಮುತ– ಇವು ಆರಣ್ಯಕಧಾನ್ಯಗಳು.

---

## ವಿನಿಯೋಗಸಂಗ್ರಹ

**1-14 ಯಾ ಜಾ ಗ್ರಾಮ್ಯಾಸ್ತಥಾऽऽರಣ್ಯಾಃ ಕೃಷ್ಟಾಕೃಷ್ಟಭುವೋರ್ವಪೇತ್ ।**

**ಚತುರ್ದಶಭಿರನ್ಯಾಸ್ತು 15-20 ಷಡತ್ರೈವ ವಿಕಲ್ಪಿತಾಃ ॥**

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–20

## ಅನುವಾಕದ ವಿಶೇಷವಿಷಯಗಳು

### ಅ) ಮೀಮಾಂಸಾ

1) ಬೀಜಾವಾಪದ ಹದಿನಾಲ್ಕು ಮಂತ್ರಗಳ ಪರಿಗಣನೆ ಹೇಗೆ ?

[ಜೈ. ಸೂ. 10. 5]

ಬೀಜಾವಾಪದಲ್ಲಿ '**ಚತುರ್ದಶಭಿರ್ವಪತಿ**' ಎಂಬ ವಿಧಿಯಿದೆ. ಈ ಪ್ರಕರಣದಲ್ಲಿ ಹದಿನಾಲ್ಕಕ್ಕಿಂತಲೂ ಹೆಚ್ಚು ಮಂತ್ರಗಳು ಪಠಿತವಾಗಿವೆ. ಹೀಗೆ ಇರುವಾಗ

ಹದಿನಾಲ್ಕು ಮಂತ್ರಗಳನ್ನು ನಿಷ್ಕರ್ಷಿಸುವುದು ಹೇಗೆ? ಇದು ಇಲ್ಲಿನ **ಸಂಶಯ.**

ಕ್ರಮವನ್ನು ಅನುಸರಿಸಿ ಮೊದಲಿನ ಹದಿನಾಲ್ಕು ಮಂತ್ರಗಳಿಂದ ಓಷಧಿವಾಪವನ್ನು ಮಾಡಬೇಕು. ಇದು ಇಲ್ಲಿನ **ಪೂರ್ವಪಕ್ಷ.**

ಕ್ರಮವನ್ನು ಅನುಸರಿಸಿ ಪ್ರಾರಂಭದಿಂದ 14 ಮಂತ್ರಗಳನ್ನು ಪರಿಗ್ರಹಿಸಿದರೆ, ಉಳಿದ ಮಂತ್ರಗಳ ಪಾಠವು ಪ್ರಕರಣದಲ್ಲಿ ವ್ಯರ್ಥವಾಗುತ್ತದೆ. ಆದುದರಿಂದ ಪ್ರಕರಣದಿಂದ ಕ್ರಮವನ್ನು ಬಾಧಿಸಿ, ತನ್ನ ಇಚ್ಛೆಯಂತೆ ಪ್ರಕರಣದ ಯಾವುದಾದರೂ ಹದಿನಾಲ್ಕು ಮಂತ್ರಗಳಿಂದ ಬೀಜಾವಾಪವು ಆಗುವಂತೆ ಮಂತ್ರಗಳನ್ನು ಪರಿಗಣಿಸಿ, ಪರಿಗ್ರಹಿಸ ಬೇಕು. ಇದು ಇಲ್ಲಿನ **ಸಿದ್ಧಾಂತ.**



## ॥ ಸಪ್ತಮೋಽನುವಾಕಃ ॥

ಮಾ ನೋ ಹಿಗ್‍ಂಸೀಜ್ಜನಿತಾ ಯಃ ಪೃಥಿವ್ಯಾ ಯೋ ವಾ

ದಿವಗ್‍ಂ ಸತ್ಯಧರ್ಮಾ ಜಜಾನ । ಯಶ್ಚಾಪಶ್ಚಂದ್ರಾ

ಬೃಹತೀರ್ಜಜಾನ

---

ಮಾ । ನಃ । ಹಿಗ್‍ಂಸೀತ್ । ಜನಿತಾ । ಯಃ । ಪೃಥಿವ್ಯಾಃ । ಯಃ । ವಾ । ದಿವಮ್ ।

ಸತ್ಯಧರ್ಮೇತಿ ಸತ್ಯ–ಧರ್ಮಾ । ಜಜಾನ ॥ ಯಃ । ಚ । ಅಪಃ । ಚಂದ್ರಾಃ । ಬೃಹತೀಃ ।

ಜಜಾನ ।

---

ಆರನೆಯ ಅನುವಾಕದಲ್ಲಿ ಓಷಧಿವಾಪವು ಹೇಳಲ್ಪಟ್ಟಿತು. ಈ ಏಳನೆಯ ಅನುವಾಕದಲ್ಲಿ ಲೋಷ್ಟಕ್ಷೇಪಣಾದಿಗಳು ಹೇಳಲ್ಪಟ್ಟಿವೆ.

---

| ಮಂತ್ರ | ವಿನಿಯೋಗ |
|---|---|
| ಮಾ ನೋ...ವಿಧೇಮ ॥ | ನಾಲ್ಕು ದಿಕ್ಕುಗಳಿಂದಲೂ ಹೊರಗೆ ಬಿದ್ದಿರುವ ಹೆಂಟೆಗಳನ್ನು ಒಳಗೆ ಹಾಕಲು. |

---

ಯಃ=ಯಾವ ಪ್ರಜಾಪತಿಯು; ಪೃಥಿವ್ಯಾಃ=ಪೃಥಿವಿಯ; ಜನಿತಾ=ಉತ್ಪಾದಕನೋ; ಯಃ ವಾ ಸತ್ಯಧರ್ಮಾ=ಸತ್ಯವಾದ ಧಾರಣಶಕ್ತಿಯುಳ್ಳವನಾದ ಯಾವ ಪ್ರಜಾಪತಿ ದೇವನು; ದಿವಮ್=ದ್ಯುಲೋಕವನ್ನು; ಜಜಾನ=ಉತ್ಪತ್ತಿ ಮಾಡಿರುವನೋ; ಯಃ ಚ=ಮತ್ತು ಯಾವ ಪ್ರಜಾಪತಿಯು; ಚಂದ್ರಾಃ=ಆಹ್ಲಾದಕರವಾದ; ಬೃಹತೀಃ= ಬಹುಲವಾದ; ಅಪಃ=ನೀರುಗಳನ್ನು; ಜಜಾನ=ಉಂಟುಮಾಡಿರುವನೋ; ಸಃ=ಆ ಪ್ರಜಾಪತಿಯು; ನಃ=ನಮ್ಮನ್ನು; ಮಾ ಹಿಂಸೀತ್=ಹಿಂಸಿಸದಿರಲಿ.

# ಕಸ್ಮೈ ದೇವಾಯ ಹವಿಷಾ ವಿಧೇಮ ॥ ಅಭ್ಯಾವರ್ತಸ್ವ ಪೃಥಿವಿ ಯಜ್ಞೇನ ಪಯಸಾ ಸಹ । ವಪಾಂ ತೇ ಅಗ್ನಿರಿಷಿತೋಽವ ಸರ್ಪತು ॥

---

ಕಸ್ಮೈ । ದೇವಾಯ । ಹವಿಷಾ । ವಿಧೇಮ ॥ ಅಭ್ಯಾವರ್ತಸ್ವೇತ್ಯಭಿ-ಆವರ್ತಸ್ವ । ಪೃಥಿವಿ । ಯಜ್ಞೇನ । ಪಯಸಾ । ಸಹ ॥ ವಪಾಮ್ । ತೇ । ಅಗ್ನಿಃ । ಇಷಿತಃ । ಅವೇತಿ । ಸರ್ಪತು ॥

---

| ಮಂತ್ರ | ವಿನಿಯೋಗ |
| --- | --- |
| ಅಭ್ಯಾವರ್ತಸ್ವ...ಸರ್ಪತು ॥ | ಲೋಷ್ಟಕ್ಷೇಪಣದ ಎರಡನೆಯ ಮಂತ್ರ. |

---

**ಕಸ್ಮೈ ದೇವಾಯ**=ಅನಿರ್ವಾಚ್ಯನಾದ ಆ ಪ್ರಜಾಪತಿದೇವನಿಗಾಗಿ; **ಹವಿಷಾ ವಿಧೇಮ**=ಹವಿಸ್ಸಿನಿಂದ ಪರಿಚರಿಸೋಣ. ▲ **ಪೃಥಿವಿ**=ಭೂದೇವಿಯೇ! **ಯಜ್ಞೇನ**=[ನಾವು ಮಾಡಲಿರುವ] ಯಾಗದಿಂದಲೂ; **ಪಯಸಾ ಸಹ**=[ಯಜ್ಞಫಲವಾದ] ನೀರಿನೊಡನೆಯೂ; **ಅಭ್ಯಾವರ್ತಸ್ವ**=ನಮ್ಮ ಎದುರಾಗಿ ಬಾ. **ಅಗ್ನಿಃ**=ಅಗ್ನಿದೇವನು; **ತೇ**=ನಿನ್ನ; **ವಪಾಮ್**=ಹೊಕ್ಕಳಿನಂತಿರುವ ಈ ಪ್ರದೇಶವನ್ನು; **ಇಷಿತಃ**=ಇಚ್ಛಿಸುವವನಾಗಿ; **ಅವಸರ್ಪತು**=ಹೊಂದಲಿ.

---

ಪ್ರಜಾಪತಿಯು ಭೂಮಿಯನ್ನೂ, ದ್ಯುಲೋಕವನ್ನೂ, ಆಹ್ಲಾದಕರವಾದ ನೀರುಗಳನ್ನೂ ಸೃಷ್ಟಿಸಿರುತ್ತಾನೆ. ಆತನ ಧಾರಣಶಕ್ತಿಯು ಸತ್ಯವಾದುದು. ಆತನು ನಮ್ಮನ್ನು ಹಿಂಸಿಸದಿರಲಿ. ಅನಿರ್ವಾಚ್ಯನಾದ ಆ ಪ್ರಜಾಪತಿಗೆ ಹವಿಸ್ಸನ್ನು ಸಮರ್ಪಿಸೋಣ.

ಭೂದೇವಿಯೇ! ಈ ಪ್ರದೇಶದಲ್ಲಿ ಯಾಗಾನುಷ್ಠಾನವಾಗಲಿ. ಅದರ ಫಲವಾಗಿ ಮಳೆಯಾಗಿ ಜಲಸಮೃದ್ಧಿಯುಂಟಾಗಲಿ. ಅಗ್ನಿದೇವನು ಇಚ್ಛೆಯಿಂದ ಈ ಯಾಗಭೂಮಿಯಲ್ಲಿರಲಿ.

ಅಗ್ನೇ ಯತ್ತೇ ಶುಕ್ರಂ ಯಚ್ಚಂದ್ರಂ ಯತ್ಪೂತಂ

ಯದ್ಯಜ್ಞಿಯಮ್ । ತದ್ದೇವೇಭ್ಯೋ ಭರಾಮಸಿ ॥

ಇಷಮೂರ್ಜಮಹಮಿತ ಆ [(೨೯)ದದ] ದದ ಋತಸ್ಯ

ಧಾಮ್ನೋ ಅಮೃತಸ್ಯ ಯೋನೇಃ ।

---

ಅಗ್ನೇ । ಯತ್ । ತೇ । ಶುಕ್ರಮ್ । ಯತ್ । ಚಂದ್ರಮ್ । ಯತ್ । ಪೂತಮ್ । ಯತ್ । ಯಜ್ಞಿಯಮ್ ॥ ತತ್ । ದೇವೇಭ್ಯಃ । ಭರಾಮಸಿ ॥ ಇಷಮ್ । ಊರ್ಜಮ್ । ಅಹಮ್ । ಇತಃ । ಏತಿ (೨೯) ದದೇ । ಋತಸ್ಯ । ಧಾಮ್ನಃ । ಅಮೃತಸ್ಯ । ಯೋನೇಃ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇ...ಭರಾಮಸಿ ॥ | ಲೋಷ್ಟಕ್ಷೇಪಣದ ಮೂರನೆಯ ಮಂತ್ರ. |
| ಇಷಮೂರ್ಜಮ್....ಅಮೀವಾಮ್ ॥ | ಲೋಷ್ಟಕ್ಷೇಪಣದ ನಾಲ್ಕನೆಯ ಮಂತ್ರ. |

---

▲ **ಅಗ್ನೇ**=ಅಗ್ನಿಯೇ! **ಯತ್ ತೇ** ಅಂಗಮ್=ಯಾವ ನಿನ್ನ ಅಂಗವು; **ಶುಕ್ರಮ್**=ಪ್ರಕಾಶಮಾನವಾಗಿ ಇರುವುದೋ; **ಯತ್ ಚಂದ್ರಮ್**=ಯಾವುದು ಆಹ್ಲಾದಕರವಾಗಿ ಇರುವುದೋ; **ಯತ್ ಪೂತಮ್**=ಯಾವುದು ಪರಿಶುದ್ಧವೋ; **ಯತ್ ಯಜ್ಞಿಯಮ್**=ಯಾವುದು ಯಜ್ಞಾರ್ಹವಾಗಿದೆಯೋ; **ತತ್**=[ಲೋಷ್ಟರೂಪವಾದ] ಅದೆಲ್ಲವನ್ನೂ; **ದೇವೇಭ್ಯಃ**=ದೇವತೆಗಳಿಗಾಗಿ; **ಭರಾಮಸಿ**=ಸಂಪಾದಿಸುತ್ತೇವೆ. ▲ **ಅಹಮ್**=ನಾನು; **ಋತಸ್ಯ**=ಯಜ್ಞದ; **ಧಾಮ್ನಃ**=ಸ್ಥಾನಭೂತವಾದ; **ಅಮೃತಸ್ಯ ಯೋನೇಃ**=ಶಾಶ್ವತವಾದ ಫಲಕ್ಕೆ ಕಾರಣಭೂತವಾದ; **ಇತಃ**=ಈ ಪ್ರದೇಶದಿಂದ; **ಇಷಮ್**=ಅನ್ನವನ್ನೂ; **ಊರ್ಜಮ್**=ರಸವನ್ನೂ/ರಸರೂಪವಾದ ಲೋಷ್ಟವನ್ನೂ; **ಆ ದದೇ**=ತೆಗೆದುಕೊಳ್ಳುತ್ತೇನೆ. [ಆ ಲೋಷ್ಟವು]

ಆ ನೋ ಗೋಷು ವಿಶತ್ವೌಷಧೀಷು ಜಹಾಮಿ ಸೇದಿಮನಿರಾಮಮೀವಾಮ್ ॥ ಅಗ್ನೇ ತವ ಶ್ರವೋ ವಯೋ ಮಹಿ ಭ್ರಾಜಂತ್ಯರ್ಚಯೋ ವಿಭಾವಸೋ । ಬೃಹದ್ಭಾನೋ ಶವಸಾ ವಾಜಮುಕ್ಥ್ಯꣳ ದಧಾಸಿ ದಾಶುಷೇ ಕವೇ ॥

---

ಏತಿ । ನಃ । ಗೋಷು । ವಿಶತು । ಏತಿ । ಓಷಧೀಷು । ಜಹಾಮಿ । ಸೇದಿಮ್ । ಅನಿರಾಮ್ । ಅಮೀವಾಮ್ ॥ ಅಗ್ನೇ । ತವ । ಶ್ರವಃ । ವಯಃ । ಮಹಿ । ಭ್ರಾಜಂತಿ । ಅರ್ಚಯಃ । ವಿಭಾವಸೋ ಇತಿ ವಿಭಾ-ವಸೋ ॥ ಬೃಹದ್ಭಾನೋ ಇತಿ ಬೃಹತ್-ಭಾನೋ । ಶವಸಾ । ವಾಜಮ್ । ಉಕ್ಥ್ಯಮ್ । ದಧಾಸಿ । ದಾಶುಷೇ । ಕವೇ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇ ತವ...ಕವೇ ॥ | ಸಿಕತಾನಿವಾಪ(ಮರಳನ್ನು ಹರಡುವುದು)ದಲ್ಲಿ ವಿಹಿತವಾದ ಮಂತ್ರಗಳಲ್ಲಿ ಮೊದಲನೆಯ ಮಂತ್ರ. |

---

**ನಃ**=ನಮ್ಮ; **ಗೋಷು**=ಗೋವುಗಳಲ್ಲಿ; **ಆ ವಿಶತು**=ಬಂದು ಪ್ರವೇಶಿಸಲಿ. **ಓಷಧೀಷು ಆ** ವಿಶತು=ಓಷಧಿಗಳಲ್ಲಿ ಪ್ರವೇಶಿಸಲಿ. **ಅನಿರಾಮ್**=ಅನ್ನರಹಿತವಾದ; **ಅಮೀವಾಮ್**=ರೋಗಯುಕ್ತವಾದ; **ಸೇದಿಮ್**=ಭೂಮಿಯನ್ನು; **ಜಹಾಮಿ**=ತ್ಯಜಿಸುತ್ತೇನೆ. 🔔 **ಅಗ್ನೇ**=ಹೇ! ಅಗ್ನಿಯೇ! **ತವ ಶ್ರವಃ**=ನಿನ್ನದೆಂದು ಪ್ರಖ್ಯಾತವಾಗಿರುವ; **ವಯಃ**=ಅನ್ನವು; **ಮಹಿ**=ಅಧಿಕವಾಗಿದೆ. **ವಿಭಾವಸೋ**=ಕಾಂತಿಯೇ ಧನವಾಗಿರುವ ಅಗ್ನಿಯೇ! **ಅರ್ಚಯಃ**=[ನಿನ್ನ]ಜ್ವಾಲೆಗಳು; **ಭ್ರಾಜಂತಿ**=ಪ್ರಕಾಶಿಸುತ್ತವೆ. **ಬೃಹದ್ಭಾನೋ**=ದೊಡ್ಡ ಕಿರಣಗಳುಳ್ಳವನೇ! **ಕವೇ**=ಯಜಮಾನನ ಅಭಿಪ್ರಾಯವನ್ನು ತಿಳಿದವನೇ! **ದಾಶುಷೇ**=ಹವಿಸ್ಸನ್ನು ಸಮರ್ಪಿಸುವ ಯಜಮಾನನಿಗಾಗಿ; **ಉಕ್ಥ್ಯಮ್**=ಉಕ್ಥಾದಿ ಶಸ್ತ್ರಮಂತ್ರಾರ್ಹವಾದ/ಯಜ್ಞಕ್ಕೆ ಅರ್ಹವಾದ; **ವಾಜಮ್**=ಅನ್ನವನ್ನು; **ಶವಸಾ**=ಬಲದಿಂದ; **ದಧಾಸಿ**=ಧರಿಸಿರುವೆ. [ಅದನ್ನು ಕೊಡು]

ಇರಜ್ಯನ್ನಗ್ನೇ ಪ್ರಥಯಸ್ವ ಜಂತುಭಿರಸ್ಮೇ ರಾಯೋ ಅಮರ್ತ್ಯ । ಸ ದರ್ಶತಸ್ಯ ವಪುಷೋ ವಿ ರಾಜಸಿ ಪೃಣಕ್ಷಿ ಸಾನಸಿಗ್ಂ ರಯಿಮ್ ॥

ಇರಜ್ಯನ್ । ಅಗ್ನೇ । ಪ್ರಥಯಸ್ವ । ಜಂತುಭಿರಿತಿ ಜಂತು-ಭಿಃ । ಅಸ್ಮೇ ಇತಿ । ರಾಯಃ । ಅಮರ್ತ್ಯ ॥ ಸಃ । ದರ್ಶತಸ್ಯ । ವಪುಷಃ । ವೀತಿ । ರಾಜಸಿ । ಪೃಣಕ್ಷಿ । ಸಾನಸಿಮ್ । ರಯಿಮ್ ॥

| ಮಂತ್ರ | ವಿನಿಯೋಗ |
|---|---|
| ಇರಜ್ಯನ್ನಗ್ನೇ...ರಯಿಮ್ ॥ | ಸಿಕತಾನಿವಾಪದ ಎರಡನೆಯ ಮಂತ್ರ. |

ಅಮರ್ತ್ಯ=ನಾಶರಹಿತನಾದ; ಅಗ್ನೇ=ಅಗ್ನಿಯೇ; ಜಂತುಭಿಃ=ಪುರೋಡಾಶಾದಿಗಳನ್ನು ಕೊಡುವ ಪ್ರಾಣಿಗಳಿಂದ; ಇರಜ್ಯನ್=[ಪ್ರಾಣಿಗಳಿಂದ ಲಬ್ಧವಾಗಿರುವ ಹವಿಸ್ಸುಗಳಿಂದ] ಪ್ರಜ್ವಲಿತನಾಗಿ; ಅಸ್ಮೇ ರಾಯಃ=ನಮ್ಮಲ್ಲಿ ಧನಗಳನ್ನು; ಪ್ರಥಯಸ್ವ =ವಿಸ್ತರಿಸು. ಸಃ=ಅಂತಹ ನೀನು; ದರ್ಶತಸ್ಯ=ದರ್ಶನೀಯವಾದ; ವಪುಷಃ [ಮಧ್ಯೇ]=ಚಿತ್ಯಾಗ್ನಿರೂಪವಾದ ಶರೀರದ ಮಧ್ಯದಲ್ಲಿ; ವಿರಾಜಸಿ=ಪ್ರಕಾಶಿಸುತ್ತೀಯೆ. ಸಾನಸಿಮ್=ಬಹುವಿಧವಾದ ದಾನಕ್ಕೆ ಅರ್ಹವಾದ; ರಯಿಮ್=ಧನವನ್ನು; ಪೃಣಕ್ಷಿ=ನಮಗಾಗಿ ಪೂರಣ ಮಾಡು/ತುಂಬು.

ಇಲ್ಲಿ ಲೋಷ್ಟವನ್ನು ಅಗ್ನಿಯಂತೆ ವರ್ಣಿಸಲಾಗಿದೆ. ಹೇ! ಅಗ್ನಿಯೇ! ನಿನಗೆ ಪ್ರಕಾಶಮಾನವಾದ ಅಂಗವಿದೆ. ಆಹ್ಲಾದಕರವಾದ ಅಂಗವಿದೆ. ಪರಿಶುದ್ಧವಾದ ಅಂಗವಿದೆ. ಯಜ್ಞಾರ್ಹವಾದ ಅಂಗವೂ ಇದೆ. ನಿನ್ನ ಈ ಅಂಗಗಳನ್ನು ದೇವತೆಗಳಿಗಾಗಿ ಈ ಪ್ರದೇಶದಲ್ಲಿ ಸಂಪಾದಿಸುತ್ತೇನೆ.

ಈ ಪ್ರದೇಶವು ಯಜ್ಞಸ್ಥಾನವಾಗಿದೆ. ಶಾಶ್ವತಫಲಕ್ಕೆ ಕಾರಣವಾಗಿದೆ. ಇದರಿಂದ ಅನ್ನಸ್ವರೂಪವೂ ರಸಸ್ವರೂಪವೂ ಆಗಿರುವ ಲೋಷ್ಟವನ್ನು ತೆಗೆದುಕೊಳ್ಳುತ್ತೇನೆ.

ಊರ್ಜೋ ನಪಾಜ್ಜಾತವೇದಸ್ಸುಶಸ್ತಿಭಿರ್ಮಂದಸ್ವ [(೩೦)]

ಧೀತಿಭಿರ್ಹಿತಃ । ತ್ವೇ ಇಷಃ ಸಂ ದಧು

ರ್ಭೂರಿರೇತಸಶ್ಚಿತ್ರೋತಯೋ ವಾಮಜಾತಾಃ ॥

---

ಊರ್ಜಃ । ನಪಾತ್ । ಜಾತವೇದ ಇತಿ ಜಾತ-ವೇದಃ । ಸುಶಸ್ತಿಭಿರಿತಿ ಸುಶಸ್ತಿ-ಭಿಃ । ಮಂದಸ್ವ । (೩೦) । ಧೀತಿಭಿರಿತಿ ಧೀತಿ-ಭಿಃ । ಹಿತಃ ॥ ತ್ವೇ ಇತಿ । ಇಷಃ । ಸಮಿತಿ । ದಧುಃ । ಭೂರಿರೇತಸ ಇತಿ ಭೂರಿ-ರೇತಸಃ । ಚಿತ್ರೋತಯ ಇತಿ ಚಿತ್ರ-ಊತಯಃ । ವಾಮಜಾತಾ ಇತಿ ವಾಮ-ಜಾತಾಃ ॥

---

| ಮಂತ್ರ | ವಿನಿಯೋಗ |
|---|---|
| ಊರ್ಜೋ...ವಾಮಜಾತಾಃ ॥ | ಮೂರನೆಯ ಸಿಕತಾವಾಪವನ್ನು ಮಾಡಲು. |

---

▲ **ಊರ್ಜಃ**=ಅನ್ನವನ್ನು; **ನಪಾತ್**=ನಾಶಪಡಿಸದಿರುವ/ರಕ್ಷಿಸುವ; **ಜಾತವೇದಃ**=ಎಲ್ಲವನ್ನೂ ತಿಳಿದಿರುವ ಅಗ್ನಿದೇವನೇ! **ಧೀತಿಭಿಃ ಹಿತಃ**=ದೀಪ್ತಿಗಳಿಂದ ಕೂಡಿದವನಾಗಿ; **ಸುಶಸ್ತಿಭಿಃ**=ಒಳ್ಳೆಯ ಸ್ತುತಿಗಳಿಂದ; **ಮಂದಸ್ವ**=ಸಂತೋಷಿಸು; **ಚಿತ್ರೋತಯಃ**=[ಅಗ್ನಿಯಿಂದ ಮಾಡಿದ] ಬಗೆಬಗೆಯ ರಕ್ಷಣೆಗಳುಳ್ಳ; **ವಾಮಜಾತಾಃ**=ಸೇವಿಸಬೇಕಾದ ಕುಲದಲ್ಲಿ ಅಥವಾ ದೇಶದಲ್ಲಿ ಹುಟ್ಟಿರುವ ಯಜಮಾನರು; **ಭೂರಿರೇತಸಃ**=ಹೆಚ್ಚಾದ ಸಾರವುಳ್ಳ; **ಇಷಃ**=ಅನ್ನರೂಪವಾದ ಆಹುತಿಗಳನ್ನು; **ತ್ವೇ**=ನಿನ್ನಲ್ಲಿ; **ಸಂದಧುಃ**=ಸಂಪಾದಿಸಿ ಇಟ್ಟಿರುತ್ತಾರೆ.

---

ಆದು ನಮ್ಮ ಗೋವುಗಳಲ್ಲಿಯೂ ಓಷಧಿಗಳಲ್ಲಿಯೂ ಪ್ರವೇಶಿಸಲಿ. ಅನ್ನರಹಿತವಾದ, ರೋಗಯುಕ್ತವಾದ ಪ್ರದೇಶವನ್ನು ಬಿಟ್ಟು ಬಿಡುತ್ತೇನೆ.

ಹೇ! ಅಗ್ನಿಯೇ! **'ಅಗ್ನಿರ್ವಾ ಅನ್ನಪತಿಃ'** ಎಂದಿರುವಂತೆ ನಿನ್ನದೆಂದು ಪ್ರಸಿದ್ಧವಾಗಿರುವ ಅನ್ನವು ಅಧಿಕವಾಗಿದೆ. ನಿನ್ನ ಜ್ವಾಲೆಗಳೂ ದೊಡ್ಡದಾಗಿವೆ. ನೀನು ಕಾಂತಿಯೇ

ಪಾವಕವರ್ಚಾಃ ಶುಕ್ರವರ್ಚಾ ಅನೂನವರ್ಚಾ

ಉದಿಯರ್ಷಿ ಭಾನುನಾ । ಪುತ್ರಃ ಪಿತರಾ

ವಿಚರನ್ನುಪಾವಸ್ಯುಭೇ ಪೃಣಕ್ಷಿ ರೋದಸೀ ॥

---

ಪಾವಕವರ್ಚಾ ಇತಿ ಪಾವಕ-ವರ್ಚಾಃ । ಶುಕ್ರವರ್ಚಾ ಇತಿ ಶುಕ್ರ-ವರ್ಚಾಃ । ಅನೂನವರ್ಚಾ ಇತ್ಯನೂನ-ವರ್ಚಾಃ । ಉದಿತಿ । ಇಯರ್ಷಿ । ಭಾನುನಾ ॥ ಪುತ್ರಃ । ಪಿತರಾ । ವಿಚರನ್ನಿತಿ ವಿ-ಚರನ್ । ಉಪೇತಿ । ಅವಸಿ । ಉಭೇ ಇತಿ । ಪೃಣಕ್ಷಿ । ರೋದಸೀ ಇತಿ ॥

---

| ಮಂತ್ರ | ವಿನಿಯೋಗ |
|---|---|
| ಪಾವಕವರ್ಚಾಃ...ರೋದಸೀ ॥ | ಮರಳನ್ನು ಹರಡಲು ನಾಲ್ಕನೆಯ ಮಂತ್ರ. |

---

▲ **ಪಾವಕವರ್ಚಾಃ**=ಪರಿಶುದ್ಧಿಗೊಳಿಸುವ ಪ್ರಕಾಶವುಳ್ಳ; **ಶುಕ್ರವರ್ಚಾಃ**=ನಿರ್ಮಲವಾದ ಜ್ಯೋತಿಯುಳ್ಳ; **ಅನೂನವರ್ಚಾಃ**=ಸಂಪೂರ್ಣವಾದ ಪ್ರಕಾಶವುಳ್ಳವನಾದ ಅಗ್ನಿದೇವನೇ!; **ಭಾನುನಾ**=ಕಾಂತಿಯಿಂದ; **ಉತ್ ಇಯರ್ಷಿ**=ಉತ್ಕೃಷ್ಟತೆಯನ್ನು ಹೊಂದಿರುತ್ತೀಯೆ. **ಪುತ್ರಃ**=[ಶಾಸ್ತ್ರವನ್ನು ಅನುಸರಿಸಿ ನಡೆಯುವ] ಮಗನು; **ಪಿತರಾ**=ತಾಯಿತಂದೆಯರನ್ನು [ಹೇಗೆ ಉಪಚರಿಸುವನೋ] **ಉಭೇ ರೋದಸೀ**=[ಹಾಗೆ] ದ್ಯಾವಾಪೃಥಿವಿಗಳೆರಡನ್ನೂ; **ವಿಚರನ್**=ಪರಿಚರಿಸುತ್ತಾ; **ಉಪಾವಸಿ**=ಸಮೀಪದಲ್ಲಿ ಇದ್ದುಕೊಂಡು ರಕ್ಷಿಸುತ್ತೀಯೆ. **ಪೃಣಕ್ಷಿ**=[ಭೂಮಿ-ಅಂತರಿಕ್ಷಗಳನ್ನು] ವ್ಯಾಪಿಸುತ್ತೀಯೆ/ತುಂಬುತ್ತೀಯೆ.

---

ಧನವಾಗಿರುವವನು. ಯಜಮಾನನ ಅಭಿಪ್ರಾಯವನ್ನು ತಿಳಿದವನು. ದೇವತೆಗಳಿಗೆ ಹವಿಸ್ಸುಗಳನ್ನು ಸಮರ್ಪಿಸುವ ಯಜ್ಞಾರ್ಹವಾದ ಅನ್ನವನ್ನು ಕೊಡಲು ಸಮರ್ಥನಾಗಿರುವೆ.

ಋತಾವಾನಂ ಮಹಿಷಂ ವಿಶ್ವಚರ್ಷಣಿಮಗ್ನಿಗ್ಂ

ಸುಮ್ನಾಯ ದಧಿರೇ ಪುರೋ ಜನಾಃ । ಶ್ರುತ್ಕರ್ಣಗ್ಂ

ಸಪ್ರಥಸ್ತಮಂ ತ್ವಾ ಗಿರಾ ದೈವ್ಯಂ ಮಾನುಷಾ ಯುಗಾ ॥

ಋತಾವಾನಮಿತ್ಯೃತ-ವಾನಮ್ । ಮಹಿಷಮ್ । ವಿಶ್ವಚರ್ಷಣಿಮಿತಿ ವಿಶ್ವ-ಚರ್ಷಣಿಮ್ । ಅಗ್ನಿಮ್ । ಸುಮ್ನಾಯ । ದಧಿರೇ । ಪುರಃ । ಜನಾಃ ॥ ಶ್ರುತ್ಕರ್ಣಮಿತಿ ಶ್ರುತ್-ಕರ್ಣಮ್ । ಸಪ್ರಥಸ್ತಮಮಿತಿ ಸಪ್ರಥಃ-ತಮಮ್ । ತ್ವಾ । ಗಿರಾ । ದೈವ್ಯಮ್ । ಮಾನುಷಾ । ಯುಗಾ ॥

| ಮಂತ್ರ | ವಿನಿಯೋಗ |
|---|---|
| ಋತಾವಾನಮ್...ಯುಗಾ ॥ | ಮರಳನ್ನು ಹರಡಲು ಐದನೆಯ ಮಂತ್ರ. |

ಜನಾಃ=ಋತ್ವಿಗ್ಯಜಮಾನರು; **ಋತಾವಾನಮ್**=ಸತ್ಯವಂತನಾದ; **ಮಹಿಷಮ್**=ಮಹಾಂತನಾದ; **ವಿಶ್ವಚರ್ಷಣಿಮ್**=ಎಲ್ಲ ಮನುಷ್ಯರೂ ಪರಿಚಾರಕ/ಆರಂಭಕರಾಗಿರುವ; **ಶ್ರುತ್ಕರ್ಣಮ್**=ಭಕ್ತರ ಪ್ರಾರ್ಥನೆಯನ್ನು ಕೇಳುವ ಕಿವಿಗಳುಳ್ಳ; **ಸಪ್ರಥಸ್ತಮಮ್**=ಹೆಚ್ಚಾದ ಕೀರ್ತಿಯುಳ್ಳ; **ಅಗ್ನಿಮ್**=ಅಗ್ನಿಯನ್ನು *ಮಾನುಷಾ=ಮಾನವರಿಗೆ ಸಂಬಂಧಿಸಿದ; **ಯುಗಾ**=ಯೋಗ್ಯವಾದ; **ಗಿರಾ**=ಸ್ತೋತ್ರರೂಪವಾದ ಮಾತಿನಿಂದ ಸ್ತುತಿಸಿ; **ಸುಮ್ನಾಯ**=ಸುಖಕ್ಕಾಗಿ; **ತ್ವಾ**=ನಿನ್ನನ್ನು[ಅಗ್ನಿಯನ್ನು]; **ದೈವ್ಯಮ್**=ದೇವತೆಗಳಿಗೆ ಹಿತವಾದವನನ್ನಾಗಿ; **ಪುರಃ**=ಮೊದಲು/ಪೂರ್ವಕಾಲದಲ್ಲಿ; **ದಧಿರೇ**=ಇಟ್ಟುಕೊಂಡರು.

ನಾಶರಹಿತನಾದ ಅಗ್ನಿಯೇ! ನೀನು ಪ್ರಾಣಿಗಳಿಂದ ಪ್ರಾಪ್ತವಾದ ಹವಿಸ್ಸುಗಳಿಂದ ಪ್ರಜ್ವಲಿತನಾಗಿರುವೆ. ನಮ್ಮಲ್ಲಿ ಧನಗಳನ್ನು ವೃದ್ಧಿಗೊಳಿಸು. ನೀನು ಮನೋಹರವಾದ

* ಮಾನುಷಾ=ಮಾನುಷಾಃ ಜನಾಃ=ಮನುಷ್ಯಜಾತಿಯವರಾದ ಜಂತುಗಳು ಎಂದು ಸಾಯಣಾಚಾರ್ಯರು ವಿವರಿಸಿರುತ್ತಾರೆ. ಪದಪಾಠವು 'ಮಾನುಷಾ' ಎಂದಿರುವುದರಿಂದ ವಿಭಕ್ತಿವ್ಯತ್ಯಯವೆಂದಿಟ್ಟುಕೊಳ್ಳಬೇಕು.

ನಿಷ್ಕರ್ತಾರಮಧ್ವರಸ್ಯ ಪ್ರಚೇತಸಂ ಕ್ಷಯಂತಗ್ಂ ರಾಧಸೇ ಮಹೇ । ರಾತಿಂ ಭೃಗೂಣಾಮುಶಿಜಂ ಕವಿಕ್ರತುಂ ಪೃಣಕ್ಷಿ ಸಾನಸಿಗ್ಂ [ಸಾನಸಿಮ್(೩೧)] ರಯಿಮ್ ॥

---

ನಿಷ್ಕರ್ತಾರಮಿತಿ ನಿಃ-ಕರ್ತಾರಮ್ । ಅಧ್ವರಸ್ಯ । ಪ್ರಚೇತಸಮಿತಿ ಪ್ರ-ಚೇತಸಮ್ । ಕ್ಷಯಂತಮ್ । ರಾಧಸೇ । ಮಹೇ ॥ ರಾತಿಮ್ । ಭೃಗೂಣಾಮ್ । ಉಶಿಜಮ್ । ಕವಿಕ್ರತುಮಿತಿ ಕವಿ-ಕ್ರತುಮ್ । ಪೃಣಕ್ಷಿ । ಸಾನಸಿಮ್ । (೩೧) । ರಯಿಮ್ ॥

---

| ಮಂತ್ರ | ವಿನಿಯೋಗ |
|---|---|
| ನಿಷ್ಕರ್ತಾರಮ್...ರಯಿಮ್ ॥ | ಸಿಕತಾನಿವಾಪದ ಆರನೆಯ ಮಂತ್ರ. |

---

🔔 ಹೇ! ಅಗ್ನಿಯೇ! [ನೀನು] **ಅಧ್ವರಸ್ಯ ನಿಷ್ಕರ್ತಾರಮ್**=ಯಜ್ಞವನ್ನು ಅನುಷ್ಠಿಸುವ; **ಪ್ರಚೇತಸಮ್**=ಶ್ರೇಷ್ಠವಾದ ಮನಸ್ಸುಳ್ಳ/ಶ್ರದ್ಧಾಳುವಾದ; **ಮಹೇ ರಾಧಸೇ**= ಮಹತ್ತಾದ ಹವೀರೂಪವಾದ ಅನ್ನಕ್ಕಾಗಿ/ಹವಿಸ್ಸನ್ನು ಕೊಡುವುದಕ್ಕಾಗಿ; **ಕ್ಷಯಂತಮ್**= ಇಲ್ಲಿ ವಾಸಿಸುವ; **ರಾತಿಮ್**=ದಾತೃವಾದ; **ಭೃಗೂಣಾಮ್ ಉಶಿಜಮ್**=ಭೃಗ್ವಾದಿ ಮುನಿಗಳಂತೆ [ತಪಸ್ವಿಗಳಲ್ಲಿ] ಮಹಾತಪಸ್ವಿಯಾದ; **ಕವಿಕ್ರತುಮ್**=ಯಜ್ಞಗಳನ್ನು ತಿಳಿದು ಅನುಷ್ಠಾನ ಮಾಡುವವನಾದ; **ಸಾನಸಿಮ್**=ದಾನಶೀಲನಾದ ಯಜಮಾನ ನನ್ನು/ಪಡೆಯಲು ಅರ್ಹವಾದ; **ರಯಿಮ್**=ಧನವನ್ನು; **ಪೃಣಕ್ಷಿ**=ಹೊಂದಿಸು.

---

ಚಿತ್ಯಾಗ್ನಿಯ ಮಧ್ಯದಲ್ಲಿ ಪ್ರಕಾಶಿಸುತ್ತೀಯೆ. ದಾನಾರ್ಹವಾದ ನಾನಾವಿಧವಾದ ಧನಗಳನ್ನು ಪೂರ್ಣವಾಗಿರುವಂತೆ ಮಾಡು.

ಜಾತವೇದನೇ! ನೀನು ಅನ್ನರಕ್ಷಕನು. ಪ್ರಕಾಶಯುಕ್ತನು. ನೀನು ಒಳ್ಳೆಯ ಸ್ತುತಿಗಳಿಂದ ಸಂತೋಷಿಸು. ನೀನು ಯಜಮಾನರಿಗೆ ಬಗೆಬಗೆಯ ರಕ್ಷಣೆಯನ್ನು ಒದಗಿಸಿರುತ್ತೀಯೆ. ಒಳ್ಳೆಯ ದೇಶ-ಕುಲದಲ್ಲಿ ಹುಟ್ಟಿರುವ ಯಜಮಾನರು ಸಾರವುಳ್ಳ ಅನ್ನರೂಪವಾದ ಆಹುತಿಗಳನ್ನು ನಿನ್ನಲ್ಲಿ ಇಟ್ಟಿರುತ್ತಾರೆ.

**ಚಿತಃ ಸ್ಥ ಪರಿಚಿತ ಊರ್ಧ್ವಚಿತಃ ಶ್ರಯಧ್ವಂ ತಯಾ ದೇವತಯಾಽಂಗಿರಸ್ವದ್ಧ್ರುವಾಸ್ಸೀದತ ॥**

---

ಚಿತಃ । ಸ್ಥ । ಪರಿಚಿತ ಇತಿ ಪರಿ-ಚಿತಃ । ಊರ್ಧ್ವಚಿತ ಇತ್ಯೂರ್ಧ್ವ-ಚಿತಃ । ಶ್ರಯಧ್ವಮ್ । ತಯಾ । ದೇವತಯಾ । ಅಂಗಿರಸ್ವತ್ । ಧ್ರುವಾಃ । ಸೀದತ ॥

---

| ಮಂತ್ರ | ವಿನಿಯೋಗ |
|---|---|
| **ಚಿತಸ್ಸ್ಥ...ಸೀದತ ॥** | ಕಲ್ಲುಗಳನ್ನು ಆಹವನೀಯಚಿತಿಪ್ರದೇಶದಲ್ಲಿ ಹಾಕಲು. |

---

[ಶರ್ಕರಾಕಲ್ಲುಗಳೇ!] **ಚಿತಃ ಸ್ಥ**=ಆಹವನೀಯಚಿತಿಯಲ್ಲಿ ಹರಡಲ್ಪಟ್ಟವರಾಗಿದ್ದೀರಿ; **ಪರಿಚಿತಃ ಸ್ಥ**=ಸುತ್ತಲೂ ಹರಡಲ್ಪಟ್ಟವರಾಗಿದ್ದೀರಿ; **ಊರ್ಧ್ವಚಿತಃ ಸ್ಥ**=ಮೇಲಿನಿಂದ ಹಾಕಲ್ಪಟ್ಟವರಾಗಿದ್ದೀರಿ; **ಶ್ರಯಧ್ವಮ್**=[ಆಹವನೀಯಚಿತಿಯನ್ನು] ಸೇವಿಸಿರಿ; **ತಯಾ ದೇವತಯಾ**=ನಿಮಗೆ ಯಾವ ದೇವತೆಯೋ ಆ ದೇವತೆಯೊಡನೆ; **ಅಂಗಿರಸ್ವತ್**=ಅಂಗಿರಸ ಮುನಿಗಳ ಚಿತಿಯು ಧ್ರುವವಾಗಿ ಇರುವಂತೆ; **ಧ್ರುವಾಃ ಸೀದತ**=ಸ್ಥಿರವಾಗಿರಿ.

---

ಹೇ! ಅಗ್ನಿಯೇ! ನಿನ್ನ ವರ್ಚಸ್ಸು ಶೋಧಕವೂ, ನಿರ್ಮಲವೂ ಆಗಿದೆ. ಅದು ಸಂಪೂರ್ಣವಾಗಿದೆ. ನೀನು ನಿನ್ನ ಪ್ರಕಾಶದಿಂದ ಉತ್ಕೃಷ್ಟನಾಗಿರುವೆ. ತಾಯಿ ತಂದೆಯರನ್ನು ಮಗನು ಪರಿಚರಿಸುವಂತೆ, ದ್ಯಾವಾಪೃಥಿವಿಗಳೆರಡನ್ನೂ ಸಮೀಪದಲ್ಲಿ ಇದ್ದುಕೊಂಡು ನೀನು ರಕ್ಷಿಸುತ್ತೀಯೆ ಮತ್ತು ನಿನ್ನ ತೇಜಸ್ಸಿನಿಂದ ತುಂಬುತ್ತೀಯೆ.

ಅಗ್ನಿದೇವನು ಸತ್ಯವಂತನು. ಮಹಾತ್ಮನು. ಮಾನವರೆಲ್ಲರೂ ಅವನನ್ನು ಸೇವಿಸುತ್ತಾರೆ. ಅವನು ತನ್ನನ್ನು ಆರಾಧಿಸುವವರ ಪ್ರಾರ್ಥನೆಗಳನ್ನು ಕೇಳತಕ್ಕವನು. ಅತ್ಯಂತ ಕೀರ್ತಿವಂತನು. ದೇವತೆಗಳಿಗೆ ಹವಿಸ್ಸನ್ನು ಕೊಡುವ ಹಿತನು. ಇಂತಹ ಅಗ್ನಿದೇವನನ್ನು ಯುಕ್ತವಾದ ಸ್ತೋತ್ರಗಳಿಂದ ಸ್ತುತಿಸಿ, ಪೂರ್ವಕಾಲದಲ್ಲಿ ಋತ್ವಿಗ್ಯಜಮಾನರು ಮುಂದಿಟ್ಟುಕೊಂಡರು. ಹೇ! ಅಗ್ನಿಯೇ! ನೀನು ಇಂತಹ ಪ್ರಭಾವಶಾಲಿಯಾಗಿರುವೆ.

ಹೇ! ಅಗ್ನಿಯೇ! ನೀನು ಶ್ರದ್ಧಾಳುವಾದ, ಹವಿಸ್ಸನ್ನು ನೀಡುವುದಕ್ಕಾಗಿ ಇಲ್ಲಿ ವಾಸ ಮಾಡುವ ದಾನಶೀಲನಾದ, ಮಹಾತಪಸ್ವಿಯಾದ, ಕ್ರತುಗಳನ್ನು ಅರಿತು ಅನುಷ್ಠಿಸುವ

**ಆ ಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣಿಯಮ್ । ಭವಾ ವಾಜಸ್ಯ ಸಂಗಥೇ ॥ ಸಂ ತೇ ಪಯಾಗ್ಂಸಿ ಸಮು ಯಂತು ವಾಜಾಃ ಸಂ ವೃಷ್ಣಿಯಾನ್ಯಭಿಮಾತಿಷಾಹಃ ।**

---

ಏತಿ । ಪ್ಯಾಯಸ್ವ । ಸಮಿತಿ । ಏತು । ತೇ । ವಿಶ್ವತಃ । ಸೋಮ । ವೃಷ್ಣಿಯಮ್ ॥ ಭವ । ವಾಜಸ್ಯ । ಸಂಗಥ ಇತಿ ಸಮ್-ಗಥೇ ॥ ಸಮಿತಿ । ತೇ । ಪಯಾಗ್ಂಸಿ । ಸಮಿತಿ । ಉ । ಯಂತು । ವಾಜಾಃ । ಸಮಿತಿ । ವೃಷ್ಣಿಯಾನಿ । ಅಭಿಮಾತಿಷಾಹ ಇತ್ಯಭಿಮಾತಿ-ಸಾಹಃ ।

---

| ಮಂತ್ರ | ವಿನಿಯೋಗ |
|---|---|
| ಆ ಪ್ಯಾಯಸ್ವ...ಸಂಗಥೇ ॥ | ಬ್ರಾಹ್ಮಣ ಯಜಮಾನನ ಅಗ್ನಿಚಯನದಲ್ಲಿ ಮರಳನ್ನು ಕೂಡಿಸಲು. |
| ಸಂ ತೇ...ಧಿಷ್ವ ॥ | ಕ್ಷತ್ರಿಯನಾದ ಯಜಮಾನನು ಅನುಷ್ಠಿಸುವ ಚಯನದಲ್ಲಿ ಸಿಕತಾವ್ಯೂಹ (ಮರಳನ್ನು ಕೂಡಿಸುವುದು) ವನ್ನು ಮಾಡಲು |

---

▲ **ಸೋಮ**=ಸೋಮನೇ! **ಆಪ್ಯಾಯಸ್ವ**=ನೀನು ವೃದ್ಧಿಹೊಂದು; **ತೇ**=ನಿನ್ನ; **ವೃಷ್ಣಿಯಮ್**=ರೇತಸ್ಸು/ಸಾರವು; **ವಿಶ್ವತಃ**=ಎಲ್ಲ ರೇತಸ್ಸು[ಸಾರ]ಗಳಿಂದಲೂ; **ಸಮ್ ಏತು**=ಕೂಡಿಕೊಳ್ಳಲಿ; **ವಾಜಸ್ಯ**=ಅನ್ನದ; **ಸಂಗಥೇ**=ಸೇರಿಕೊಳ್ಳುವಿಕೆಯಲ್ಲಿ ನಿಮಿತ್ತವಾಗಿ; **ಭವ**=ಆಗು; ▲ **ಸೋಮ**=ಸೋಮದೇವನೇ! **ಅಭಿಮಾತಿಷಾಹಃ**= ಪಾಪವನ್ನು ತಿರಸ್ಕರಿಸುವ; **ತೇ**=ನಿನ್ನ [ಅನುಗ್ರಹದಿಂದ ಪ್ರಾಪ್ತವಾದ] **ಪಯಾಗ್ಂಸಿ** =ಕ್ಷೀರಾದಿಗಳು; **ಸಮ್ ಯಂತು**=ಸಂಪ್ರಾಪ್ತವಾಗಲಿ. **ವೃಷ್ಣಿಯಾನಿ**=ವೀರ್ಯಗಳು; **ಸಮ್** ಉ ಯಂತು=ಚೆನ್ನಾಗಿ ಪ್ರಾಪ್ತವಾಗಲಿ; **ವಾಜಾಃ**=ಅನ್ನಗಳು; **ಸಮ್** ಉ ಯಂತು= ಸಂಪ್ರಾಪ್ತವಾಗಲಿ.

ಆಪ್ಯಾಯಮಾನೋ ಅಮೃತಾಯ ಸೋಮ ದಿವಿ

ಶ್ರವಾಗ್ಂಸ್ಯುತ್ತಮಾನಿ ಧಿಷ್ವ ॥ ೩೨-7 ॥

[ಆ ಮಂದಸ್ವ ಸಾನಸಿಮೇಕಾನ್ನಚತ್ವಾರಿಗ್ಂಶಚ್ಚ ॥]

---

ಆಪ್ಯಾಯಮಾನ ಇತ್ಯಾ-ಪ್ಯಾಯಮಾನಃ । ಅಮೃತಾಯ । ಸೋಮ । ದಿವಿ ।

ಶ್ರವಾಗ್ಂಸಿ । ಉತ್ತಮಾನೀತ್ಯುತ್-ತಮಾನಿ । ಧಿಷ್ವ ॥ (೩೨) ॥

---

ಆಪ್ಯಾಯಮಾನಃ=ಅನ್ನಾದಿಸಂಪತ್ತಿನಿಂದ ವೃದ್ಧಿಹೊಂದಿದ ನೀನು; ಅಮೃತಾಯ =ಯಜಮಾನನ ಅಮರತ್ವಕ್ಕಾಗಿ; ದಿವಿ=ಸ್ವರ್ಗದಲ್ಲಿ; ಉತ್ತಮಾನಿ=ಶ್ರೇಷ್ಠವಾದ; ಶ್ರವಾಂಸಿ=ಕೇಳುವುದಕ್ಕೆ ಪ್ರಿಯವಾದ [ಅನ್ನಗಳನ್ನು] ಧಿಷ್ವ=ಸಂಪಾದಿಸು.

---

ಯಜಮಾನನಿಗೆ ಧನವನ್ನು ಕೊಡು. [ಈ ಮಂತ್ರದಿಂದ ಯಜಮಾನನು ಹೇಗಿರ ಬೇಕೆಂಬುದು ತಿಳಿಯುತ್ತದೆ.]

ಹೇ! ಶರ್ಕರಾಕಲ್ಲುಗಳೇ! ನೀವು ಆಹವನೀಯಚಿತಿಯಲ್ಲಿಯೂ, ಮೇಲಿನಿಂದಲೂ, ಸುತ್ತಲೂ ಹರಡಲ್ಪಟ್ಟವರಾಗಿರುವಿರಿ. ನೀವು ಆಹವನೀಯಚಿತಿಯಲ್ಲಿ ವಿಹಿತವಾದ ದೇವತೆಯೊಡನೆ ಅಂಗಿರೋಮುನಿಗಳ ಚಿತಿಯಂತೆ ಸ್ಥಿರವಾಗಿ ಇರಿ.

ಸೋಮನೇ! ನೀನು ವೃದ್ಧಿ ಹೊಂದು. ನಿನ್ನ ಸಾರವೂ ಹೆಚ್ಚಲಿ. ನೀನು ಅನ್ನಪ್ರಾಪ್ತಿಗೆ ನಿಮಿತ್ತನಾಗು.

ಹೇ! ಸೋಮನೇ! ಪಾಪಪರಿಹಾರಕನಾದ ನಿನ್ನ ಅನುಗ್ರಹದಿಂದ ಕ್ಷೀರಾದಿಗಳೂ, ಅನ್ನಗಳೂ, ಸಾರಭೂತವಾದ ವೀರ್ಯಗಳೂ ವೃದ್ಧಿ ಹೊಂದಲಿ. ಸೋಮಯಾಗ ದಿಂದ ಯಜಮಾನನು ಅಮೃತತ್ವವನ್ನು ಹೊಂದಲಿ. ಅವನಿಗಾಗಿ ಸ್ವರ್ಗದಲ್ಲಿ ಉತ್ತಮವಾದ ಸುಖಸಾಧನಗಳನ್ನು ಸಿದ್ಧಪಡಿಸು.

---

## ವಿನಿಯೋಗಸಂಗ್ರಹ

ಮಾ1-4 ಚತುರ್ಭಿಃ ಕ್ಷಿಪೇಲ್ಲೋಷ್ಟಾನಗ್ನೇ 5-10ಷಟ್ಕೇನ ವಾಲುಕಾಃ ।
ಚಿತ11 ಆಹವನೀಯಸ್ಯ ಪರಿಶ್ರಯತಿ ಶರ್ಕರಾಃ ॥
ಆಪ್ಯಾ12 ವಿಪ್ರಸ್ಯ ಸಿಕತಾ ವ್ಯೂಹೇತ್ ಸಂ ತೇ13 ಪಯಾಂಸ್ಯಥ ।
ಕ್ಷತ್ರಿಯಸ್ಯ ಭವೇದ್ವ್ಯೂಹ ಇತಿ ಮಂತ್ರಾಸ್ತ್ರಯೋದಶ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–13

## ॥ ಅಷ್ಟಮೋಽನುವಾಕಃ ॥

ಅಭ್ಯಸ್ಥಾದ್ವಿಶ್ವಾಃ ಪೃತನಾ ಅರಾತೀಸ್ತದಗ್ನಿರಾಹ ತದು

ಸೋಮ ಆಹ । ಬೃಹಸ್ಪತಿಃ ಸವಿತಾ ತನ್ಮ ಆಹ ಪೂಷಾ

---

ಅಭೀತಿ । ಅಸ್ಥಾತ್ । ವಿಶ್ವಾಃ । ಪೃತನಾಃ । ಅರಾತೀಃ । ತತ್ । ಅಗ್ನಿಃ । ಆಹ । ತತ್ ।

ಉ । ಸೋಮಃ । ಆಹ ॥ ಬೃಹಸ್ಪತಿಃ । ಸವಿತಾ । ತತ್ । ಮೇ । ಆಹ । ಪೂಷಾ ।

---

ಏಳನೆಯ ಅನುವಾಕದಲ್ಲಿ ಲೋಷ್ಟಸಮಸನಾದಿಗಳು ಹೇಳಲ್ಪಟ್ಟವು. ಈ ಎಂಟನೆಯ ಅನುವಾಕದಲ್ಲಿ ರುಕ್ಮಾದ್ಯುಪಧಾನವು ಹೇಳಲ್ಪಡುತ್ತದೆ. ಮೊದಲು ಅಶ್ವಾಕ್ರಮಣವು ಹೇಳಲ್ಪಡುತ್ತದೆ.

---

| ಮಂತ್ರ | ವಿನಿಯೋಗ |
|---|---|
| ಅಭ್ಯಸ್ಥಾತ್...ಲೋಕೇ ॥ | ಪ್ರಾಙ್ಮುಖವಾದ ಕುದುರೆಯಿಂದ ದರ್ಭಪುಂಜವನ್ನು ದಕ್ಷಿಣಪಾದದಿಂದ ತುಳಿಸಲು |

---

🔔 [ಈ ಕುದುರೆಯು] ವಿಶ್ವಾಃ=ಎಲ್ಲಾ; ಪೃತನಾಃ=ಶತ್ರುಸೇನೆಗಳನ್ನೂ; ಅರಾತೀಃ=ಕೊಡಬೇಕಾದುದನ್ನು ಕೊಡದೆ ಇರುವವರನ್ನೂ; ಅಭ್ಯಸ್ಥಾತ್=ಮೆಟ್ಟಿ ನಿಲ್ಲುತ್ತದೆ/ನಿಲ್ಲಲಿ. ಮೇ=ನನಗಾಗಿ; ತತ್=ಅದನ್ನು; ಅಗ್ನಿಃ ಆಹ=ಅಗ್ನಿಯು ಅನುಮೋದಿಸಲಿ; ತತ್ ಸೋಮಃ ಉ=ಅದನ್ನು ಸೋಮದೇವನೂ; ಆಹ=ಅನುಮೋದಿಸಲಿ; ಬೃಹಸ್ಪತಿಃ ಆಹ=ಬೃಹಸ್ಪತಿಯೂ ಅನುಮತಿಸಲಿ; ಸವಿತಾ=ಸವಿತೃದೇವನೂ; ಮೇ=ನನಗಾಗಿ; ತತ್ ಆಹ=ಅನುಮೋದಿಸಲಿ; ಪೂಷಾ=ಪೂಷದೇವನು;

---

ಕುದುರೆಯು ದರ್ಭಪುಂಜವನ್ನು ಮೆಟ್ಟುವುದರ ಮೂಲಕ ಎಲ್ಲಾ ಶತ್ರುಸೇನೆಗಳನ್ನೂ,

**ಮಾಽಧಾಥ್ಸುಕೃತಸ್ಯ ಲೋಕೇ ॥ ಯದಕ್ರಂದಃ ಪ್ರಥಮಂ ಜಾಯಮಾನ ಉದ್ಯನ್ಥ್ಸಮುದ್ರಾದುತ ವಾ ಪುರೀಷಾತ್ । ಶ್ಯೇನಸ್ಯ ಪಕ್ಷಾ ಹರಿಣಸ್ಯ ಬಾಹೂ ಉಪಸ್ತುತಂ ಜನಿಮ ತತ್ತೇ ಅರ್ವನ್ನ್ ॥**

---

ಮಾ । ಅಧಾತ್ । ಸುಕೃತಸ್ಯೇತಿ ಸು-ಕೃತಸ್ಯ । ಲೋಕೇ ॥ ಯತ್ । ಅಕ್ರಂದಃ । ಪ್ರಥಮಮ್ । ಜಾಯಮಾನಃ । ಉದ್ಯನ್ನಿತ್ಯುತ್-ಯನ್ನ್ । ಸಮುದ್ರಾತ್ । ಉತ । ವಾ । ಪುರೀಷಾತ್ ॥ ಶ್ಯೇನಸ್ಯ । ಪಕ್ಷಾ । ಹರಿಣಸ್ಯ । ಬಾಹೂ ಇತಿ । ಉಪಸ್ತುತಮಿತ್ಯುಪ-ಸ್ತುತಮ್ । ಜನಿಮ । ತತ್ । ತೇ । ಅರ್ವನ್ನ್ ॥

---

| ಮಂತ್ರ | ವಿನಿಯೋಗ |
|---|---|
| ಯದಕ್ರಂದಃ...ಅರ್ವನ್ನ್॥ | ಅಶ್ವವನ್ನು ಪ್ರದಕ್ಷಿಣೆಯಾಗಿ ಸುತ್ತಿಸಿ ಮತ್ತೆ ಮೆಟ್ಟಿಸಲು. |

---

**ಮಾ**=ನನ್ನನ್ನು; **ಸುಕೃತಸ್ಯ ಲೋಕೇ**=ಪುಣ್ಯಫಲವಾದ ಸ್ವರ್ಗದಲ್ಲಿ; **ಅಧಾತ್**=ಸ್ಥಾಪಿಸಲಿ. 🔔 **ಅರ್ವನ್**=ಹೇ! ಅಶ್ವವೇ! **ಯತ್**=ಯಾವ ಕಾರಣದಿಂದ [ನೀನು] **ಜಾಯಮಾನಃ**=ಜನಿಸುತ್ತಲೇ; **ಪ್ರಥಮಮ್**=ಮೊದಲು; **ಅಕ್ರಂದಃ**=[ಸಂತೋಷದಿಂದ] ಹೇಷಾರವವನ್ನು ಮಾಡಿದೆಯೋ; **ತತ್**=ಆ ಕಾರಣದಿಂದ; **ಸಮುದ್ರಾತ್**= ಸಾಗರದಿಂದ; [ನೀರಿನಿಂದ]; **ಉತ ವಾ**=ಅಥವಾ; **ಪುರೀಷಾತ್**=ಪುಂಸ್ತ್ವಶಕ್ತಿಯುಳ್ಳ ಮಹಾಶ್ವದಿಂದ; **ಉದ್ಯನ್**=ಹುಟ್ಟುವವನಾಗಿರುವ; **ತೇ ಜನಿಮ**=ನಿನ್ನ ಹುಟ್ಟುವಿಕೆಯನ್ನು; [ಹೇಗೆ] **ಶ್ಯೇನಸ್ಯ ಪಕ್ಷಾ**=ಗಿಡುಗದ ರೆಕ್ಕೆಗಳು [ಶೀಘ್ರವಾದ ಹಾರಾಟಕ್ಕಾಗಿ; ಉಪಸ್ತುತೌ=ಹೊಗಳಲ್ಪಟ್ಟಿದೆಯೋ;] **ಹರಿಣಸ್ಯ ಬಾಹೂ**=ಜಿಂಕೆಯ ಕಾಲುಗಳು [ವೇಗದ ಓಟಕ್ಕಾಗಿ][ಸ್ತುತವಾಗಿವೆಯೋ][ಹಾಗೆ]**ಉಪಸ್ತುತಮ್**=ಪ್ರಶಂಸಿಸಲ್ಪಟ್ಟಿದೆ.

**ಅಪಾಂ ಪೃಷ್ಠಮಸಿ ಯೋನಿರಗ್ನೇಸ್ಸಮುದ್ರಮಭಿತಃ ಪಿನ್ವಮಾನಮ್ । ವರ್ಧಮಾನಂ ಮಹ [ಮಹಃ(೩೩)] ಆ ಚ ಪುಷ್ಕರಂ ದಿವೋ ಮಾತ್ರಯಾ ವರಿಣಾ ಪ್ರಥಸ್ವ ।**

---

ಅಪಾಮ್ । ಪೃಷ್ಠಮ್ । ಅಸಿ । ಯೋನಿಃ । ಅಗ್ನೇಃ । ಸಮುದ್ರಮ್ । ಅಭಿತಃ । ಪಿನ್ವಮಾನಮ್ ॥ ವರ್ಧಮಾನಮ್ । ಮಹಃ । (೩೩) । ಏತಿ । ಚ । ಪುಷ್ಕರಮ್ । ದಿವಃ । ಮಾತ್ರಯಾ । ವರಿಣಾ । ಪ್ರಥಸ್ವ ॥

---

| ಮಂತ್ರ | ವಿನಿಯೋಗ |
|---|---|
| **ಅಪಾಮ್...ಪ್ರಥಸ್ವ ॥** | ಕುದುರೆಯ ಹೆಜ್ಜೆಯ ಮೇಲೆ ಪುಷ್ಕರ[ತಾವರೆ]ದ ಎಲೆಯನ್ನು ಮೇಲ್ಮುಖವಾಗಿ ಇಡಲು. |

---

▲[ಪುಷ್ಕರಪರ್ಣವೇ!] [ನೀನು]**ಅಪಾಮ್ ಪೃಷ್ಠಮ್ ಅಸಿ**=ನೀರಿನ ಮೇಲ್ಭಾಗದಲ್ಲಿರುವೆ; ***ಅಗ್ನೇಃ**=ಅಗ್ನಿಗೆ; ***ಯೋನಿಃ**=ಕಾರಣನೂ ಆಗಿರುತ್ತೀಯೆ. **ಸಮುದ್ರಮ್ ಅಭಿತಃ**=ಸಮುದ್ರದಂತಿರುವ [ತಟಾಕದ] ಸುತ್ತಲೂ;/ತಟಾಕದಲ್ಲಿ; **ಪಿನ್ವಮಾನಮ್**=ಪ್ರೀತಿಕರನಾಗಿರುವೆ; **ವರ್ಧಮಾನಮ್**=[ದಿನದಿನದಲ್ಲಿಯೂ] ವೃದ್ಧಿಹೊಂದುತ್ತಿರುವೆ; **ಚ**=ಮತ್ತು; **ಮಹಃ**=ನಿರ್ಲೇಪವೇ ಮೊದಲಾದ ಗುಣಗಳಿಂದ ಸ್ತುತಿಸಲ್ಪಡುವೆ. **ಪುಷ್ಕರಮ್**=[ಅಗ್ನಿನಿಷ್ಪಾದನಮೂಲಕವಾಗಿ] ಪುಷ್ಟಿಕರನಾಗಿರುವೆ. [ಅಂತಹ ನೀನು] **ಮಾತ್ರಯಾ**=ಪರಿಮಾಣದಿಂದ; **ದಿವಃ ವರಿಣಾ**=ಅಂತರಿಕ್ಷಕ್ಕಿಂತಲೂ ಹೆಚ್ಚಳದಿಂದ; **ಆ ಪ್ರಥಸ್ವ**=ಸುತ್ತಲೂ ವಿಸ್ತೃತನಾಗು.

---

**ನಮ್ಮ ಅರಾತಿಗಳನ್ನೂ ಮೆಟ್ಟಿ ನಿಲ್ಲಲಿ. ಅದನ್ನು ಅಗ್ನಿಯೂ, ಸೋಮನೂ, ಬೃಹಸ್ಪತಿಯೂ, ಸವಿತೃವೂ ನನಗಾಗಿ ಅನುಮೋದಿಸಲಿ. ಪೂಷದೇವನು ಪುಣ್ಯಫಲವಾದ ಸ್ವರ್ಗದಲ್ಲಿ ನಾನು ಇರುವಂತೆ ಮಾಡಲಿ.**

---

*** ತ್ವಾಮಗ್ನೇ ಪುಷ್ಕರಾತ್...ಎಂಬ ಶ್ರುತಿವಚನವಿದೆ. [ತೈ. ಸಂ. 4.1.3]**

ಬ್ರಹ್ಮ ಜಜ್ಞಾನಂ ಪ್ರಥಮಂ ಪುರಸ್ತಾದ್ವಿಸೀಮತಃ

ಸುರುಚೋ ವೇನ ಆವಃ । ಸ ಬುಧ್ನಿಯಾ ಉಪಮಾ ಅಸ್ಯ

ವಿಷ್ಠಾಃ ಸತಶ್ಚ ಯೋನಿಮಸತಶ್ಚ ವಿವಃ ॥

---

ಬ್ರಹ್ಮ । ಜಜ್ಞಾನಮ್ । ಪ್ರಥಮಮ್ । ಪುರಸ್ತಾತ್ । ವೀತಿ । ಸೀಮತಃ । ಸುರುಚ ಇತಿ ಸು–ರುಚಃ । ವೇನಃ । ಆವಃ ॥ ಸಃ । ಬುಧ್ನಿಯಾಃ । ಉಪಮಾ ಇತ್ಯುಪ–ಮಾಃ । ಅಸ್ಯ । ವಿಷ್ಠಾ ಇತಿ ವಿ–ಸ್ಥಾಃ । ಸತಃ । ಚ । ಯೋನಿಮ್ । ಅಸತಃ । ಚ । ವಿವಃ ॥

---

| ಮಂತ್ರ | ವಿನಿಯೋಗ |
|---|---|
| ಬ್ರಹ್ಮ ಜಜ್ಞಾನಮ್...ವಿವಃ ॥ | ಪುಷ್ಕರಪರ್ಣದ ಮೇಲೆ ರುಕ್ಮ(ಸುವರ್ಣ)ವನ್ನು ಇಡಲು. |

---

**ಪ್ರಥಮಮ್ ಜಜ್ಞಾನಮ್**=ಮೊದಲು ಹುಟ್ಟಿದ; [ಈ ರುಕ್ಮವು] ಬ್ರಹ್ಮ=ಅತ್ಯಂತ ಬೃಹತ್ತಾಗಿದೆ; **ವೇನಃ**=ಕಮನೀಯನಾದ/ಸೇವಿಸಬೇಕಾದ ಸೂರ್ಯನು; **ಪುರಸ್ತಾತ್**=ಪೂರ್ವದಿಕ್ಕಿನಲ್ಲಿ ಇರುವವನಾಗಿ; **ಸೀಮತಃ**=ಎಲ್ಲ ಪ್ರದೇಶಗಳಲ್ಲಿಯೂ; **ಸುರುಚಃ**=ಒಳ್ಳೆಯ ಕಿರಣಗಳನ್ನು; **ವಿ ಆವಃ**=ವಿಶೇಷವಾಗಿ ವ್ಯಾಪಿಸುವಂತೆ ಮಾಡಿದನು; **ಸಃ**=ಅಂತಹ ಸೂರ್ಯನು; **ಅಸ್ಯ ಉಪಮಾಃ**=ಈ ರುಕ್ಮವನ್ನು ಹೋಲುವ; **ವಿಷ್ಠಾಃ**=ವಿಶೇಷವಾಗಿರುವ; **ಬುಧ್ನಿಯಾಃ**=ಮೂಲರೂಪವಾಗಿರುವ ಭೂಮಿಯಲ್ಲಿರುವ ಪದಾರ್ಥಗಳನ್ನು; ವಿ ಆವಃ=ವಿಶೇಷವಾಗಿ ವ್ಯಾಪಿಸಿ ಪ್ರಕಾಶಪಡಿಸುತ್ತಾನೆ; **ಸತಃ ಚ ಯೋನಿಮ್**=ಇರುವ ಘಟಾದಿಗಳಿಗೆ ಕಾರಣವಾದ ಮೃದಾದಿಗಳನ್ನೂ; **ಅಸತಃ ಚ ಯೋನಿಮ್**=ಇಲ್ಲದಿರುವ ಪುರುಷಶೃಂಗಾದಿಗಳಿಗೆ ಕಾರಣವಾದ ಮಾನವ ಮೂರ್ಧಾದಿಗಳನ್ನೂ; **ವಿವಃ**=ವಿಶೇಷವಾಗಿ ಬೆಳಗಿಸುತ್ತಾನೆ.

---

ಎಲೈ! ಅಶ್ವವೇ! ನೀನು * ಸಮುದ್ರದಿಂದಲೋ ಅಥವಾ ಮಹಾಶ್ವದಿಂದಲೋ

---

* 'ಅಪ್ಸು ಯೋನಿರ್ವಾ ಅಶ್ವಃ' ಎಂಬ ಶ್ರುತಿಯಂತೆ ಕುದುರೆಯು ನೀರಿನಲ್ಲಿ ಉತ್ಪನ್ನವಾದುದು. ಉಚ್ಚೈಃಶ್ರವಸ್ಸು ಕ್ಷೀರಸಮುದ್ರದಲ್ಲಿ ಜನಿಸಿತೆಂದು ಪುರಾಣಗಳಲ್ಲಿ ಇದೆ.

**ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ**

**ಪತಿರೇಕ ಆಸೀತ್ । ಸ ದಾಧಾರ ಪೃಥಿವೀಂ**

**ದ್ಯಾಮುತೇಮಾಂ ಕಸ್ಮೈ ದೇವಾಯ ಹವಿಷಾ ವಿಧೇಮ ॥**

---

ಹಿರಣ್ಯಗರ್ಭ ಇತಿ ಹಿರಣ್ಯ-ಗರ್ಭಃ । ಸಮಿತಿ । ಅವರ್ತತ । ಅಗ್ರೇ । ಭೂತಸ್ಯ । ಜಾತಃ । ಪತಿಃ । ಏಕಃ । ಆಸೀತ್ ॥ ಸಃ । ದಾಧಾರ । ಪೃಥಿವೀಮ್ । ದ್ಯಾಮ್ । ಉತ । ಇಮಾಮ್ । ಕಸ್ಮೈ । ದೇವಾಯ । ಹವಿಷಾ । ವಿಧೇಮ ॥

---

| ಮಂತ್ರ | ವಿನಿಯೋಗ |
|---|---|
| ಹಿರಣ್ಯಗರ್ಭಃ...ವಿಧೇಮ ॥ | ಹಿರಣ್ಯದಲ್ಲಿ ಹಿರಣ್ಯಪುರುಷನನ್ನು ಪೂರ್ವ ಶಿರಸ್ಕನಾಗಿ ಮೇಲ್ಮುಖವಾಗಿ ಇಡಲು. |

---

🔔 **ಹಿರಣ್ಯಗರ್ಭಃ**=[ಬ್ರಹ್ಮಾಂಡರೂಪವಾದ] ಹಿರಣ್ಯದಲ್ಲಿ ಗರ್ಭರೂಪನಾದ ಪ್ರಜಾಪತಿಯು; **ಭೂತಸ್ಯ**=ಹುಟ್ಟಿದ ಪ್ರಾಣಿಸಮೂಹಕ್ಕೆ; **ಅಗ್ರೇ**=ಮೊದಲು; **ಸಮವರ್ತತ**=ಶರೀರಧಾರಿಯಾಗಿ ಇದ್ದನು; **ಸಃ ಜಾತಃ**=ಹುಟ್ಟಿದವನಾದ ಅವನು; **ಏಕಃ ಪತಿಃ**=[ವಿಶ್ವಕ್ಕೆ] ಒಬ್ಬನೇ ಒಡೆಯನೂ; **ಆಸೀತ್**=ಆಗಿದ್ದನು; **ಪೃಥಿವೀಮ್**=ವಿಸ್ತೀರ್ಣವಾದ; **ದ್ಯಾಮ್**=ದ್ಯುಲೋಕವನ್ನೂ; **ಉತ**=ಮತ್ತು; **ಇಮಾಮ್**=ಈ ಭೂಮಿಯನ್ನೂ; **ದಾಧಾರ**=ಧರಿಸಿರುವನು; **ಕಸ್ಮೈ ದೇವಾಯ**=ಅನಿರ್ವಾಚ್ಯ ಮಹಿಮೆಯವನಾದ ಆ ಪ್ರಜಾಪತಿದೇವನಿಗೆ; **ಹವಿಷಾ ವಿಧೇಮ**=ಹವಿಸ್ಸಿನಿಂದ (ಹವಿಸ್ಸನ್ನು ಅರ್ಪಿಸಿ) ಪರಿಚರ್ಯೆ ಮಾಡೋಣ.

---

ಜನಿಸಿದಾಗ ನಾನು ಅಗ್ನಿಸಾಧನನೆಂದು ಸಂತೋಷದಿಂದ ಹೇಷಾರವವನ್ನು ಮಾಡಿದೆ. ಲೋಕದಲ್ಲಿ ಗಿಡುಗ ಹಕ್ಕಿಯ ರೆಕ್ಕೆಗಳನ್ನು ವೇಗವಾಗಿ ಹಾರಾಡುವುದಕ್ಕಾಗಿ ಹೊಗಳುತ್ತಾರೆ. ಜಿಂಕೆಯ ಪಾದಗಳನ್ನು ವೇಗವಾಗಿ ಓಡುವುದಕ್ಕಾಗಿ ಪ್ರಶಂಸಿಸುತ್ತಾರೆ.

ದ್ರಪ್ಸಶ್ಚಸ್ಕಂದ ಪೃಥಿವೀಮನು[..ಮನು(೩೪)]ದ್ಯಾಮಿಮಂ ಚ ಯೋನಿಮನು ಯಶ್ಚ ಪೂರ್ವಃ । ತೃತೀಯಂ ಯೋನಿಮನು ಸಂಚರಂತಂ ದ್ರಪ್ಸಂ ಜುಹೋಮ್ಯನು ಸಪ್ತ ಹೋತ್ರಾಃ ॥

---

ದ್ರಪ್ಸಃ । ಚಸ್ಕಂದ । ಪೃಥಿವೀಮ್ । ಅನ್ವಿತಿ ।(೩೪)। ದ್ಯಾಮ್ । ಇಮಮ್ । ಚ । ಯೋನಿಮ್ । ಅನ್ವಿತಿ । ಯಃ । ಚ । ಪೂರ್ವಃ ॥ ತೃತೀಯಮ್ । ಯೋನಿಮ್ । ಅನ್ವಿತಿ । ಸಂಚರಂತಮಿತಿ ಸಮ್-ಚರಂತಮ್ । ದ್ರಪ್ಸಮ್ । ಜುಹೋಮಿ । ಅನ್ವಿತಿ । ಸಪ್ತ । ಹೋತ್ರಾಃ ॥

---

| ಮಂತ್ರ | ವಿನಿಯೋಗ |
|---|---|
| ದ್ರಪ್ಸಃ...ಹೋತ್ರಾಃ ॥ | ಹಿರಣ್ಮಯಪುರುಷನ ಅಭಿಮರ್ಶನಕ್ಕಾಗಿ |

---

▲ ದ್ರಪ್ಸಃ=ಕುಟ್ಟುವಾಗ ಹಾರಿ ಬಿದ್ದ ಹಿರಣ್ಮಯಪುರುಷನ ಚೂರು; ಪೃಥಿವೀಮ್ ಅನು=ಭೂಮಿಯಲ್ಲಿ; ಚಸ್ಕಂದ=ಬಿದ್ದಿತು; ದ್ಯಾಮ್=ದ್ಯುಲೋಕವನ್ನೂ; ಇಮಮ್ ಚ ಯೋನಿಮ್=ಈ ಅಂತರಿಕ್ಷಸ್ಥಾನವನ್ನೂ; ಅನು ಚಸ್ಕಂದ=ಅನುಸರಿಸಿ ಬಿದ್ದಿತು. ಯಃ ಚ ಪೂರ್ವಃ=ಮೊದಲನೆಯದಾಗಿ ಭೂಮಿಯಲ್ಲಿ ಬಿದ್ದ ಚೂರೂ [ಹುತವೆಂದು ಭಾವಿಸುತ್ತೇನೆ] ತೃತೀಯಮ್=ಮೂರನೆಯ ದ್ಯುಲೋಕರೂಪವಾದ; ಯೋನಿಮ್ =ಆದಿತ್ಯಸ್ಥಾನವನ್ನೂ; ಅನು ಸಂಚರಂತಮ್=ಅನುಸರಿಸಿ ಸಂಚರಿಸುತ್ತಿರುವ; ದ್ರಪ್ಸಮ್=ಹಿರಣ್ಯಲೇಶವನ್ನು; ಅನು ಸಪ್ತ ಹೋತ್ರಾಃ=ಸಪ್ತ ದಿಕ್ಕುಗಳಲ್ಲಿಯೂ; [ತ್ರಿಲೋಕಸ್ಥಾನದಲ್ಲಿಯೂ] ಜುಹೋಮಿ=ಹುತವಾಯಿತೆಂದು ಭಾವಿಸುತ್ತೇನೆ.

---

ಯಾಗಸಾಧನವಾಗಿರುವುದರಿಂದ ನಿನ್ನ ಜನ್ಮವೂ ಸಾರ್ಥಕವೆಂದು ಹೊಗಳಲ್ಪಟ್ಟಿದೆ.
ಹೇ! ತಾವರೆಯ ಎಲೆಯೇ! ನೀನು ನೀರಿನ ಮೇಲ್ಭಾಗದಲ್ಲಿದ್ದು ವಿಶಾಲವಾದ ತಟಾಕ

**ನಮೋ ಅಸ್ತು ಸರ್ಪೇಭ್ಯೋ ಯೇ ಕೇ ಚ ಪೃಥಿವೀಮನು ।**

**ಯೇ ಅಂತರಿಕ್ಷೇ ಯೇ ದಿವಿ ತೇಭ್ಯಃ ಸರ್ಪೇಭ್ಯೋ ನಮಃ ॥**

---

ನಮಃ । ಅಸ್ತು । ಸರ್ಪೇಭ್ಯಃ । ಯೇ । ಕೇ । ಚ । ಪೃಥಿವೀಮ್ । ಅನು ॥ ಯೇ । ಅಂತರಿಕ್ಷೇ । ಯೇ । ದಿವಿ । ತೇಭ್ಯಃ । ಸರ್ಪೇಭ್ಯಃ । ನಮಃ ॥

---

| ಮಂತ್ರ | ವಿನಿಯೋಗ |
|---|---|
| **ನಮೋ ಅಸ್ತು...ನಮಃ ॥** | ಹಿರಣ್ಯಪುರುಷನ ಅಭಿಮಂತ್ರಣದ ಪ್ರಥಮಮಂತ್ರ. |

---

▲ **ಯೇ ಕೇ ಚ**=ಯಾವ ಕೆಲವು [ಸರ್ಪಗಳು]; **ಪೃಥಿವೀಮ್ ಅನು**=ಭೂಮಿಯನ್ನು ಆಶ್ರಯಿಸಿ [ಇವೆಯೋ][ಅಂತಹ] **ಸರ್ಪೇಭ್ಯಃ ನಮಃ ಅಸ್ತು**=ಸರ್ಪಗಳಿಗೆ ನಮಸ್ಕಾರ ವಿರಲಿ; **ಯೇ ಅಂತರಿಕ್ಷೇ**=ಯಾವ ಕೆಲವು ಸರ್ಪಗಳು ಅಂತರಿಕ್ಷದಲ್ಲಿ ಇವೆಯೋ; **ಯೇ ದಿವಿ**=ಯಾವ ಕೆಲವು ಸರ್ಪಗಳು ದ್ಯುಲೋಕದಲ್ಲಿ ವಾಸವಾಗಿವೆಯೋ; **ತೇಭ್ಯಃ ಸರ್ಪೇಭ್ಯಃ**=ಆ ಎಲ್ಲ ಸರ್ಪಗಳಿಗೂ; **ನಮಃ**=ನಮಸ್ಕಾರವಾಗಲಿ.

---

ದಲ್ಲಿ ಪ್ರೀತಿಕರನಾಗಿರುವೆ. ನೀನು ಅಗ್ನಿನಿಷ್ಪಾದಕನು. ಪುಷ್ಟಿಯನ್ನುಂಟುಮಾಡುವೆ. ನೀನು ಅಂತರಿಕ್ಷಕ್ಕಿಂತಲೂ ಹೆಚ್ಚಿನ ಪರಿಮಾಣದಿಂದ ಸುತ್ತಲೂ ಹರಡಿಕೋ. ಇದು ಪುಷ್ಕರಪರ್ಣದ ಬಗೆಬಗೆಯ ಸ್ತುತಿ.

ಈ ಹಿರಣ್ಯವು ಮೊದಲು ಹುಟ್ಟಿದೆ. ಇದು ಸೂರ್ಯನಂತೆ ಇದೆ. ಸೂರ್ಯನು ಪೂರ್ವ ದಲ್ಲಿ ಹುಟ್ಟಿ ಎಲ್ಲೆಡೆಗೂ ತನ್ನ ಕಿರಣಗಳನ್ನು ಹರಡುತ್ತಾನೆ. ಅವನು ಭೂಮಿಯ ಮೇಲಿರುವ ಸತ್, ಅಸತ್ ಅವುಗಳ ಕಾರಣವಾದ ಪದಾರ್ಥಗಳು–ಇವೆಲ್ಲವನ್ನೂ ಪ್ರಕಾಶಪಡಿಸುತ್ತಾನೆ. ಈ ಹಿರಣ್ಯವು ಸೂರ್ಯನಂತಿದೆ. ಅದನ್ನು ಇಲ್ಲಿ ಇಡುತ್ತೇನೆ.

ಸೃಷ್ಟಿಗೆ ಮೊದಲು ಹಿರಣ್ಯರೂಪವಾದ ಬ್ರಹ್ಮಾಂಡದಲ್ಲಿ ಪ್ರಜಾಪತಿಯೊಬ್ಬನೇ ಇದ್ದನು. ಆತನೊಬ್ಬನೇ ಅನಂತರ ಹುಟ್ಟಿದ ವಿಶ್ವಕ್ಕೆ ಒಡೆಯನೂ ರಕ್ಷಕನೂ ಆಗಿರು ತ್ತಾನೆ. ದ್ಯಾವಾಭೂಮಿಗಳನ್ನು ಧರಿಸಿರುವವನೂ ಅವನೇ. ಅಂತಹ ಮಹಿಮೆಯುಳ್ಳ ಪ್ರಜಾಪತಿಗೆ ಹವಿಸ್ಸನ್ನು ಸಮರ್ಪಿಸಿ, ಆತನ ಆರಾಧನೆಯನ್ನು ಮಾಡೋಣ.

**ಯೇऽದೋ ರೋಚನೇ ದಿವೋ ಯೇ ವಾ ಸೂರ್ಯಸ್ಯ ರಶ್ಮಿಷು । ಯೇಷಾಮಪ್ಸು ಸದಃ ಕೃತಂ ತೇಭ್ಯಃ ಸರ್ಪೇಭ್ಯೋ ನಮಃ ॥**

---

ಯೇ । ಅದಃ । ರೋಚನೇ । ದಿವಃ । ಯೇ । ವಾ । ಸೂರ್ಯಸ್ಯ । ರಶ್ಮಿಷು ॥

ಯೇಷಾಮ್ । ಅಪ್ಸ್ವಿತ್ಯಪ್-ಸು । ಸದಃ । ಕೃತಮ್ । ತೇಭ್ಯಃ । ಸರ್ಪೇಭ್ಯಃ । ನಮಃ ॥

---

| ಮಂತ್ರ | ವಿನಿಯೋಗ |
| --- | --- |
| ಯೇऽದೋ...ನಮಃ ॥ | ಅಭಿಮಂತ್ರಣದ ದ್ವಿತೀಯಮಂತ್ರ. |

---

🔔 **ಯೇ**=ಯಾವ ಸರ್ಪಗಳು; **ದಿವಃ ರೋಚನೇ**=ಅಂತರಿಕ್ಷಭಾಸಕವಾದ; **ಅದಃ**= ಈ ಸೂರ್ಯಮಂಡಲದಲ್ಲಿರುತ್ತವೆಯೋ; **ಯೇ**=ಯಾವ ಸರ್ಪಗಳು; **ಸೂರ್ಯಸ್ಯ ರಶ್ಮಿಷು ವಾ**=ಅದೃಶ್ಯವಾದ ಸೂರ್ಯಕಿರಣಗಳಲ್ಲಿಯಾದರೋ ಇವೆಯೋ; **ಯೇಷಾಮ್**=ಯಾವ ಸರ್ಪಗಳಿಗೆ; **ಅಪ್ಸು**=ನೀರಿನಲ್ಲಿ; **ಸದಃ**=ವಾಸಸ್ಥಾನವು; **ಕೃತಮ್**=ಮಾಡಲ್ಪಟ್ಟಿದೆಯೋ; **ತೇಭ್ಯಃ ಸರ್ಪೇಭ್ಯಃ ನಮಃ**=ಆ ಎಲ್ಲ ಸರ್ಪಗಳಿಗೂ ನಮಸ್ಕಾರವಿರಲಿ.

---

ಹಿರಣ್ಯಪುರುಷನ ನಿರ್ಮಾಣಕ್ಕಾಗಿ ಕುಟ್ಟುವಾಗ ಬಿದ್ದ ಚೂರನ್ನು ಹುತವಾಯಿತೆಂದು ಭಾವಿಸುತ್ತೇನೆ. ಆಹುತಿಯು ಸೂರ್ಯನನ್ನು ಮುಟ್ಟುತ್ತದೆಯೆಂದು ಉಕ್ತವಾಗಿದೆ. **'ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ'** ಎಂಬ ವಚನವಿದೆ. ಇಂತಹ ಭೂಮಿ-ಅಂತರಿಕ್ಷ-ದ್ಯುಲೋಕಗಳೆಂಬ ಮೂರು ಸ್ಥಾನಗಳಲ್ಲಿ ಸಂಚರಿಸುವ ದ್ರಪ್ಸವು ಸಪ್ತದಿಕ್ಕುಗಳಲ್ಲಿಯೂ ಅಥವಾ ಸಪ್ತಹೋತೃಸ್ಥಾನಗಳಲ್ಲಿಯೂ ಹುತವಾಯಿತೆಂದು ಭಾವಿಸುತ್ತೇನೆ.

ಭೂಮಿಯಲ್ಲಿ, ಅಂತರಿಕ್ಷದಲ್ಲಿ ಮತ್ತು ದ್ಯುಲೋಕದಲ್ಲಿ ಇರುವ ಎಲ್ಲ ಸರ್ಪಗಳಿಗೂ ನಮಸ್ಕರಿಸುತ್ತೇನೆ.

ಅಂತರಿಕ್ಷವನ್ನು ಪ್ರಕಾಶಗೊಳಿಸುವ ಸ್ವರ್ಗಲೋಕದಲ್ಲಿ, ಸೂರ್ಯನ ಕಿರಣಗಳಲ್ಲಿ

## ಯಾ ಇಷವೋ ಯಾತುಧಾನಾನಾಂ ಯೇ ವಾ ವನಸ್ಪತೀಗ್ಂರನು । ಯೇ ವಾಽವಟೇಷು ಶೇರತೇ ತೇಭ್ಯಃ ಸರ್ಪೇಭ್ಯೋ ನಮಃ ॥ [೩೫-8]

[ಮಹೋಽನು ಯಾತುಧಾನಾನಾಮೇಕಾದಶ ಚ ॥]

---

ಯಾಃ । ಇಷವಃ । ಯಾತುಧಾನಾನಾಮಿತಿ ಯಾತು-ಧಾನಾನಾಮ್ । ಯೇ । ವಾ । ವನಸ್ಪತೀನ್ । ಅನು ॥ ಯೇ । ವಾ । ಅವಟೇಷು । ಶೇರತೇ । ತೇಭ್ಯಃ । ಸರ್ಪೇಭ್ಯಃ । ನಮಃ ॥ (೩೫) ॥

---

| ಮಂತ್ರ | ವಿನಿಯೋಗ |
|---|---|
| ಯಾ ಇಷವಃ...ನಮಃ ॥ | ಹಿರಣ್ಮಯಪುರುಷನ ಅಭಿಮಂತ್ರಣದ ತೃತೀಯ ಹಾಗೂ ಕೊನೆಯ ಮಂತ್ರ. |

---

▲ ಯಾಃ=ಯಾವುವು; ಯಾತುಧಾನಾನಾಮ್=ರಾಕ್ಷಸರ; ಇಷವಃ= ಬಾಣರೂಪವಾಗಿವೆಯೋ; ಯೇ ವಾ=ಯಾವುವಾದರೋ; ವನಸ್ಪತೀನ್ ಅನು=ಚಂದನವೃಕ್ಷಾದಿಗಳನ್ನು ಆಶ್ರಯಿಸಿ ಇವೆಯೋ; ಯೇ ವಾ=ಯಾವುವಾದರೋ; ಅವಟೇಷು=ಬಿಲಗಳಲ್ಲಿ; ಶೇರತೇ=ಮಲಗಿರುತ್ತವೆಯೋ; ತೇಭ್ಯಃ ಸರ್ಪೇಭ್ಯಃ ನಮಃ=ಆ ಸರ್ಪಗಳೆಲ್ಲಕ್ಕೂ ನನ್ನ ನಮಸ್ಕಾರವು.

---

ಮತ್ತು ನೀರಿನಲ್ಲಿರುವ ಎಲ್ಲ ಸರ್ಪಗಳಿಗೂ ನಾನು ನಮಸ್ಕರಿಸುತ್ತೇನೆ.
*ರಾಕ್ಷಸರ ಬಾಣಗಳಾಗಿರುವ, ಚಂದನಾದಿ ವೃಕ್ಷಗಳಲ್ಲಿರುವ, ಬಿಲಗಳಲ್ಲಿ ಮಲಗಿ, ರುವ ಸರ್ಪಗಳಿಗೆ ನನ್ನ ನಮಸ್ಕಾರಗಳು.

---

* ಇಂದ್ರಜಿತ್ತು ಶ್ರೀರಾಮನನ್ನು ಸೈನ್ಯಸಮೇತನಾಗಿ ಸರ್ಪಾಸ್ತ್ರಗಳಿಂದ ಬಂಧಿಸಿದನೆಂದು ರಾಮಾಯಣದಲ್ಲಿದೆ.

## ವಿನಿಯೋಗಸಂಗ್ರಹ

[1]ಅಭ್ಯಶ್ವಂ ಕ್ರಮಯೇದ್ದರ್ಭಂ [2]ಯದಾವೃತ್ತಿಃ ಪ್ರದಕ್ಷಿಣಮ್ ।
[3]ಅಪಾಂ ದಧ್ಯಾತ್ ಪದ್ಮಪತ್ರಂ [4]ಬ್ರಹ್ಮ ರುಕ್ಮೋಽಪಧಾನಕಮ್ ॥
[5]ಹಿರ ಸ್ವರ್ಣನರಂ ದಧ್ಯಾ[6]ದ್ದ್ರಪ್ಸಸ್ತಸ್ಯಾಭಿಮರ್ಶನಮ್ ।
[7-9]ನಮಸ್ತ್ರಿಭಿರ್ಮಂತ್ರಯೇತ ಮಂತ್ರಾ ಅತ್ರ ನವೇರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-9

ಐ❀ಐಐ❀ಐ

# ॥ ನವಮೋಽನುವಾಕಃ ॥

ಧ್ರುವಾಽಸಿ ಧರುಣಾಽಸ್ತೃತಾ ವಿಶ್ವಕರ್ಮಣಾ ಸುಕೃತಾ ।

---

ಧ್ರುವಾ । ಅಸಿ । ಧರುಣಾ । ಅಸ್ತೃತಾ । ವಿಶ್ವಕರ್ಮಣೇತಿ ವಿಶ್ವ-ಕರ್ಮಣಾ ।

ಸುಕೃತೇತಿ ಸು-ಕೃತಾ ॥

---

ಎಂಟನೆಯ ಅನುವಾಕದಲ್ಲಿ ಪುಷ್ಕರಪರ್ಣವೇ ಮುಂತಾದ ಮೃನ್ಮಯವಲ್ಲದ ಇಷ್ಟಕೆಗಳ ಉಪಧಾನವು ಹೇಳಲ್ಪಟ್ಟಿತು. ಈ ಒಂಬತ್ತನೆಯ ಅನುವಾಕದಲ್ಲಿ *ಸ್ವಯಮಾತೃಣ್ಣವೇ ಮುಂತಾದ ಇಷ್ಟಕೆಗಳ ಉಪಧಾನವು ಹೇಳಲ್ಪಟ್ಟಿದೆ. ಅದರಲ್ಲಿ ಯೂ ಮೊದಲು ಸ್ವಯಮಾತೃಣ್ಣದ ಅಭಿಮರ್ಶನವೂ ಬಳಿಕ ಅಶ್ವಾವ ಘ್ರಾಪಣವೂ, ಇಷ್ಟಕೋಪಧಾನವೂ ಹೇಳಲ್ಪಟ್ಟಿದೆ.

---

| ಮಂತ್ರ | ವಿನಿಯೋಗ |
| --- | --- |
| ಧ್ರುವಾಸಿ...ದೃಂಹ ॥ | ಸ್ವಯಮಾತೃಣ್ಣದ ಅಭಿಮರ್ಶನಕ್ಕಾಗಿ. |

---

🔔 [ಎಲೈ! ಸ್ವಯಮಾತೃಣ್ಣೇಷ್ಟಕೆಯೇ! ನೀನು] **ಧ್ರುವಾ ಅಸಿ**=ಸ್ಥಿರವಾಗಿದ್ದೀಯೆ; **ಧರುಣಾ**=ಭೂರೂಪದಿಂದ ವಿಶ್ವವನ್ನು ಧರಿಸಿರುವವಳು; **ಅಸ್ತೃತಾ**=[ನೀನು] ಯಾರಿಂದಲೂ ಹಿಂಸಿಸಲ್ಪಡದವಳು; **ವಿಶ್ವಕರ್ಮಣಾ**=ಜಗತ್ಕರ್ತನಿಂದ; **ಸುಕೃತಾ**= ಚೆನ್ನಾಗಿ ಮಾಡಲ್ಪಟ್ಟವಳು.

---

* ಸ್ವಯಮಾತೃಣ್ಣವೆಂದರೆ ತಾನಾಗಿಯೇ ರಂಧ್ರವನ್ನು ಹೊಂದಿರುವ ಕಲ್ಲು.

ಮಾ ತ್ವಾ ಸಮುದ್ರ ಉದ್ವಧೀನ್ಮಾ ಸುಪರ್ಣೋಽವ್ಯಥಮಾನಾ ಪೃಥಿವೀಂ ದೃಗ್ಂಹ ॥ ಪ್ರಜಾಪತಿಸ್ತ್ವಾ ಸಾದಯತು ಪೃಥಿವ್ಯಾಃ ಪೃಷ್ಠೇ ವ್ಯಚಸ್ವತೀಂ ಪ್ರಥಸ್ವತೀಂ ಪ್ರಥೋಽಸಿ

---

ಮಾ । ತ್ವಾ । ಸಮುದ್ರಃ । ಉದಿತಿ । ವಧೀತ್ । ಮಾ । ಸುಪರ್ಣ ಇತಿ ಸು-ಪರ್ಣಃ । ಅವ್ಯಥಮಾನಾ । ಪೃಥಿವೀಮ್ । ದೃಗ್ಂಹ ॥ ಪ್ರಜಾಪತಿರಿತಿ ಪ್ರಜಾ-ಪತಿಃ । ತ್ವಾ । ಸಾದಯತು । ಪೃಥಿವ್ಯಾಃ । ಪೃಷ್ಠೇ । ವ್ಯಚಸ್ವತೀಮ್ । ಪ್ರಥಸ್ವತೀಮ್ । ಪ್ರಥಃ । ಅಸಿ ।

---

| ಮಂತ್ರ | ವಿನಿಯೋಗ |
|---|---|
| ಪ್ರಜಾಪತಿಸ್ತ್ವಾ...ಸೀದ ॥ | ಅಶ್ವಾವಘ್ರಾಪಣಾನಂತರ ಸ್ವಯಮಾತೃಣ್ಣೋಪಧಾನಕ್ಕಾಗಿ. |

---

**ಸಮುದ್ರಃ**=ಸಮುದ್ರರಾಜನು; **ತ್ವಾ**=ನಿನ್ನನ್ನು; **ಮಾ ಉದ್ವಧೀತ್**=[ತನ್ನಲ್ಲಿ ಮುಳುಗಿ ಸುವಿಕೆಯಿಂದ] ಹಿಂಸಿಸದಿರಲಿ; **ಸುಪರ್ಣಃ**=ಗರುಡನು; **ತ್ವಾ**=ನಿನ್ನನ್ನು; **ಮಾ ಉದ್ವಧೀತ್**=[ದೂರಕ್ಕೆ ಎತ್ತಿಕೊಂಡು ಹೋಗಿ] ಹಿಂಸಿಸದಿರಲಿ; [ನೀನು] **ಅವ್ಯಥಮಾನಾ**=ಭಯರಹಿತಳಾಗಿ; **ಪೃಥಿವೀಮ್**=ಈ ಭೂಮಿಯನ್ನು; **ದೃಗ್ಂಹ**=ದೃಢವಾಗಿ ಮಾಡು. 🔔 [ಎಲೈ ಸ್ವಯಮಾತೃಣ್ಣೇಷ್ಟಕೆಯೇ!] **ಪ್ರಜಾಪತಿಃ**=ಪ್ರಜಾಪತಿದೇವನು; **ವ್ಯಚಸ್ವತೀಮ್**=ವಿಸ್ತಾರವಾಗಿರುವ; **ಪ್ರಥಸ್ವತೀಮ್**=ದೊಡ್ಡದಾಗಿರುವ; **ತ್ವಾ**=ನಿನ್ನನ್ನು; **ಪೃಥಿವ್ಯಾಃ ಪೃಷ್ಠೇ**=ಈ ಪ್ರದೇಶದ ಭೂಮಿಯ ಮೇಲೆ; **ಸಾದಯತು**=ಇಡಲಿ. [ನೀನು] **ಪ್ರಥಃ ಅಸಿ**=ಈ ಚಿತಿಯ ವಿಸ್ತಾರರೂಪವಾಗಿದ್ದೀಯೆ.

---

**ಎಲೈ! ಸ್ವಯಮಾತೃಣ್ಣೇಷ್ಟಕೆಯೇ! ನೀನು ಸ್ಥಿರಳು. ವಿಶ್ವವನ್ನು ಧರಿಸಿದವಳು. ನೀನು ಚೆನ್ನಾಗಿ ನಿರ್ಮಿತಳು. ನಿನ್ನನ್ನು ಸಮುದ್ರ-ಗರುಡರು ಹಿಂಸಿಸದಿರಲಿ. ನೀನು ಭೂಮಿಯನ್ನು ದೃಢಗೊಳಿಸು.**

ಪೃಥಿವ್ಯಸಿ ಭೂರಸಿ ಭೂಮಿರಸ್ಯದಿತಿರಸಿ ವಿಶ್ವಧಾಯಾ ವಿಶ್ವಸ್ಯ ಭುವನಸ್ಯ ಧರ್ತ್ರೀ ಪೃಥಿವೀಂ ಯಚ್ಛ ಪೃಥಿವೀಂ ದೃಗ್ಂಹ ಪೃಥಿವೀಂ ಮಾ ಹಿಗ್ಂಸೀರ್ವಿಶ್ವಸ್ಮೈ ಪ್ರಾಣಾಯಾ ಪಾನಾಯ ವ್ಯಾನಾಯೋದಾನಾಯ ಪ್ರತಿಷ್ಠಾಯೈ

---

ಪೃಥಿವೀ । ಅಸಿ । ಭೂಃ । ಅಸಿ । ಭೂಮಿಃ । ಅಸಿ । ಅದಿತಿಃ । ಅಸಿ । ವಿಶ್ವಧಾಯಾ ಇತಿ ವಿಶ್ವ-ಧಾಯಾಃ । ವಿಶ್ವಸ್ಯ । ಭುವನಸ್ಯ । ಧರ್ತ್ರೀ । ಪೃಥಿವೀಮ್ । ಯಚ್ಛ । ಪೃಥಿವೀಮ್ । ದೃಗ್ಂಹ । ಪೃಥಿವೀಮ್ । ಮಾ । ಹಿಗ್ಂಸೀಃ । ವಿಶ್ವಸ್ಮೈ । ಪ್ರಾಣಾಯೇತಿ ಪ್ರ-ಅನಾಯ । ಅಪಾನಾಯೇತ್ಯಪ-ಅನಾಯ । ವ್ಯಾನಾಯೇತಿ ವಿ-ಅನಾಯ । ಉದಾನಾಯೇತ್ಯುತ್-ಅನಾಯ । ಪ್ರತಿಷ್ಠಾಯಾ ಇತಿ ಪ್ರತಿ-ಸ್ಥಾಯೈ ।(೩೭)

---

**ಪೃಥಿವೀ ಅಸಿ**=ಪೃಥಿವೀರೂಪವಾಗಿದ್ದೀಯೆ; **ಭೂಃ ಅಸಿ**=ಸುಖವನ್ನು ಉಂಟು ಮಾಡುವವಳಾಗಿರುವೆ; **ಭೂಮಿಃ ಅಸಿ**=ಭೂಮಿದೇವತೆಯಾಗಿರುವೆ; **ಅದಿತಿಃ ಅಸಿ**=ಅಖಂಡಿತಳಾಗಿದ್ದೀಯೆ; **ವಿಶ್ವಧಾಯಾಃ**=ವಿಶ್ವವನ್ನು ಪೋಷಿಸುವವಳು; **ವಿಶ್ವಸ್ಯ**=ಎಲ್ಲ; **ಭುವನಸ್ಯ**=ಲೋಕಗಳನ್ನೂ; **ಧರ್ತ್ರೀ**=ಧರಿಸುವವಳು; [ಅಂತಹ ನೀನು] **ಪೃಥಿವೀಮ್**=ಭೂಮಿಯನ್ನು; **ಯಚ್ಛ**=ನಿಯಂತ್ರಿಸು; **ಪೃಥಿವೀಮ್**=ಭೂಮಿಯನ್ನು; **ದೃಗ್ಂಹ**=ದೃಢವಾಗಿ ಮಾಡು; **ಪೃಥಿವೀಮ್**=ಭೂಮಿಯನ್ನು; **ಮಾ ಹಿಂಸೀಃ**=ಹಿಂಸಿಸಬೇಡ; **ವಿಶ್ವಸ್ಮೈ**=ಎಲ್ಲರಿಗೂ; **ಪ್ರಾಣಾಯ**=ಪ್ರಾಣವಾಯುವೃತ್ತಿಯ; **ಅಪಾನಾಯ**=ಅಪಾನವಾಯುವೃತ್ತಿಯ; **ವ್ಯಾನಾಯ**=ವ್ಯಾನವಾಯುವೃತ್ತಿಯ; **ಉದಾನಾಯ**=ಉದಾನವಾಯುವೃತ್ತಿಯ; [ಸುಸ್ಥಿತಿಗೂ] **ಪ್ರತಿಷ್ಠಾಯೈ**=ಸ್ವಂತ ಮನೆಯಲ್ಲಿ ಸುಖವಾಗಿ ಇರುವುದಕ್ಕೂ;

[..ಷ್ಮಾಯ್ಯೈ(೩೭)] ಚರಿತ್ರಾಯಾಗ್ನಿಸ್ತ್ವಾಽಭಿ ಪಾತು

ಮಹ್ಯಾ ಸ್ವಸ್ತ್ಯಾ ಛರ್ದಿಷಾ ಶಂತಮೇನ ತಯಾ

ದೇವತಯಾಂಗಿರಸ್ವದ್ಧ್ರುವಾ ಸೀದ ॥

---

ಚರಿತ್ರಾಯ । ಅಗ್ನಿಃ । ತ್ವಾ । ಅಭೀತಿ । ಪಾತು । ಮಹ್ಯಾ । ಸ್ವಸ್ತ್ಯಾ । ಛರ್ದಿಷಾ । ಶಂತಮೇನೇತಿ ಶಮ್-ತಮೇನ । ತಯಾ । ದೇವತಯಾ । ಅಂಗಿರಸ್ವತ್ । ಧ್ರುವಾ । ಸೀದ ॥

---

**ಚರಿತ್ರಾಯ**=ಶಾಸ್ತ್ರೀಯಾಚರಣೆಗೂ; **ಅಗ್ನಿಃ**=ಅಗ್ನಿದೇವನು; **ಮಹ್ಯಾ**=ಮಹತ್ತಾದ; **ಸ್ವಸ್ತ್ಯಾ**=ಯೋಗಕ್ಷೇಮಲಾಭದಿಂದ; **ಶಂತಮೇನ**=ಅತ್ಯಂತ ಶುಭಕಾರಿಯಾದ; **ಛರ್ದಿಷಾ**=ಪ್ರಕಾಶದಿಂದಲೂ; **ತ್ವಾ**=ನಿನ್ನನ್ನು; **ಅಭಿಪಾತು**=ರಕ್ಷಿಸಲಿ. **ತಯಾ ದೇವತಯಾ**=ಆ ನಿನ್ನ ಅಭಿಮಾನಿದೇವತೆಯಿಂದ[ಅನುಗೃಹೀತಳಾಗಿ]**ಅಂಗಿರಸ್ವತ್**=ಅಂಗಿರೋಮುನಿಗಳ ಚಯನದಲ್ಲಿ ಹೇಗೋ ಹಾಗೆ; **ಧ್ರುವಾ ಸೀದ**=ಇಲ್ಲಿ ಸ್ಥಿರವಾಗಿರು.

---

ಅಶ್ವದಿಂದ ಆಘ್ರಾಣಿಸಲ್ಪಟ್ಟ ಸ್ವಯಮಾತೃಣ್ಣೇಷ್ಟಕೋಪಧಾನವನ್ನು ಅಧ್ವರ್ಯುವು ವಿದ್ವಾಂಸನಲ್ಲದ ಬ್ರಾಹ್ಮಣನಿಂದೊಡಗೂಡಿ ಅನುಷ್ಠಿಸಬೇಕು. ಇಲ್ಲಿ ಸ್ವಯಮಾತೃಣ್ಣೇಷ್ಟಕೆಯನ್ನು ಸ್ತುತಿಸಲಾಗಿದೆ. ಚಯನದ ಮಧ್ಯದಲ್ಲಿ ಈ ಇಷ್ಟಕೆಯನ್ನು ಇಡಬೇಕು.

ಹೇ! ಸ್ವಯಮಾತೃಣ್ಣೇಷ್ಟಕೆಯೇ! ನಿನ್ನನ್ನು ಪ್ರಜಾಪತಿದೇವನು ಈ ಭೂಮಿಯ ಮೇಲೆ ಇಡಲಿ. ಪೃಥಿವಿಯಲ್ಲಿ ಉತ್ಪನ್ನಳಾದ ನೀನು ಪೃಥಿವೀರೂಪಳಾಗಿರುವೆ. ಮೃನ್ಮಯವಾದ ಪೃಥಿವಿಯ ಅಭಿಮಾನಿಯಾದ ನೀನು ಭೂಮಿದೇವತೆಯಾಗಿರುವೆ. ನೀನು ಅಖಂಡಿತಳು. ವಿಶ್ವಪೋಷಕಳು. ಲೋಕಗಳನ್ನು ಧರಿಸಿದವಳು. ನೀನು ಭೂಮಿಯನ್ನು ನಿಯಂತ್ರಿಸಿ, ದೃಢಗೊಳಿಸು. ಭೂಮಿಯನ್ನು ಹಿಂಸಿಸದಿರು. ಎಲ್ಲ ವಾಯುವೃತ್ತಿಗಳ

ಕಾಂಡಾತ್ಕಾಂಡಾತ್ಪ್ರರೋಹಂತೀ ಪರುಷಃಪರುಷಃ ಪರಿ । ಏವಾ ನೋ ದೂರ್ವೇ ಪ್ರ ತನು ಸಹಸ್ರೇಣ ಶತೇನ ಚ ॥ ಯಾ ಶತೇನ ಪ್ರತನೋಷಿ ಸಹಸ್ರೇಣ ವಿರೋಹಸಿ । ತಸ್ಯಾಸ್ತೇ ದೇವೀಷ್ಟಕೇ

---

ಕಾಂಡಾತ್ಕಾಂಡಾದಿತಿ ಕಾಂಡಾತ್-ಕಾಂಡಾತ್ । ಪ್ರರೋಹಂತೀತಿ ಪ್ರ-ರೋಹಂತೀ । ಪರುಷಃಪರುಷ ಇತಿ ಪರುಷಃ-ಪರುಷಃ । ಪರಿ ॥ ಏವಾ । ನಃ । ದೂರ್ವೇ । ಪ್ರೇತಿ । ತನು । ಸಹಸ್ರೇಣ । ಶತೇನ । ಚ ॥ ಯಾ । ಶತೇನ । ಪ್ರತನೋಷೀತಿ ಪ್ರ-ತನೋಷಿ । ಸಹಸ್ರೇಣ । ವಿರೋಹಸೀತಿ ವಿ-ರೋಹಸಿ ॥ ತಸ್ಯಾಃ । ತೇ । ದೇವಿ । ಇಷ್ಟಕೇ ।

---

| ಮಂತ್ರ | ವಿನಿಯೋಗ |
|---|---|
| **ಕಾಂಡಾತ್ಕಾಂಡಾತ್...ಚ ॥** | ದೂರ್ವೇಷ್ಟಕೋಪಧಾನವನ್ನು ಮಾಡಲು. |
| **ಯಾ ಶತೇನ...ವಯಮ್ ॥** | ದೂರ್ವೇಷ್ಟಕೋಪಧಾನಕ್ಕಾಗಿ. |

---

🔔 **ದೂರ್ವೇ**=ಎಲೈ! ದೂರ್ವೇಷ್ಟಕೆಯೇ! [ನೀನು] **ಕಾಂಡಾತ್ಕಾಂಡಾತ್**=ಹಲವು ಗುತ್ತಿಗಳಿಂದಲೂ; **ಪರುಷಃ ಪರುಷಃ**=ಆಯಾ ಗೆಣ್ಣುಗಳಿಂದಲೂ; **ಪರಿ ಪ್ರರೋಹಂತೀ**=ಎಲ್ಲ ಕಡೆಗಳಿಗೂ ವ್ಯಾಪಿಸಿ ಬೆಳೆಯುತ್ತಿರುವೆ; **ಏವಾ**=ಹೀಗೆ; **ನಃ**= ನಮ್ಮನ್ನು; **ಸಹಸ್ರೇಣ**=ಸಹಸ್ರಸಂಖ್ಯೆಯಿಂದಲೂ; **ಚ**=ಮತ್ತು; **ಶತೇನ**=ನೂರಾರು ಸಂಖ್ಯೆಯಿಂದಲೂ; **ಪ್ರತನು**=ವಿಸ್ತರಿಸು. 🔔 **ದೇವಿ ಇಷ್ಟಕೇ**=ದೇವಿಯಾದ ದೂರ್ವೇಷ್ಟಕೆಯೇ! **ಯಾ**=ಯಾವ ನೀನು; **ಶತೇನ**=ನೂರರಷ್ಟು ಸಂಖ್ಯೆಯಿಂದ; **ಪ್ರತನೋಷಿ**=ವಿಸ್ತಾರವನ್ನು ಹೊಂದುತ್ತೀಯೋ; **ಸಹಸ್ರೇಣ**=ಸಾವಿರದಷ್ಟು ಸಂಖ್ಯೆ ಯಿಂದ; **ವಿರೋಹಸಿ**=ವಿವಿಧವಾಗಿ ಬೆಳೆಯುತ್ತೀಯೋ; **ತಸ್ಯಾಃ ತೇ**=ಅಂತಹ ನಿನಗೆ;

ವಿಧೇಮ ಹವಿಷಾ ವಯಮ್ ॥ ಅಷಾಢಾಽಸಿ ಸಹಮಾನಾ ಸಹಸ್ವಾರಾತೀಃ ಸಹಸ್ವಾರಾತೀಯತಃ ಸಹಸ್ವ ಪೃತನಾಸ್ಸಹಸ್ವ ಪೃತನ್ಯತಃ ।

---

ವಿಧೇಮ । ಹವಿಷಾ । ವಯಮ್ ॥ ಅಷಾಢಾ । ಅಸಿ । ಸಹಮಾನಾ । ಸಹಸ್ವ । ಅರಾತೀಃ । ಸಹಸ್ವ । ಅರಾತೀಯತಃ । ಸಹಸ್ವ । ಪೃತನಾಃ । ಸಹಸ್ವ । ಪೃತನ್ಯತಃ ॥

---

| ಮಂತ್ರ | ವಿನಿಯೋಗ |
|---|---|
| ಅಷಾಢಾಸಿ...ಅರಾತೀಯತಃ ॥ | *ಅಷಾಢೇಷ್ಟಕೋಪಧಾನಕ್ಕಾಗಿ |
| ಸಹಸ್ವ...ಸಾ ಮಾ ಜಿನ್ವ ॥ | ಅಷಾಢೇಷ್ಟಕೋಪಧಾನಕ್ಕಾಗಿ |

---

ವಯಮ್=ನಾವು; ಹವಿಷಾ=ಹವಿಸ್ಸಿನಿಂದ; ವಿಧೇಮ=ಪರಿಚರ್ಯೆಯನ್ನು ಮಾಡುವೆವು; 🔔 [ಎಲೈ! ಇಷ್ಟಕೆಯೇ!] [ನೀನು]ಅಷಾಢಾ ಅಸಿ=ಯಾರಿಂದಲೂ ತಿರಸ್ಕರಿಸಲಾಗದವಳಾಗಿದ್ದೀಯೆ; ಸಹಮಾನಾ=ವಿರೋಧಿಗಳನ್ನು ಸೋಲಿಸುವವಳಾಗಿ ರುವೆ;[ಅಂತಹ ನೀನು] ಅರಾತೀಃ=ಶತ್ರುಗಳನ್ನು; ಸಹಸ್ವ=ಸೋಲಿಸು. ಅರಾತೀಯತಃ =ಮುಂದೆ ಶತ್ರುಗಳಾಗಬೇಕೆಂದಿರುವವರನ್ನೂ; ಸಹಸ್ವ=ಸೋತುಹೋಗುವಂತೆ ಮಾಡು; 🔔 [ಇಷ್ಟಕೆಯೇ!] ಪೃತನಾಃ=ಶತ್ರುಸೇನೆಗಳನ್ನು; ಸಹಸ್ವ=ಪರಿಭವಗೊಳಿಸು; ಪೃತನ್ಯತಃ=ಸೈನ್ಯವನ್ನು ಸಂಘಟಿಸಿ ಸೋಲಿಸಬೇಕೆಂದಿರುವ ವೈರಿಗಳನ್ನೂ; ಸಹಸ್ವ=ಸೋತುಹೋಗುವಂತೆ ಮಾಡು.

---

ಸುಸ್ಥಿತಿಗೂ, ಸುಖವಾಗಿ ಇರುವುದಕ್ಕೂ, ಶಾಸ್ತ್ರೋಕ್ತ ಆಚರಣೆಗೂ, ನಿನ್ನನ್ನು ಅಗ್ನಿಯು ಕಾಯಲಿ. ನೀನು ಅಂಗಿರಸರ ಚಯನದಂತೆ ಇಲ್ಲಿ ಸ್ಥಿರವಾಗಿರು.

ಗರಿಕೆಯು ವ್ಯಾಪಿಸಿ ಬೆಳೆಯುವಷ್ಟು ಬೇರೆ ಯಾವುದೂ ಬೆಳೆಯಲಾರದು. ಗುತ್ತಿಗುತ್ತಿ

---

* ಉಖೆಯನ್ನು ಮಾಡಿದ ಮೇಲೆ ಉಳಿದ ಮಣ್ಣಿನಿಂದ ಅಮಂತ್ರಕವಾಗಿ ನಿರ್ಮಿಸಿರುವ ಇಷ್ಟಕೆ.

ಸಹಸ್ರವೀರ್ಯಾ [..ವೀರ್ಯಾ(೩೭)ಅಸಿ ಸಾ]ಽಸಿ ಸಾ ಮಾ ಜಿನ್ವ ॥ ಮಧು ವಾತಾ ಋತಾಯತೇ ಮಧು ಕ್ಷರಂತಿ ಸಿಂಧವಃ । ಮಾಧ್ವೀರ್ನಃ ಸಂತ್ವೋಷಧೀಃ ॥

---

ಸಹಸ್ರವೀರ್ಯೇತಿ ಸಹಸ್ರ-ವೀರ್ಯಾ ।(೩೭)। ಅಸಿ । ಸಾ । ಮಾ । ಜಿನ್ವ ॥ ಮಧು । ವಾತಾಃ । ಋತಾಯತ ಇತ್ಯೃತ-ಯತೇ । ಮಧು । ಕ್ಷರಂತಿ । ಸಿಂಧವಃ ॥ ಮಾಧ್ವೀಃ । ನಃ । ಸಂತು । ಓಷಧೀಃ ॥

---

| ಮಂತ್ರ | ವಿನಿಯೋಗ |
|---|---|
| ಮಧು ವಾತಾಃ...ಓಷಧೀಃ ॥ | ಜೀವಂತವಾದ ಕೂರ್ಮಕ್ಕೆ ಜೇನಿನಿಂದ ಕೂಡಿರುವ ಮೊಸರಿನಿಂದ ಮಾಡಿಸುವ ಅಭ್ಯಂಜನಕ್ಕಾಗಿ |

---

ಸಹಸ್ರವೀರ್ಯಾ ಅಸಿ=ನೀನು ಸಹಸ್ರಸಂಖ್ಯೆಯ ಸಾಮರ್ಥ್ಯವುಳ್ಳವಳಾಗಿರುವೆ; ಸಾ=ಅಂತಹ ನೀನು; ಮಾ=ನನ್ನನ್ನು; ಜಿನ್ವ=[ಶತ್ರುಜಯದಿಂದ] ಸಂತೋಷಪಡಿಸು. ▲ ಋತಾಯತೇ=ಯಜ್ಞವನ್ನು ಮಾಡುವ ಯಜಮಾನನಿಗೆ; ವಾತಾಃ=ವಾಯುಗಳು; ಮಧು=ಜೇನನ್ನು; ಕ್ಷರಂತಿ=ಸುರಿಸುತ್ತವೆ. ಸಿಂಧವಃ=ಸಮುದ್ರಗಳು; ಮಧು ಕ್ಷರಂತಿ =ಜೇನನ್ನು ಸುರಿಸುತ್ತವೆ/ಸುರಿಸಲಿ; ನಃ=ನಮಗೆ; ಓಷಧೀಃ=ಸಸ್ಯವರ್ಗಗಳು; ಮಾಧ್ವೀಃ =ಮಧುರಸಯುಕ್ತವಾಗಿ; ಸಂತು=ಆಗಲಿ.

---

ಯಿಂದಲೂ ಗೆಣ್ಣು ಗೆಣ್ಣುಗಳಿಂದಲೂ ಹೊಸ ಹೊಸ ಗರಿಕೆಗಳು ಹುಟ್ಟುತ್ತವೆ. ಎಲೈ! ದೂರ್ವಾಭಿಮಾನಿದೇವತೆಯೇ! ಹೀಗೆ ನೀನು ನೂರಾರು-ಸಾವಿರಾರು ಸಂಖ್ಯೆಯಲ್ಲಿ ವೃದ್ಧಿಹೊಂದು. ಎಲ್ಲ ಬಗೆಗಳಿಂದಲೂ ನಾವು ವೃದ್ಧಿಯನ್ನು ಹೊಂದುವಂತೆ ಮಾಡು, ನೀನೂ ಸಹ ವೃದ್ಧಿ ಹೊಂದು.

ಇಲ್ಲಿ ದೂರ್ವೇಷ್ಟಕಾದೇವಿಯನ್ನು ಸ್ತುತಿಸಲಾಗಿದೆ. ವೃದ್ಧಿಯ ವಿಷಯವನ್ನು ಹೇಳುವಾಗ ಒಂದೆಡೆ 'ದೂರ್ವಾವತ್ ಕುಲವೃದ್ಧಿಃ' ಎಂದು ಹೇಳಿರುವುದನ್ನು ಗಮನಿಸಬಹುದು.

**ಮಧು ನಕ್ತಮುತೋಷಸಿ ಮಧುಮತ್ಪಾರ್ಥಿವಗ್ಂ ರಜಃ ।**

**ಮಧು ದ್ಯೌರಸ್ತು ನಃ ಪಿತಾ ॥ ಮಧುಮಾನ್ನೋ**

**ವನಸ್ಪತಿರ್ಮಧುಮಾಗ್ಂ ಅಸ್ತು ಸೂರ್ಯಃ ।**

---

ಮಧು । ನಕ್ತಮ್ । ಉತ । ಉಷಸಿ । ಮಧುಮದಿತಿ ಮಧು–ಮತ್ । ಪಾರ್ಥಿವಮ್ ।
ರಜಃ ॥ ಮಧು । ದ್ಯೌಃ । ಅಸ್ತು । ನಃ । ಪಿತಾ ॥ ಮಧುಮಾನಿತಿ ಮಧು–ಮಾನ್ । ನಃ ।
ವನಸ್ಪತಿಃ । ಮಧುಮಾನಿತಿ ಮಧು–ಮಾನ್ । ಅಸ್ತು । ಸೂರ್ಯಃ ॥

---

| ಮಂತ್ರ | ವಿನಿಯೋಗ |
|---|---|
| **ಮಧು ನಕ್ತಮ್...ಪಿತಾ ॥**<br>**ಮಧುಮಾನ್ನೋ...ನಃ ॥** | ಜೀವಂತವಾದ ಕೂರ್ಮಕ್ಕೆ ಜೇನಿನಿಂದ ಕೂಡಿರುವ ಮೊಸರಿನಿಂದ ಮಾಡಿಸುವ ಅಭ್ಯಂಜನಕ್ಕಾಗಿ |

---

▲ **ನಃ**=ನಮಗೆ; **ನಕ್ತಮ್**=ರಾತ್ರಿಯಲ್ಲಿ; **ಮಧು ಅಸ್ತು**=ಜೇನು ಪ್ರಾಪ್ತವಾಗಲಿ. **ಉತ**=ಮತ್ತು; **ಉಷಸಿ**=ಪ್ರಭಾತಸಮಯದಲ್ಲಿಯೂ; **ಮಧು ಅಸ್ತು**=ಮಧುವು ಒದಗಲಿ; **ಪಾರ್ಥಿವಮ್**=ಭೂಮಿಗೆ ಸಂಬಂಧಿಸಿದ; **ರಜಃ**=ಧೂಳೂ; **ಮಧುಮತ್ ಅಸ್ತು**=ಮಾಧುರ್ಯರಸವುಳ್ಳದ್ದಾಗಲಿ; **ನಃ**=ನಮ್ಮ; **ಪಿತಾ**=ಪಿತೃಸ್ಥಾನೀಯವಾದ; **ದ್ಯೌಃ**=ದ್ಯುಲೋಕವೂ; **ಮಧು**=ಜೇನಿನಂತೆ; **ಅಸ್ತು**=ಆಗಲಿ. ▲ **ನಃ**=ನಮಗಾಗಿ; **ವನಸ್ಪತಿಃ**=ಅಶ್ವತ್ಥಾದಿ ವನಸ್ಪತಿಯೂ; **ಮಧುಮಾನ್**=ಮಾಧುರ್ಯರಸಭರಿತವಾಗಲಿ; **ಸೂರ್ಯಃ**=ಸೂರ್ಯನೂ; **ಮಧುಮಾನ್**=[ಸಂತಾಪರಾಹಿತ್ಯರೂಪವಾದ] ಮಾಧುರ್ಯರಸಯುಕ್ತನಾಗಿ; **ಅಸ್ತು**=ಆಗಲಿ;

---

ಹೇ! ದೂರ್ವೇಷ್ಟಕಾದೇವಿಯೇ! ನೀನು ಅಪರಿಮಿತವಾದ ವೃದ್ಧಿಯನ್ನು ಹೊಂದು. ನಮ್ಮನ್ನೂ ವೃದ್ಧಿಗೊಳಿಸು. ನಿನಗೆ ನಾವು ಹವಿಸ್ಸನ್ನು ಅರ್ಪಿಸುವೆವು.

ಎಲೈ! ಇಷ್ಟಕೆಯೇ! ನೀನು ಯಾರಿಂದಲೂ ತಿರಸ್ಕರಿಸಲಾಗದವಳು. ನೀನು ಶತ್ರು

ಮಾಧ್ವೀರ್ಗಾವೋ ಭವಂತು ನಃ ॥ ಮಹೀ ದ್ಯೌಃ

ಪೃಥಿವೀ ಚ ನ ಇಮಂ ಯಜ್ಞಂ ಮಿಮಿಕ್ಷತಾಮ್ ।

ಪಿಪೃತಾಂ ನೋ ಭರೀಮಭಿಃ ॥

---

ಮಾಧ್ವೀಃ । ಗಾವಃ । ಭವಂತು । ನಃ ॥ ಮಹೀ । ದ್ಯೌಃ । ಪೃಥಿವೀ । ಚ । ನಃ । ಇಮಮ್ । ಯಜ್ಞಮ್ । ಮಿಮಿಕ್ಷತಾಮ್ । ಪಿಪೃತಾಮ್ । ನಃ । ಭರೀಮಭಿರಿತಿ ಭರೀಮ-ಭಿಃ ॥

---

| ಮಂತ್ರ | ವಿನಿಯೋಗ |
|---|---|
| ಮಹೀ ದ್ಯೌಃ...ಭರೀಮಭಿಃ ॥ | ಕೂರ್ಮೋಪಧಾನವನ್ನು ಮಾಡಲು. |

---

ನಃ=ನಮಗಾಗಿ; ಗಾವಃ=ಗೋವುಗಳು; ಮಾಧ್ವೀಃ=ಮಧುರಕ್ಷೀರವುಳ್ಳವುಗಳಾಗಿ; ಭವಂತು=ಆಗಲಿ. 🔔 ಮಹೀ=ಮಹತ್ತಾದ; ದ್ಯೌಃ=ದ್ಯುಲೋಕವೂ; ಪೃಥಿವೀ ಚ=ಮತ್ತು ಭೂಮಿಯೂ; ನಃ=ನಮ್ಮ; ಇಮಮ್=ಈ; ಯಜ್ಞಮ್=ಯಜ್ಞವನ್ನು; ಮಿಮಿಕ್ಷತಾಮ್=ಫಲಗಳನ್ನು ಸುರಿಸುವುದರಿಂದ ತೋಯಿಸಲಿ. ಭರೀಮಭಿಃ= ಭರಿಸುವ/ಪೋಷಿಸುವ ತಮ್ಮ ಸಾಮರ್ಥ್ಯಗಳಿಂದ; ನಃ=ನಮ್ಮನ್ನು; ಪಿಪೃತಾಮ್= ತುಂಬಲಿ.

---

ಗಳನ್ನೂ, ಭಾವಿಶತ್ರುಗಳನ್ನೂ ಅಡಗಿಸು.

ಹೇ! ಇಷ್ಟಕೆಯೇ! ನೀನು ಶತ್ರುಸೈನ್ಯವನ್ನು ಸೋಲಿಸು. ಈಗ ಸೇನೆಯು ಇಲ್ಲದಿದ್ದರೂ ಸೇನೆಯನ್ನು ಸಂಘಟಿಸಿ ನಮ್ಮನ್ನು ಸೋಲಿಸಬಯಸುವವರನ್ನೂ ಸೋಲಿಸಿ, ನನ್ನನ್ನು ಹರ್ಷಿಸುವಂತೆ ಮಾಡು.

ಕೂರ್ಮೋಪಧಾನಕ್ಕಾಗಿ ಜೀವಂತವಾಗಿರುವ ಆಮೆಯನ್ನು ಜೇನಿನಿಂದ ಕೂಡಿರುವ ಮೊಸರಿನಿಂದ ಅಭ್ಯಂಜನ ಮಾಡಿಸಬೇಕು. ಇದಕ್ಕಾಗಿ ಮೂರು ಮಂತ್ರಗಳು ಉಕ್ತ ವಾಗಿವೆ.

**ತದ್ವಿಷ್ಣೋಃ ಪರಮಂ [(೩೮)] ಪದಗ್ಂ ಸದಾ ಪಶ್ಯಂತಿ ಸೂರಯಃ। ದಿವೀವ ಚಕ್ಷುರಾತತಮ್ ॥**

---

ತತ್ । ವಿಷ್ಣೋಃ । ಪರಮಮ್ ।(೩೮)। ಪದಮ್ । ಸದಾ । ಪಶ್ಯಂತಿ । ಸೂರಯಃ ॥ ದಿವಿ । ಇವ । ಚಕ್ಷುಃ । ಆತತಮಿತ್ಯಾ-ತತಮ್ ॥

---

| ಮಂತ್ರ | ವಿನಿಯೋಗ |
|---|---|
| ತದ್ವಿಷ್ಣೋಃ...ಆತತಮ್ ॥ | ಮುಸಲೋಪಧಾನವನ್ನು ಮಾಡಲು |

---

**ಸೂರಯಃ**=ವೇದಾಂತದಲ್ಲಿ ಪಾರಂಗತರಾದ ವಿದ್ವಾಂಸರು; **ದಿವಿ**=ಆಕಾಶದಲ್ಲಿ/ ನಿರಾವರಣಪ್ರದೇಶದಲ್ಲಿ; **ಆತತಮ್**=ವ್ಯಾಪ್ತವಾದ; **ಚಕ್ಷುಃ ಇವ**=ಕಣ್ಣಿನಂತೆ; **ತತ್**=ಆ ಪ್ರಸಿದ್ಧವಾದ; **ವಿಷ್ಣೋಃ**=ವ್ಯಾಪಕವಾದ ಮಹಾವಿಷ್ಣುವಿನ; **ಪರಮಮ್ ಪದಮ್**=ಶ್ರೇಷ್ಠವಾದ ಸ್ಥಾನವನ್ನು; **ಸದಾ**=ಯಾವಾಗಲೂ; **ಪಶ್ಯಂತಿ**=ನೋಡುತ್ತಾರೆ.

---

ವಾಯು, ಸಮುದ್ರ ಇವುಗಳು ಯಜಮಾನನಿಗೆ ಜೇನನ್ನು ಸುರಿಸಲಿ. ಸಸ್ಯವರ್ಗಗಳೂ ಮಧುರರಸಯುಕ್ತವಾಗಿ ಆಗಲಿ.

ನಮಗೆ ರಾತ್ರಿ-ಉಷಃಕಾಲದಲ್ಲಿಯೂ ಮಧುವು ಒದಗಲಿ. ಭೂಮಿಯ ಧೂಳೂ, *ಪಿತೃಸ್ಥಾನೀಯವಾದ ದ್ಯುಲೋಕವೂ ಜೇನಿನಂತಾಗಲಿ.

ನಮಗೆ ವನಸ್ಪತಿಯು ರಸಭರಿತವಾಗಲಿ. ಎಲ್ಲವೂ ಹಿತಕರವಾಗಲಿ. ಸೂರ್ಯನು ಬಿರುಬಿಸಿಲಿನಿಂದ ನಮ್ಮನ್ನು ಸುಡದಿರಲಿ. ಹಸುಗಳು ಮಧುರವಾದ ಹಾಲನ್ನು ಕೊಡಲಿ.

ಸ್ವಯಮಾತೃಣ್ಣೇಷ್ಟಕೆಯ ಪೂರ್ವಭಾಗದಲ್ಲಿ ಜೀವಂತವಾದ ಕೂರ್ಮವನ್ನು ಉಪಧಾನ ಮಾಡಬೇಕು. ಅಲ್ಲಿ ವಿಹಿತವಾದ ಮಂತ್ರದ ತಾತ್ಪರ್ಯವಿದು:-ದ್ಯಾವಾಪೃಥಿವಿಗಳು ನಮಗೆ ಯಜ್ಞಫಲಗಳನ್ನು ಅಧಿಕವಾಗಿ ನೀಡಲಿ. ತಮ್ಮ ಭರಣಶಕ್ತಿಯಿಂದ ನಮ್ಮನ್ನು ಪೋಷಿಸಲಿ.

---

* ದ್ಯೌಃ ಪಿತಾ । ಪೃಥಿವೀ ಮಾತಾ । ಎಂಬ ಶ್ರುತಿವಚನವಿದೆ. [ಬ್ರಾ. ೩. ೭]

ಧ್ರುವಾಽಸಿ ಪೃಥಿವಿ ಸಹಸ್ವ ಪೃತನ್ಯತಃ । ಸ್ಯೂತಾ ದೇವೇಭಿರಮೃತೇನಾಽಗಾಃ ॥ ಯಾಸ್ತೇ ಅಗ್ನೇ ಸೂರ್ಯೇ ರುಚ ಉದ್ಯತೋ ದಿವಮಾತನ್ವಂತಿ ರಶ್ಮಿಭಿಃ ।

---

ಧ್ರುವಾ । ಅಸಿ । ಪೃಥಿವಿ । ಸಹಸ್ವ । ಪೃತನ್ಯತಃ ॥ ಸ್ಯೂತಾ । ದೇವೇಭಿಃ । ಅಮೃತೇನ । ಐತಿ । ಅಗಾಃ ॥ ಯಾಃ । ತೇ । ಅಗ್ನೇ । ಸೂರ್ಯೇ । ರುಚಃ । ಉದ್ಯತ ಇತ್ಯುತ್-ಯತಃ । ದಿವಮ್ । ಆತನ್ವಂತೀತ್ಯಾ-ತನ್ವಂತಿ । ರಶ್ಮಿಭಿರಿತಿ ರಶ್ಮಿ-ಭಿಃ ॥

---

| ಮಂತ್ರ | ವಿನಿಯೋಗ |
| --- | --- |
| ಧ್ರುವಾಸಿ...ಅಗಾಃ ॥ | ಚಯನಮಧ್ಯದಲ್ಲಿ ಉಖೆಯನ್ನು ಇಡಲು. |
| ಯಾಸ್ತೇ...ನಸ್ಕೃಧಿ ॥ | ವಾಮಭೃತೇಷ್ಟಕೋಪಧಾನಕ್ಕಾಗಿ. |

---

🔔 **ಪೃಥಿವಿ**=ಪೃಥಿವಿಯ ಕಾರ್ಯವಾಗಿ ಭೂರೂಪಳಾದ ಉಖೆಯೇ!; **ಧ್ರುವಾ ಅಸಿ**=[ನೀನು] ಸ್ಥಿರಳಾಗಿರುವೆ; **ಪೃತನ್ಯತಃ**=ಯುದ್ಧವನ್ನು ಮಾಡಲು ಇಚ್ಛಿಸುವ ಶತ್ರುಗಳನ್ನು; **ಸಹಸ್ವ**=ಸೋಲುವಂತೆ ಮಾಡು; **ದೇವೇಭಿಃ**=ದೇವತೆಗಳಿಂದ; **ಅಮೃತೇನ**=ಅಮೃತದಂತಿರುವ ಆಜ್ಯದಿಂದ; **ಸ್ಯೂತಾ**=ಪೂರಿತಳಾಗಿ; **ಆ ಅಗಾಃ**= ಬಂದಿರುವೆ. 🔔 **ಅಗ್ನೇ**=ಅಗ್ನಿಯೇ! **ಸೂರ್ಯೇ**=ಸೂರ್ಯಮಂಡಲದಲ್ಲಿ; **ತೇ**=ನಿನ್ನ; **ಯಾಃ**=[ರಾತ್ರಿಯಲ್ಲಿ ಸೂರ್ಯನಿಂದ ಪ್ರಾಪ್ತವಾದ] ಯಾವ; **ರುಚಃ**=ಪ್ರಕಾಶಗಳು ಇವೆಯೋ; **ಉದ್ಯತಃ**=ಉದಯಿಸುವ ಸೂರ್ಯನಲ್ಲಿರುವ; **ತೇ**=ನಿನ್ನ ಆ ಪ್ರಕಾಶ ಗಳು; **ರಶ್ಮಿಭಿಃ**=ರಶ್ಮಿರೂಪಗಳಿಂದ; **ದಿವಮ್**=ಆಕಾಶವನ್ನು; **ಆತನ್ವಂತಿ**= ವ್ಯಾಪಿಸುತ್ತವೆಯೋ;

---

ವೇದಾಂತಪಾರಂಗತರಾದ ವಿದ್ವಾಂಸರು ಸರ್ವತ್ರ ವ್ಯಾಪ್ತವಾಗಿರುವ ವಿಷ್ಣುವಿನ

**ತಾಭಿಃ ಸರ್ವಾಭೀ ರುಚೇ ಜನಾಯ ನಸ್ಕೃಧಿ ॥ ಯಾ ವೋ ದೇವಾಃ ಸೂರ್ಯೇ ರುಚೋ ಗೋಷ್ವಶ್ವೇಷು ಯಾ ರುಚಃ । ಇಂದ್ರಾಗ್ನೀ ತಾಭಿಸ್ಸರ್ವಾಭೀ ರುಚಂ ನೋ ಧತ್ತ ಬೃಹಸ್ಪತೇ ॥**

---

**ತಾಭಿಃ । ಸರ್ವಾಭಿಃ । ರುಚೇ । ಜನಾಯ । ನಃ । ಕೃಧಿ ॥ ಯಾಃ । ವಃ । ದೇವಾಃ । ಸೂರ್ಯೇ । ರುಚಃ । ಗೋಷು । ಅಶ್ವೇಷು । ಯಾಃ । ರುಚಃ ॥ ಇಂದ್ರಾಗ್ನೀ ಇತೀಂದ್ರ-ಅಗ್ನೀ । ತಾಭಿಃ । ಸರ್ವಾಭಿಃ । ರುಚಮ್ । ನಃ । ಧತ್ತ । ಬೃಹಸ್ಪತೇ ॥**

---

| ಮಂತ್ರ | ವಿನಿಯೋಗ |
|---|---|
| **ಯಾ ವೋ...ಬೃಹಸ್ಪತೇ ॥** | ವಾಮಭೃತೇಷ್ಟಕೋಪಧಾನಕ್ಕಾಗಿ. |

---

**ತಾಭಿಃ ಸರ್ವಾಭಿಃ**=ಆ ಎಲ್ಲ ಪ್ರಕಾಶಗಳಿಂದಲೂ; **ನಃ ಜನಾಯ**=ನಮ್ಮ ಯಜಮಾನನಿಗೆ; **ರುಚೇ ಕೃಧಿ**=ಬೆಳಕನ್ನು ಉಂಟು ಮಾಡು. ▲ **ದೇವಾಃ**=ದೇವತೆಗಳೇ! **ವಃ**=ನಿಮ್ಮ; **ಯಾಃ ರುಚಃ**=ಯಾವ ದೀಪ್ತಿಗಳು; **ಸೂರ್ಯೇ**=ಸರ್ವದೇವ ಸ್ವರೂಪನಾದ ಸೂರ್ಯನಲ್ಲಿವೆಯೋ; **ಗೋಷು**=ಧೇನುಗಳಲ್ಲಿ; **ಅಶ್ವೇಷು**=ಕುದುರೆಗಳಲ್ಲಿ; **ಯಾಃ ರುಚಃ**=ಯಾವ ಶಕ್ತಿರೂಪವಾದ ಪ್ರಕಾಶಗಳಿವೆಯೋ; **ಇಂದ್ರಾಗ್ನೀ**=ಇಂದ್ರ ಮತ್ತು ಅಗ್ನಿಗಳೇ! **ಬೃಹಸ್ಪತೇ**=ಹೇ! ಬೃಹಸ್ಪತಿಯೇ! [ನೀವು ಮೂವರೂ] **ತಾಭಿಃ ಸರ್ವಾಭಿಃ**=ಆ ಎಲ್ಲ ಪ್ರಕಾಶಗಳಿಂದಲೂ; **ನಃ**=ನಮಗೆ; **ರುಚಮ್**=ಬೆಳಕನ್ನು; **ಧತ್ತ**=ನೀಡಿರಿ/ಉಂಟುಮಾಡಿರಿ.

---

ಶ್ರೇಷ್ಠವಾದ ಸ್ಥಾನವನ್ನು-ನಿರಾವರಣವಾದ ಆಕಾಶದಲ್ಲಿ ಕಣ್ಣು ತನ್ನ ದೃಷ್ಟಿಯಿಂದ ಹೇಗೆ ವ್ಯಾಪಿಸುವುದೋ ಹಾಗೆ-ನೋಡುತ್ತಾರೆ. ಈ ಮುಸಲೋಪಧಾನದಿಂದ ಸುಪ್ರೀತನಾದ ತ್ರಿವಿಕ್ರಮನಾದ ಮಹಾವಿಷ್ಣುವು ನಮ್ಮನ್ನು ಅನುಗ್ರಹಿಸಲಿ.

ಪೃಥಿವಿಯ ಕಾರ್ಯವಾದುದರಿಂದ ಭೂರೂಪಳಾದ ಉಖೆಯೇ! ನೀನು ಸ್ಥಿರಳಾಗಿದ್ದು,

ವಿರಾ[ವಿರಾಟ್(೩೯)ಜ್ಯೋತಿರ...]ಡ್ಜ್ಯೋತಿರಧಾರಯ

ಥ್ಸಮ್ರಾಡ್ಜ್ಯೋತಿರಧಾರಯಥ್ಸ್ವರಾಡ್ಜ್ಯೋತಿರಧಾರಯತ್ ।

---

ವಿರಾಡಿತಿ ವಿ-ರಾಟ್ ।(೩೯)। ಜ್ಯೋತಿಃ । ಅಧಾರಯತ್ । ಸಮ್ರಾಡಿತಿ ಸಮ್-ರಾಟ್ ।

ಜ್ಯೋತಿಃ । ಅಧಾರಯತ್ । ಸ್ವರಾಡಿತಿ ಸ್ವ-ರಾಟ್ । ಜ್ಯೋತಿಃ । ಅಧಾರಯತ್ ॥

---

| ಮಂತ್ರ | ವಿನಿಯೋಗ |
|---|---|
| ವಿರಾಡ್ಜ್ಯೋತಿರಧಾರಯತ್ ॥ | ರೇತಃಸಿಗಿಷ್ಟಕೋಪಧಾನಕ್ಕಾಗಿ. |
| ಸಮ್ರಾಡ್ಜ್ಯೋತಿರಧಾರಯತ್ ॥ | ರೇತಃಸಿಗಿಷ್ಟಕೋಪಧಾನಕ್ಕಾಗಿ. |
| ಸ್ವರಾಡ್ಜ್ಯೋತಿರಧಾರಯತ್ ॥ | ರೇತಃಸಿಗಿಷ್ಟಕೋಪಧಾನಕ್ಕಾಗಿ. |

---

▲ ವಿರಾಟ್='ವಿರಾಟ್' ಎಂಬ ಪ್ರಥಮ ರೇತಃಸಿಗಿಷ್ಟಕೆಯು; ಜ್ಯೋತಿಃ=[ನಮ್ಮ ಅನುಗ್ರಹಕ್ಕಾಗಿ] ಜ್ಯೋತಿಯನ್ನು; ಅಧಾರಯತ್=ಧರಿಸಿತು. ▲ ಸಮ್ರಾಟ್='ಸಮ್ರಾಟ್' ಎಂಬ ಎರಡನೆಯ ರೇತಃಸಿಗಿಷ್ಟಕೆಯು; ಜ್ಯೋತಿಃ=[ನಮ್ಮ ಅನುಗ್ರಹಕ್ಕಾಗಿ] ಜ್ಯೋತಿಯನ್ನು; ಅಧಾರಯತ್=ಧರಿಸಿತು. ▲ ಸ್ವರಾಟ್='ಸ್ವರಾಟ್' ಎಂಬ ತೃತೀಯ ರೇತಃಸಿಗಿಷ್ಟಕೆಯು; ಜ್ಯೋತಿಃ=[ನಮ್ಮ ಅನುಗ್ರಹಕ್ಕಾಗಿ] ಜ್ಯೋತಿಯನ್ನು; ಅಧಾರಯತ್ =ಧರಿಸಿತು.

---

ದೇವತೆಗಳಿಂದ ಸಲ್ಲುವ *ಆಜ್ಯದಿಂದ ತುಂಬಿಕೊಂಡು ಬಂದಿರುವೆ.

ವಾಮಭೃತೇಷ್ಟಕೆಯನ್ನು ಉಪಧಾನ ಮಾಡುವ ಮೊದಲು ಪ್ರಬಾಹುಗಿಷ್ಟಕೆಯಲ್ಲಿ ಚಿನ್ನದ ತುಣುಕುಗಳನ್ನು ಹಾಕಬೇಕು. ಎರಡು ಮಂತ್ರಗಳಿಂದ ವಾಮಭೃತೇಷ್ಟಕೋಪಧಾನ.

ಅಗ್ನಿಹೋತ್ರಪ್ರಕರಣದಲ್ಲಿ ರಾತ್ರಿಯಲ್ಲಿ ಸೂರ್ಯನು ಅಗ್ನಿಯನ್ನು ಪ್ರವೇಶಿಸುವನು

---

* ಮಂತ್ರದಲ್ಲಿರುವ ಅಮೃತ ಎಂಬ ಶಬ್ದದ ಅರ್ಥ ಆಜ್ಯ.

**ಅಗ್ನೇ ಯುಕ್ಷ್ವಾ ಹಿ ಯೇ ತವಾಶ್ವಾಸೋ ದೇವ ಸಾಧವಃ। ಅರಂ ವಹಂತ್ಯಾಶವಃ ॥ ಯುಕ್ಷ್ವಾ ಹಿ ದೇವಹೂತಮಾಗ್‌ಂ ಅಶ್ವಾಗ್‌ಂ ಅಗ್ನೇ ರಥೀರಿವ।**

---

ಅಗ್ನೇ । ಯುಕ್ಷ್ವ । ಹಿ । ಯೇ । ತವ । ಅಶ್ವಾಸಃ । ದೇವ । ಸಾಧವಃ ॥ ಅರಮ್ । ವಹಂತಿ । ಆಶವಃ ॥ ಯುಕ್ಷ್ವ । ಹಿ । ದೇವಹೂತಮಾನಿತಿ ದೇವ-ಹೂತಮಾನ್ । ಅಶ್ವಾನ್ । ಅಗ್ನೇ । ರಥೀಃ । ಇವ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇ ಯುಕ್ಷ್ವಾ...ಆಶವಃ ॥ | ಉಖ್ಯಾಗ್ನಿಯಲ್ಲಿ ಹೋಮವನ್ನು ಮಾಡಲು. |
| ಯುಕ್ಷ್ವಾ ಹಿ...ಸದಃ ॥ | ಉಖ್ಯಾಗ್ನಿಹೋಮದ ಎರಡನೆಯ ಮಂತ್ರ. |

---

▲ **ಅಗ್ನೇ**=ಅಗ್ನಿಯೇ! **ದೇವ**=ದೇವನೇ! **ಯೇ**=ಯಾವ; **ತವ**=ನಿನ್ನ; **ಅಶ್ವಾಸಃ**=ಕುದುರೆಗಳು; **ಸಾಧವಃ**=ಚೆನ್ನಾಗಿ ಪಳಗಿವೆಯೋ; **ಆಶವಃ**=ಶೀಘ್ರಗಾಮಿಗಳಾಗಿ; **ಅರಮ್**=ಚೆನ್ನಾಗಿ; **ವಹಂತಿ**=[ರಥವನ್ನು] ಎಳೆಯುತ್ತವೆಯೋ; [ಆ ಕುದುರೆಗಳನ್ನು] **ಯುಕ್ಷ್ವ ಹಿ**=ರಥದಲ್ಲಿ ಕಟ್ಟು. ▲ **ಅಗ್ನೇ**=ಅಗ್ನಿಯೇ! **ದೇವಹೂತಮಾನ್**=ದೇವತೆಗಳನ್ನು ಅತಿಶಯವಾಗಿ ಆಹ್ವಾನಿಸುವ; **ಅಶ್ವಾನ್**=ಕುದುರೆಗಳನ್ನು; **ಹಿ**=ಪ್ರಸಿದ್ಧವಾದ [ಈ ಕರ್ಮದಲ್ಲಿ]; **ರಥೀಃ ಇವ**=ರಥಸ್ವಾಮಿಯಂತೆ; **ಯುಕ್ಷ್ವ**=ರಥಕ್ಕೆ ಯೋಜಿಸು.

---

ಎಂಬ ಅರ್ಥವನ್ನು ನೀಡುವ **'ಅಗ್ನಿಂ ವಾವಾಽಽದಿತ್ಯಃ ಸಾಯಂ ಪ್ರವಿಶತಿ'** ಎಂಬ ವಾಕ್ಯವೂ, ಆ ಅಗ್ನಿಯು ಉದಯಿಸುವ ಸೂರ್ಯನನ್ನು ಹೊಂದುತ್ತಾನೆ ಎಂಬ ಅರ್ಥದ **'ಉದ್ಯಂತಂ ವಾವಾದಿತ್ಯಮಗ್ನಿರನು ಸಮಾರೋಹತಿ'** ಎಂಬ ವಾಕ್ಯವೂ ಇದೆ.

ಅಗ್ನಿಯೇ! ಹೀಗೆ ಬೇರೆ ಬೇರೆಯ ಸಮಯಗಳಲ್ಲಿ ಬೇರೆ ಬೇರೆ ರೂಪದ ನಿನ್ನ

ನಿ ಹೋತಾ ಪೂರ್ವ್ಯಸ್ಸದಃ ॥ ದ್ರಪ್ಸಶ್ಚಸ್ಕಂದ ಪೃಥಿವೀಮನು ದ್ಯಾಮಿಮಂ ಚ ಯೋನಿಮನು ಯಶ್ಚ ಪೂರ್ವಃ । ತೃತೀಯಂ ಯೋನಿಮನು ಸಂಚರಂತಂ ದ್ರಪ್ಸಂ ಜುಹೋಮ್ಯನು ಸಪ್ತ [(೪೦)] ಹೋತ್ರಾಃ ॥

---

ನೀತಿ । ಹೋತಾ । ಪೂರ್ವ್ಯಃ । ಸದಃ ॥ ದ್ರಪ್ಸಃ । ಚಸ್ಕಂದ । ಪೃಥಿವೀಮ್ । ಅನ್ವಿತಿ । ದ್ಯಾಮ್ । ಇಮಮ್ । ಚ । ಯೋನಿಮ್ । ಅನ್ವಿತಿ । ಯಃ । ಚ । ಪೂರ್ವಃ ॥ ತೃತೀಯಮ್ । ಯೋನಿಮ್ । ಅನ್ವಿತಿ । ಸಂಚರಂತಮಿತಿ ಸಮ್-ಚರಂತಮ್ । ದ್ರಪ್ಸಮ್ । ಜುಹೋಮಿ । ಅನ್ವಿತಿ । ಸಪ್ತ । (೪೦) । ಹೋತ್ರಾಃ ॥

---

| ಮಂತ್ರ | ವಿನಿಯೋಗ |
| --- | --- |
| ದ್ರಪ್ಸಃ...ಹೋತ್ರಾಃ ॥ | ಪುರುಷಶಿರಸ್ಸಿನ ಮುಖದಲ್ಲಿ ಸುವರ್ಣಶಕಲಗಳನ್ನು ಹಾಕಲು. |

---

**ಪೂರ್ವ್ಯಃ**=ಪುರಾತನನಾದ; **ಹೋತಾ**=ಹೋಮನಿಷ್ಪಾದಕನಾದ [ನೀನು] **ನಿ ಸದಃ**=ಈ ಯಾಗಭೂಮಿಯಲ್ಲಿ ಆಸೀನನಾಗು. 🔔 **ದ್ರಪ್ಸಃ**=ಚಿನ್ನದ ತುಣುಕು; **ಪೃಥಿವೀಮ್ ಅನು**=ಭೂಮಿಯ ಮೇಲೆ; **ಚಸ್ಕಂದ**=ಬಿದ್ದಿತು. [ಆ ಚೂರೂ] **ದ್ಯಾಮ್**=ದ್ಯುಲೋಕವನ್ನೂ; **ಇಮಮ್ ಚ ಯೋನಿಮ್**=ಈ ಅಂತರಿಕ್ಷಸ್ಥಾನವನ್ನೂ; **ಅನು ಚಸ್ಕಂದ**=ಅನುಸರಿಸಿ ಬಿದ್ದಿತು; **ಯಃ ಚ ಪೂರ್ವಃ**=ಮೊದಲು ಭೂಮಿಯ ಮೇಲೆ ಬಿದ್ದ; **ತಮ್ ದ್ರಪ್ಸಮ್**=ಚೂರನ್ನೂ; **ತೃತೀಯಮ್ ಯೋನಿಮ್**=ಮೂರನೆಯದಾದ ದ್ಯುಲೋಕರೂಪವಾದ ಆದಿತ್ಯಸ್ಥಾನದಲ್ಲಿ; **ಅನು ಸಂಚರಂತಮ್**=ಬಿದ್ದಿರುವ; **ದ್ರಪ್ಸಮ್**=ಚೂರನ್ನು; **ಅನು ಸಪ್ತ ಹೋತ್ರಾಃ**=ಉಳಿದ ಹೋಮಯೋಗ್ಯವಾದ ಏಳು ದಿಕ್ಕುಗಳಲ್ಲಿಯೂ; **ಜುಹೋಮಿ**=ಹುತವಾಯಿತೆಂದು ಭಾವಿಸುತ್ತೇನೆ.

# ಅಭೂದಿದಂ ವಿಶ್ವಸ್ಯ ಭುವನಸ್ಯ ವಾಜಿನಮಗ್ನೇರ್ವೈಶ್ವಾನರಸ್ಯ ಚ । ಅಗ್ನಿರ್ಜ್ಯೋತಿಷಾ ಜ್ಯೋತಿಷ್ಮಾನ್ರುಕ್ಮೋ ವರ್ಚಸಾ ವರ್ಚಸ್ವಾನ್ ॥

ಅಭೂತ್ । ಇದಮ್ । ವಿಶ್ವಸ್ಯ । ಭುವನಸ್ಯ । ವಾಜಿನಮ್ । ಅಗ್ನೇಃ । ವೈಶ್ವಾನರಸ್ಯ । ಚ ॥ ಅಗ್ನಿಃ । ಜ್ಯೋತಿಷಾ । ಜ್ಯೋತಿಷ್ಮಾನ್ । ರುಕ್ಮಃ । ವರ್ಚಸಾ । ವರ್ಚಸ್ವಾನ್ ॥

| ಮಂತ್ರ | ವಿನಿಯೋಗ |
|---|---|
| ಅಭೂದಿದಂ...ವರ್ಚಸ್ವಾನ್ ॥ | ಪುರುಷಶಿರಸ್ಸಿನಲ್ಲಿ ಹಿರಣ್ಯಶಕಲವನ್ನು ಹಾಕಲು ವಿಕಲ್ಪಿತವಾದ ಎರಡನೆಯ ಮಂತ್ರ. |

ಇದಮ್=ಈ ಹಿರಣ್ಯವು; ವಿಶ್ವಸ್ಯ ಭುವನಸ್ಯ=ಎಲ್ಲ ಪ್ರಾಣಿಸಮೂಹಕ್ಕೂ; ವಾಜಿನಮ್=ಅನ್ನರೂಪವಾಗಿದೆ; ಚ=ಮತ್ತು; ವೈಶ್ವಾನರಸ್ಯ=ಎಲ್ಲ ಮಾನವರಿಗೂ ಹಿತವಾದ; ಅಗ್ನೇಃ=ವೈಶ್ವಾನರಾಗ್ನಿಗೂ; ವಾಜಿನಮ್ ಅಭೂತ್=ಅನ್ನರೂಪವಾಯಿತು; ಅಗ್ನಿಃ=ಈ ಅಗ್ನಿಯೂ; *ಜ್ಯೋತಿಷಾ=ಹಿರಣ್ಯದ ಜ್ಯೋತಿಸ್ಸಿನಿಂದ; ಜ್ಯೋತಿಷ್ಮಾನ್=ತಾನೂ ಜ್ಯೋತಿಸ್ಸುಳ್ಳವನಾದನು. ರುಕ್ಮಃ=ಪ್ರಕಾಶಮಾನನಾದ ಅಗ್ನಿಯು; *ವರ್ಚಸಾ=ಹಿರಣ್ಯದ ವರ್ಚಸ್ಸಿನಿಂದ; ವರ್ಚಸ್ವಾನ್=ತಾನೂ ವರ್ಚಸ್ಸುಳ್ಳವನಾದನು.

ಕಿರಣಗಳು ಆಕಾಶವನ್ನು ವ್ಯಾಪಿಸುತ್ತವೆ. ಆ ಕಿರಣಗಳಿಂದ ನಮ್ಮ ಯಜಮಾನನಿಗೆ ಬೆಳಕನ್ನು ಕೊಡು.

ದೇವತೆಗಳೇ! ನಿಮ್ಮ ಪ್ರಕಾಶಗಳು ಸೂರ್ಯನಲ್ಲಿ ಇವೆ. ಗೋವುಗಳಲ್ಲಿಯೂ, ಅಶ್ವಗಳಲ್ಲಿಯೂ ನಿಮ್ಮ ದೀಪ್ತಿಯಿದೆ. ಇಂದ್ರಾಗ್ನಿಗಳೂ ಬೃಹಸ್ಪತಿಯೂ ಆ ಎಲ್ಲ ಪ್ರಕಾಶದಿಂದಲೂ ನಮಗೆ ಬೆಳಕನ್ನು ಉಂಟು ಮಾಡಲಿ.

* ಜ್ಯೋತಿಃ=ಹೊರಗಿನ ಪ್ರಕಾಶ; ವರ್ಚಃ=ಶರೀರಕಾಂತಿ.

ಋಚೇ ತ್ವಾ ರುಚೇ ತ್ವಾ ಸಮಿಥ್ಸ್ರವಂತಿ ಸರಿತೋ ನ ಧೇನಾಃ । ಅಂತರ್ ಹೃದಾ ಮನಸಾ ಪೂಯಮಾನಾಃ ॥

ಋಚೇ । ತ್ವಾ । ರುಚೇ । ತ್ವಾ । ಸಮಿತಿ । ಇತ್ । ಸ್ರವಂತಿ । ಸರಿತಃ । ನ । ಧೇನಾಃ ॥ ಅಂತಃ । ಹೃದಾ । ಮನಸಾ । ಪೂಯಮಾನಾಃ ॥

| ಮಂತ್ರ | ವಿನಿಯೋಗ |
| --- | --- |
| ಋಚೇ...ರುಚೇ ತ್ವಾ ॥ | ಪುರುಷಶಿರಸ್ಸಿನ ದಕ್ಷಿಣ-ವಾಮನೇತ್ರಗಳ ಗುಡ್ಡೆಗಳಲ್ಲಿ ಹಿರಣ್ಯಶಕಲಗಳನ್ನು ಹಾಕಲು. |

[ಎಲೈ! ಹಿರಣ್ಯಶಕಲವೇ!]ಋಚೇ=ಸ್ತೋತ್ರರೂಪವಾದ ಋಕ್ಕಿಗಾಗಿ; ತ್ವಾ= ನಿನ್ನನ್ನು; [ಬಲಗಣ್ಣಿನ ಗುಡ್ಡೆಯಲ್ಲಿ] [ಹಾಕುತ್ತೇನೆ]; ತ್ವಾ=ನಿನ್ನನ್ನು; ರುಚೇ= ದೀಪ್ತಿಗಾಗಿ/ಪ್ರಕಾಶಕ್ಕಾಗಿ; [ಎಡಗಣ್ಣಿನ ಗುಡ್ಡೆಯಲ್ಲಿ] [ಹಾಕುತ್ತೇನೆ]

ವಿಶೇಷವಾಗಿ ಪ್ರಕಾಶಿಸುವುದರಿಂದ **'ವಿರಾಟ್'** ಎಂದು ಪ್ರಸಿದ್ಧವಾದ ರೇತಃಸಿಗಿಷ್ಟಕೆಯೂ, ಚೆನ್ನಾಗಿ ಪ್ರಕಾಶಿಸುವುದರಿಂದ **'ಸಮ್ರಾಟ್'** ಎಂಬ ಹೆಸರಿನ ರೇತಃಸಿಗಿಷ್ಟಕೆಯೂ, ತಾನಾಗಿಯೇ ಪ್ರಕಾಶಿಸುವುದರಿಂದ **'ಸ್ವರಾಟ್'** ಎಂಬ ಹೆಸರಿನ ಇಷ್ಟಕೆಯೂ ನಮ್ಮ ಹಿತಕ್ಕಾಗಿ ಜ್ಯೋತಿಯನ್ನು ಧರಿಸಲಿ.

ಹೇ! ಅಗ್ನಿದೇವನೇ! ಚೆನ್ನಾಗಿ ಪಳಗಿದ, ಶೀಘ್ರವಾಗಿ ಓಡುವ, ರಥವನ್ನು ಚೆನ್ನಾಗಿ ಎಳೆದೊಯ್ಯುವ ನಿನ್ನ ಕುದುರೆಗಳನ್ನು ದೇವತೆಗಳನ್ನು ಆಹ್ವಾನಿಸುವುದಕ್ಕಾಗಿ ರಥದಲ್ಲಿ ಕಟ್ಟು.

ದೇವತೆಗಳನ್ನು ಆಹ್ವಾನಿಸುವುದರಲ್ಲಿ ಪಳಗಿರುವ ಕುದುರೆಗಳನ್ನು-ರಥದ ಒಡೆಯನು ನುರಿತ ಕುದುರೆಗಳನ್ನು ರಥಕ್ಕೆ ಹೂಡುವಂತೆ-ರಥಕ್ಕೆ ಹೂಡು. ಸನಾತನಯಾಗ ನಿರ್ವಾಹಕನಾದ ನೀನು ಪ್ರಸಿದ್ಧವಾದ ಈ ಕರ್ಮದಲ್ಲಿ ದೇವವೇದಿಯಲ್ಲಿ ಆಸೀನನಾಗು.

ಚಿನ್ನದ ತುಣುಕು ಭೂಮಿ ಅಂತರಿಕ್ಷ ಹಾಗೂ ದ್ಯುಲೋಕವೆಂಬ ಮೂರು ಸ್ಥಾನದಲ್ಲಿ ಬಿದ್ದಿತು. ಅದನ್ನು ಹೋಮಯೋಗ್ಯವಾದ ಏಳು ದಿಕ್ಕುಗಳಲ್ಲಿಯೂ ಹುತವಾಯಿತೆಂದು ಭಾವಿಸುತ್ತೇನೆ.

**ಘೃತಸ್ಯ ಧಾರಾ ಅಭಿ ಚಾಕಶೀಮಿ । ಹಿರಣ್ಯಯೋ ವೇತಸೋ ಮಧ್ಯ ಆಸಾಮ್ ॥**

**ಘೃತಸ್ಯ । ಧಾರಾಃ । ಅಭೀತಿ । ಚಾಕಶೀಮಿ । ಹಿರಣ್ಯಯಃ । ವೇತಸಃ । ಮಧ್ಯೇ । ಆಸಾಮ್ ॥**

| ಮಂತ್ರ | ವಿನಿಯೋಗ |
| --- | --- |
| ಸಮಿತ್ಸ್ರವಂತಿ...ಆಸಾಮ್ ॥ | *ಶೃತಾತಂಕ್ಯದಧಿಯುಕ್ತವಾದ ಮಧುವಿನಿಂದ ಪುರುಷಶಿರಸ್ಸನ್ನು ತುಂಬಲು. |

**ಧೇನಾಃ**=ಪಾನಯೋಗ್ಯವಾದ ದಧಿಮಧ್ವವಯವಗಳು; **ಸರಿತಃ ನ**=ನದಿಗಳಂತೆ; **ಸಮ್ ಇತ್ ಸ್ರವಂತಿ**=ಚೆನ್ನಾಗಿ ಪ್ರವಹಿಸುತ್ತವೆ; [ಆ ಧಾರೆಗಳು] **ಅಂತಃ ಹೃದಾ**=ಹೃದಯಾಂತರಾಳದಲ್ಲಿ; **ಮನಸಾ**=ಅಂತಃಕರಣದಿಂದ; **ಪೂಯಮಾನಾಃ**=ಶೋಧಿಸಲ್ಪಡುತ್ತವೆ; **ಘೃತಸ್ಯ ಧಾರಾಃ**=ಆಜ್ಯದ ಧಾರೆಗಳಂತೆ [ಯಜ್ಞಾರ್ಹವಾಗುತ್ತವೆ] **ಅಭಿ ಚಾಕಶೀಮಿ**=[ಅವುಗಳನ್ನು] ಪ್ರಕಾಶಗೊಳಿಸುತ್ತೇನೆ. **ಆಸಾಮ್ ಮಧ್ಯೇ**=ಈ ಘೃತಧಾರೆಗಳ ಮಧ್ಯದಲ್ಲಿ; [ಪುರುಷಶಿರಸ್ಸು] **ಹಿರಣ್ಯಯಃ**=ಸುವರ್ಣಮಯಪುರುಷನಂತೆ ತೇಜೋಯುಕ್ತವಾಗಿ; **ವೇತಸಃ**=[ನೀರಿನ ಪ್ರವಾಹದ ಮಧ್ಯದಲ್ಲಿರುವ] ಹಚ್ಚೆಯ ಗಿಡದಂತೆ ಇದೆ.

ಈ ಹಿರಣ್ಯವು ಎಲ್ಲ ಪ್ರಾಣಿಸಮೂಹಕ್ಕೂ ವಿಶ್ವಮಾನವಹಿತನಾದ ವೈಶ್ವಾನರಾಗ್ನಿಗೂ ಅನ್ನರೂಪವಾಗಿದೆ. ಈ ಅಗ್ನಿಯು ಹಿರಣ್ಯಶಕಲಗಳಿಂದ ಜ್ಯೋತಿಸ್ಸನ್ನೂ ವರ್ಚಸ್ಸನ್ನೂ ಪಡೆದಿರುತ್ತಾನೆ. ಇಂತಹ ಹಿರಣ್ಯಶಕಲಗಳನ್ನು ಪುರುಷಶಿರಸ್ಸಿನಲ್ಲಿ ಹಾಕುತ್ತೇನೆ.

ಎಲೈ! ಹಿರಣ್ಯಶಕಲವೇ! ಸ್ತೋತ್ರರೂಪವಾದ ಋಕ್ಕಿಗಾಗಿ ನಿನ್ನನ್ನು ಪುರುಷಶಿರಸ್ಸಿನಲ್ಲಿರುವ ಬಲಗಣ್ಣು ಗುಡ್ಡೆಯಲ್ಲಿಯೂ, ದೀಪ್ತಿಗಾಗಿ ಎಡಗಣ್ಣಿನ ಗುಡ್ಡೆಯಲ್ಲಿಯೂ ಹಾಕುತ್ತೇನೆ.

* ಹಾಲನ್ನು ಕಾಯಿಸಿ ಹೆಪ್ಪು ಹಾಕಿ ಉಂಟಾದ ಮೊಸರು. ಇದು ಪಾನಯೋಗ್ಯ. ಬೆಳ್ಳಿ ಮುಂತಾದವುಗಳಿಂದ ತಾನಾಗಿಯೇ ಗಟ್ಟಿಯಾಗುವುದು ಇನ್ನೊಂದು ಬಗೆ.

ತಸ್ಮಿನ್ಥ್ಸುಪರ್ಣೋ ಮಧುಕೃತ್ಕುಲಾಯೀ ಭಜನ್ನಾಸ್ತೇ ಮಧು ದೇವತಾಭ್ಯಃ । ತಸ್ಯಾಽಽಸತೇ ಹರಯಸ್ಸಪ್ತ ತೀರೇ ಸ್ವಧಾಂ ದುಹಾನಾ ಅಮೃತಸ್ಯ ಧಾರಾಮ್ ॥ ೪೧-9 ॥

[ಪ್ರತಿಷ್ಠಾಯೈ ಸಹಸ್ರವೀರ್ಯಾ ಪರಮಂ ವಿರಾಟ್ಥ್ಸಪ್ತ ತೀರೇ ಚತ್ವಾರಿ ಚ ॥]

---

ತಸ್ಮಿನ್ನ್ । ಸುಪರ್ಣ ಇತಿ ಸು-ಪರ್ಣಃ । ಮಧುಕೃದಿತಿ ಮಧು-ಕೃತ್ । ಕುಲಾಯೀ । ಭಜನ್ನ್ । ಆಸ್ತೇ । ಮಧು । ದೇವತಾಭ್ಯಃ ॥ ತಸ್ಯ । ಆಸತೇ । ಹರಯಃ । ಸಪ್ತ । ತೀರೇ । ಸ್ವಧಾಮಿತಿ ಸ್ವ-ಧಾಮ್ । ದುಹಾನಾಃ । ಅಮೃತಸ್ಯ । ಧಾರಾಮ್ ॥ (೪೧) ॥

---

| ಮಂತ್ರ | ವಿನಿಯೋಗ |
|---|---|
| ತಸ್ಮಿನ್...ಧಾರಾಮ್ ॥ | ಪುರುಷಶಿರಸ್ಸನ್ನು ತೆಗೆದುಕೊಳ್ಳಲು. |

---

🔔 ತಸ್ಮಿನ್=ಆ ವೇತಸವೃಕ್ಷರೂಪವಾದ ಪುರುಷಶಿರಸ್ಸಿನಲ್ಲಿ; ಸುಪರ್ಣಃ=ಒಳ್ಳೆಯ ರೆಕ್ಕೆಗಳುಳ್ಳ; ಕುಲಾಯೀ=ಜೇನುಗೂಡನ್ನು ಕಟ್ಟಿರುವ; ಮಧುಕೃತ್=ಜೇನು ನೊಣವು; ದೇವತಾಭ್ಯಃ=ದೇವತೆಗಳಿಗಾಗಿ; ಮಧು=ಜೇನನ್ನು/ಹವಿಸ್ಸನ್ನು; ಭಜನ್=ಸಂಪಾದಿಸುತ್ತಾ; ಆಸ್ತೇ=ಇದೆ; ತಸ್ಯ=ಆ ಪುರುಷಶಿರಸ್ಸಿನ; ತೀರೇ=ಸಮೀಪದಲ್ಲಿ; ಹರಯಃ=ಮಧುವನ್ನು ತೆಗೆದುಕೊಳ್ಳುವ ಸ್ವಭಾವವುಳ್ಳ; ಸಪ್ತ=ಏಳು ರಂಧ್ರಗಳಲ್ಲಿ ಇರುವ ಪ್ರಾಣರೂಪವಾದ ಜೇನುಹುಳುಗಳು; ಸ್ವಧಾಮ್=ಭೋಗವಸ್ತುರೂಪವಾದ; ಅಮೃತಸ್ಯ=ಮಧುವಿನ; ಧಾರಾಮ್=ಧಾರೆಯನ್ನು; ದುಹಾನಾಃ ಆಸತೇ= ಸುರಿಸುವುವುಗಳಾಗಿವೆ.

---

ಈ ಮಂತ್ರದೊಡನೆ 'ದ್ಯುತೇ ತ್ವಾ, ಭಾಸೇ ತ್ವಾ, ಜ್ಯೋತಿಷೇ ತ್ವಾ' ಎಂಬ ಮೂರು ಶ್ರೌತಸೂತ್ರದ ಮಂತ್ರಗಳಿಂದ ಕಿವಿಗಳಲ್ಲಿ ಮತ್ತು ಮೂಗಿನ ಎರಡು ರಂಧ್ರಗಳಲ್ಲಿಯೂ ಹಿರಣ್ಯಶಕಲಗಳನ್ನು ಹಾಕಬೇಕೆಂದು ಶ್ರೌತಸೂತ್ರದಲ್ಲಿದೆ.

ಪಾನಯೋಗ್ಯವಾದ ದಧಿಮಧ್ವವಯವಗಳು ನದಿಗಳಂತೆ ಇವೆ. ಅವು ಯಜ್ಞಾರ್ಹವಾದ ಆಜ್ಯದ ಧಾರೆಯಂತೆಯೂ ಇವೆ. ಆ ಧಾರೆಗಳ ಮಧ್ಯದಲ್ಲಿ ಪುರುಷಶಿರಸ್ಸು ಸುವರ್ಣಮಯ ಪುರುಷನಂತೆ ತೇಜೋಯುಕ್ತವಾಗಿ ನೀರಿನಲ್ಲಿ ಬೆಳೆಯುವ ಒಂದು ರೀತಿಯ ಮರವಾದ ವೇತಸವೃಕ್ಷದಂತೆ ದಧಿ ಮಧುಗಳ ಮಧ್ಯದಲ್ಲಿದೆ.

ಈ ಮಂತ್ರದ ಅರ್ಥವನ್ನು ಗಮನಿಸಿದಾಗ ಸುಂದರವಾದ ರೂಪಕಾಲಂಕಾರವು ಕಾಣುತ್ತದೆ.

ಪುರುಷಶಿರಸ್ಸಿನಲ್ಲಿ ಹಿರಣ್ಯಶಕಲಗಳನ್ನು ಹಾಕುವುದರಿಂದ ಆ ಮೃತವಾದ ಪುರುಷ ಶಿರಸ್ಸಿನಲ್ಲಿ ಸಪ್ತಪ್ರಾಣಗಳನ್ನು ಸಂಪಾದಿಸಿದಂತಾಯಿತು. ಹೀಗಾಗಿ ಆ ಪುರುಷಶಿರಸ್ಸು ಜೀವಂತವಾದಂತಾಯಿತು. ಜೇನು ನೊಣವು ಜೇನುಗೂಡನ್ನು ಕಟ್ಟಿ ಅಲ್ಲಿ ಜೇನನ್ನು ಸಂಪಾದಿಸಿಕೊಡುವಂತೆ ಇಲ್ಲಿ ಸಪ್ತಛಿದ್ರಗಳಲ್ಲಿರುವ ಸಪ್ತಪ್ರಾಣಗಳೆಂಬ ಜೇನುನೊಣಗಳು ದೇವತೆಗಳಿಗಾಗಿ ಅಮೃತದಂತೆ ಇರುವ ಜೇನಿನ ಧಾರೆಯನ್ನು ಭೋಗರೂಪವಾಗಿ ಸುರಿಸುತ್ತವೆ.

ಹೀಗೆ ಈ ಪುರುಷಶಿರಸ್ಸು ಪ್ರಶಸ್ತವಾಗಿದೆ. ಇದನ್ನು ಉಪಧಾನಕ್ಕಾಗಿ ತೆಗೆದುಕೊಳ್ಳುತ್ತೇನೆ.

---

## ವಿನಿಯೋಗಸಂಗ್ರಹ

1ಧ್ರುವಾಸಿ ಸ್ವಯಮಾತೃಣ್ಣಾಂ ಸ್ಪೃಶೇತ್ 2ಪ್ರೇತಿ ದಧಾತಿ ತಾಮ್ ।

3-4ಕಾಂಡಾದ್ದ್ವೇರ್ವೇಷ್ಟಕಾಂ ದ್ವಾಭ್ಯಾಂ 5-6ಅಷಾಢಾಂ 7-9ಮಧು ವಾ ತ್ರಿಭಿಃ ॥

ಅನಕ್ತಿ ಮಧುಮಿಶ್ರೇಣ ದಧ್ನಾ ಕೂರ್ಮಂ 10ಮಹೀತ್ಯತಃ ।

ಕೂರ್ಮಂ ದಧಾತಿ 11ತದ್ವಿಷ್ಣೋಃ ಮುಸಲಂ ಹಿ 12ಧ್ರುವೇತ್ಯುಖಾಮ್ ॥

13-14ಯಾಸ್ತೇ ವಾಮಭೃತಂ ದ್ವಾಭ್ಯಾಂ 15-17ವಿರಾಡ್ರೇತಸ್ಸಿಚಸ್ತ್ರಿಭಿಃ ।

18-19ಅಗ್ನೇ ದ್ವಾಭ್ಯಾಮುಖಾಹೋಮಃ 20ದ್ರಪ್ಸಃ ಪುರುಷಶೀರ್ಷಕೇ ॥

ಆಸ್ಯೇ ಸ್ವರ್ಣಂ ಕ್ಷಿಪೇತ್ತತ್ರ ಮಂತ್ರೋಽ21ಭೂದಿತಿ ವಾ ಭವೇತ್ ।

22-23ಋಚೇ ರುಚೇ ದ್ವಯಾದಕ್ಷ್ಣೋಃ ಸುವರ್ಣಶಕಲೇ ಕ್ಷಿಪೇತ್ ॥

24ಸಮಿದ್ಧಧ್ನಾ ಚ ಮಧುನಾ ಪೂರಯೇನ್ನರಶೀರ್ಷಕಮ್ ।

25ತಸ್ಮಿಂಸ್ತಚ್ಛಿರ ಆದತ್ತೇ ಪಂಚವಿಂಶತಿರೀರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–25

## ॥ ದಶಮೋಽನುವಾಕಃ ॥

ಆದಿತ್ಯಂ ಗರ್ಭಂ ಪಯಸಾ ಸಮಂಜನ್ತ್ಸಹಸ್ರಸ್ಯ ಪ್ರತಿಮಾಂ

ವಿಶ್ವರೂಪಮ್ । ಪರಿ ವೃಙ್ಧಿ

ಆದಿತ್ಯಮ್ । ಗರ್ಭಮ್ । ಪಯಸಾ । ಸಮಂಜನ್ನಿತಿ ಸಮ್-ಅಂಜನ್ । ಸಹಸ್ರಸ್ಯ । ಪ್ರತಿಮಾಮಿತಿ ಪ್ರತಿ-ಮಾಮ್ । ವಿಶ್ವರೂಪಮಿತಿ ವಿಶ್ವ-ರೂಪಮ್ ॥ ಪರೀತಿ । ವೃಙ್ಧಿ ।

ಒಂಬತ್ತನೆಯ ಅನುವಾಕದಲ್ಲಿ ಸ್ವಯಮಾತೃಣ್ಣೇಷ್ಟಕಾದಿಗಳ ಉಪಧಾನವು ಹೇಳಲ್ಪಟ್ಟಿತು. ಈ ಹತ್ತನೆಯ ಅನುವಾಕದಲ್ಲಿ ಪಶುಶೀರ್ಷಗಳ ಉಪಧಾನವೂ, ಅವುಗಳ ಉಪಸ್ಥಾನವೂ ಹೇಳಲ್ಪಟ್ಟಿದೆ.

| ಮಂತ್ರ | ವಿನಿಯೋಗ |
| --- | --- |
| ಆದಿತ್ಯಂ...ಚೀಯಮಾನಃ ॥ | ಪುರುಷಶೀರ್ಷೋಪಧಾನವನ್ನು ಮಾಡಲು. |

[ಅಗ್ನಿದೇವನೇ] [ನೀನು]**ಚೀಯಮಾನಃ**=ಚಯನ ಮಾಡಲ್ಪಡುವವನಾಗಿ; **ಆದಿತ್ಯಮ್**=ಅದಿತಿದೇವತಾಸಂಬಂಧಿಯಾಗಿರುವ; **ಗರ್ಭಮ್**=ಗರ್ಭದಂತಿರುವ; **ಸಹಸ್ರಸ್ಯ ಪ್ರತಿಮಾಮ್**=ಸಾವಿರ ಪಶುಗಳಿಗೆ ಸಮಾನವಾದ; **ವಿಶ್ವರೂಪಮ್**=ಎಲ್ಲ ರೂಪಗಳುಳ್ಳ; [ಈ ಪುರುಷಶೀರ್ಷವನ್ನು] **ಪಯಸಾ**=ದಧಿ [ಮಧುಗಳಿಂದ]; **ಸಮಂಜನ್**=ತುಂಬುತ್ತಾ; **ಪರಿ ವೃಙ್ಧಿ**=ಸಮೀಪಕ್ಕೆ ಹೋಗದೆ ಬಿಟ್ಟು ಬಿಡು.

ಹರಸಾ ಮಾಽಭಿ ಮೃಕ್ಷಶ್ಶತಾಯುಷಂ ಕೃಣುಹಿ

ಚೀಯಮಾನಃ ॥ ಇಮಂ ಮಾ ಹಿಗ್ಂಸೀರ್ದ್ವಿಪಾದಂ

ಪಶೂನಾಗ್ಂ ಸಹಸ್ರಾಕ್ಷ ಮೇಧ ಆ ಚೀಯಮಾನಃ ।

---

ಹರಸಾ । ಮಾ । ಅಭೀತಿ । ಮೃಕ್ಷಃ । ಶತಾಯುಷಮಿತಿ ಶತ–ಆಯುಷಮ್ । ಕೃಣುಹಿ ।

ಚೀಯಮಾನಃ ॥ ಇಮಮ್ । ಮಾ । ಹಿಗ್ಂಸೀಃ । ದ್ವಿಪಾದಮಿತಿ ದ್ವಿ–ಪಾದಮ್ ।

ಪಶೂನಾಮ್ । ಸಹಸ್ರಾಕ್ಷೇತಿ ಸಹಸ್ರ–ಅಕ್ಷ । ಮೇಧೇ । ಏತಿ । ಚೀಯಮಾನಃ ॥

---

| ಮಂತ್ರ | ವಿನಿಯೋಗ |
|---|---|
| ಇಮಂ ಮಾ...ನಿಷೀದ ॥ | ಪುರುಷಶಿರಸ್ಸಿನ ಉಪಸ್ಥಾನಕ್ಕಾಗಿ. |

---

**ಹರಸಾ**=[ನಿನ್ನ] ತೇಜಸ್ಸಿನಿಂದ/ಜ್ವಾಲೆಯಿಂದ; **ಮಾ ಅಭಿ ಮೃಕ್ಷಃ**=ಸುಡದಿರು. **ಶತಾಯುಷಮ್ ಕೃಣುಹಿ**=[ಈ ಯಜಮಾನನನ್ನು] ಶತಸಂವತ್ಸರಗಳವರೆಗೆ ಬದುಕುವವನನ್ನಾಗಿ ಮಾಡು. 🔔 **ಸಹಸ್ರಾಕ್ಷ**=ಸಾವಿರಾರು ಜ್ವಾಲಾರೂಪವಾದ ಕಣ್ಣುಗಳುಳ್ಳ ಅಗ್ನಿದೇವನೇ! [ನೀನು] **ಮೇಧೇ**=ಯಜ್ಞದಲ್ಲಿ; **ಆ ಚೀಯಮಾನಃ**= ಸುತ್ತಲೂ ಪಶುಶೀರ್ಷಗಳ ಚಯನದಿಂದ ಉಪಚರಿಸಲ್ಪಡುವವನಾಗಿ; **ಪಶೂನಾಮ್** =[ಎರಡು ಕಾಲು ಮತ್ತು ನಾಲ್ಕು ಕಾಲುಗಳುಳ್ಳ] ಪ್ರಾಣಿಗಳ ಮಧ್ಯದಲ್ಲಿ; **ಇಮಮ್ ದ್ವಿಪಾದಮ್**=ಎರಡು ಕಾಲಿನ ಪುರುಷನ ಶಿರಸ್ಸನ್ನು; **ಮಾ ಹಿಂಸೀಃ**=ಸುಡುವುದರಿಂದ ಹಿಂಸಿಸಬೇಡ.

---

ಹೇ! ಅಗ್ನಿಯೇ! ನಿನ್ನ ಚಯನವಾಗುತ್ತಿದೆ. ಪಾರ್ಥಿವವಾದ ಈ ಪುರುಷಶಿರಸ್ಸು ಅದಿತಿದೇವಿಯ ಗರ್ಭದಂತೆ ಇದೆ. ಸಾವಿರಾರು ಪಶುಗಳಿಗೆ ಸಮಾನವಾಗಿದೆ. ವಿವಿಧ ರೂಪವಾಗಿದೆ. ಇದು ದಧಿ–ಮಧುಗಳಿಂದ ತುಂಬಲ್ಪಟ್ಟಿದೆ. ಈ ಪುರುಷಶಿರಸ್ಸನ್ನು ನಿನ್ನ ಜ್ವಾಲೆಯಿಂದ ಸುಡದೆ ಬಿಟ್ಟುಬಿಡು. ಈ ಚಯನಕರ್ತೃವಾದ ಯಜಮಾನನು

ಮಯುಮಾರಣ್ಯಮನು ತೇ ದಿಶಾಮಿ ತೇನ

ಚಿನ್ವಾನಸ್ತನುವೋ ನಿ ಷೀದ ॥ ವಾತಸ್ಯ ಧ್ರಾಜಿಂ

ವರುಣಸ್ಯ ನಾಭಿಮಶ್ವಂ ಜಜ್ಞಾನಗ್ಂ ಸರಿರಸ್ಯ ಮಧ್ಯೇ ।

---

ಮಯುಮ್ । ಆರಣ್ಯಮ್ । ಅನ್ವಿತಿ । ತೇ । ದಿಶಾಮಿ । ತೇನ । ಚಿನ್ವಾನಃ । ತನುವಃ ।

ನೀತಿ । ಸೀದ ॥ ವಾತಸ್ಯ । ಧ್ರಾಜಿಮ್ । ವರುಣಸ್ಯ । ನಾಭಿಮ್ । ಅಶ್ವಮ್ ।

ಜಜ್ಞಾನಮ್ । ಸರಿರಸ್ಯ । ಮಧ್ಯೇ ॥

---

| ಮಂತ್ರ | ವಿನಿಯೋಗ |
|---|---|
| ವಾತಸ್ಯ...ವ್ಯೋಮನ್ ॥ | ಅಶ್ವಶೀರ್ಷೋಪಧಾನವನ್ನು ಮಾಡಲು. |

---

ಆರಣ್ಯಮ್=ಆರಣ್ಯಪಶುವಾದ; ಮಯುಮ್=ಕೃಷ್ಣಮೃಗವನ್ನು; ತೇ=ನಿನಗೆ; ಅನು ದಿಶಾಮಿ=[ಪುರುಷಶಿರವನ್ನು] ಅನುಸರಿಸಿ ಭಕ್ಷ್ಯವಾಗಿ ಕೊಡುತ್ತೇನೆ; ತೇನ=ಆ ಕೃಷ್ಣಮೃಗದಿಂದ; ತನುವಃ=[ನಿನ್ನ] ಜ್ವಾಲಾರೂಪವಾದ ಶರೀರಗಳನ್ನು; ಚಿನ್ವಾನಃ= ಪೋಷಿಸುವವನಾಗಿ; ನಿಷೀದ=ಇಲ್ಲಿ ಆಸೀನನಾಗು. 🔔 ಅಗ್ನೇ=ಅಗ್ನಿದೇವನೇ! ವಾತಸ್ಯ ಧ್ರಾಜಿಮ್=ವಾಯುಗತಿಯುಳ್ಳ; ವರುಣಸ್ಯ=ವರುಣನಿಗೆ; ನಾಭಿಮ್= ನಾಭಿಯಂತೆ ಪ್ರಿಯವಾಗಿರುವ; ಸರಿರಸ್ಯ=ನೀರಿನ [ಸಮುದ್ರದ]; ಮಧ್ಯೇ=ಮಧ್ಯದಲ್ಲಿ; ಜಜ್ಞಾನಮ್=ವಡಬಾರೂಪದಿಂದ ಜನಿಸಿರುವ;

---

ಶತಾಯುಷ್ಮಂತನಾಗುವಂತೆ ಮಾಡು.

ಹೇ! ಅಗ್ನಿಯೇ! ನಿನಗೆ ಜ್ವಾಲಾರೂಪವಾದ ಸಾವಿರಾರು ಕಣ್ಣುಗಳು ಇವೆ. ನೀನು ಚಯನದಿಂದ ಉಪಚರಿಸಲ್ಪಡುತ್ತಿರುವೆ. ನೀನು ಪ್ರಾಣಿಗಳ ಪೈಕಿ ದ್ವಿಪಾದ್ರೂಪನಾದ ಪುರುಷನ ಶಿರಸ್ಸನ್ನು ಸುಡಬೇಡ. ನಿನಗೆ ಆಹಾರರೂಪವಾಗಿ ಆರಣ್ಯಮೃಗವಾದ ಕೃಷ್ಣಮೃಗವನ್ನು ಪುರುಷಶಿರವನ್ನು ಅನುಸರಿಸಿ ಕಲ್ಪಿಸುತ್ತೇನೆ. ನೀನು ಅದರಿಂದ ನಿನ್ನ

ಶಿಶುಂ ನದೀನಾಗ್ಂ ಹರಿಮದ್ರಿಬುದ್ಧಮಗ್ನೇ ಮಾ ಹಿಗ್ಂಸೀಃ

[(೪೨)ಪರಮೇ]ಪರಮೇ ವ್ಯೋಮನ್ನ್॥ ಇಮಂ ಮಾ ಹಿಗ್ಂಸೀ

ರೇಕಶಫಂ ಪಶೂನಾಂ ಕನಿಕ್ರದಂ ವಾಜಿನಂ ವಾಜಿನೇಷು ।

ಗೌರಮಾರಣ್ಯ-

---

ಶಿಶುಮ್ । ನದೀನಾಮ್ । ಹರಿಮ್ । ಅದ್ರಿಬುದ್ಧಮಿತ್ಯದ್ರಿ-ಬುದ್ಧಮ್ । ಅಗ್ನೇ । ಮಾ ।

ಹಿಗ್ಂಸೀಃ ।(೪೨)। ಪರಮೇ । ವ್ಯೋಮನ್ನಿತಿ ವಿ-ಓಮನ್ನ್ ॥ ಇಮಮ್ । ಮಾ ।

ಹಿಗ್ಂಸೀಃ । ಏಕಶಫಮಿತ್ಯೇಕ-ಶಫಮ್ । ಪಶೂನಾಮ್ । ಕನಿಕ್ರದಮ್ । ವಾಜಿನಮ್ ।

ವಾಜಿನೇಷು ॥ ಗೌರಮ್ । ಆರಣ್ಯಮ್ ।

---

| ಮಂತ್ರ | ವಿನಿಯೋಗ |
|---|---|
| ಇಮಂ...ನಿಷೀದ ॥ | ಅಶ್ವಶೀರ್ಷೋಪಸ್ಥಾನವನ್ನು ಮಾಡಲು. |

---

ನದೀನಾಮ್=ನದಿಗಳ; ಶಿಶುಮ್=ಶಿಶುಪ್ರಾಯನಾದ; ಹರಿಮ್=ಸವಾರರನ್ನು ಕೊಂಡೊಯ್ಯುವ; ಅದ್ರಿಬುದ್ಧಮ್=ಸಣ್ಣ ಕಲ್ಲುಗಳಿಂದ ತಿಳಿಯಲ್ಪಡುವ ಮಾರ್ಗವುಳ್ಳ; ಅಶ್ವಮ್=ಕುದುರೆಯನ್ನು [ಅಶ್ವಶಿರಸ್ಸನ್ನು] ಮಾ ಹಿಂಸೀಃ=ಸುಡಬೇಡ; ಪರಮೇ =ರೋಗರಹಿತವಾದ ಪರಮರಕ್ಷಣಾಯುಕ್ತವಾದ; ವ್ಯೋಮನ್=ಸ್ಥಾನದಲ್ಲಿ [ಈ ಅಶ್ವವನ್ನು/ಅಶ್ವಶಿರಸ್ಸನ್ನು ಸ್ಥಾಪಿಸು] ♠ [ಅಗ್ನಿಯೇ!]ಪಶೂನಾಮ್=ನಾಲ್ಕು ಕಾಲಿನ ಪ್ರಾಣಿಗಳಲ್ಲಿ; ಏಕಶಫಮ್=ಒಂದು ಗೊರಸಿನ ಪ್ರಾಣಿಯಾದ; ಕನಿಕ್ರದಮ್= ಜೋರಾಗಿ ಹೇಷಾರವವನ್ನು ಮಾಡುವ; ವಾಜಿನೇಷು=ಶೀಘ್ರವಾಗಿ ಹೋಗುವ ಪ್ರಾಣಿಗಳಲ್ಲಿ; ವಾಜಿನಮ್=ಅತ್ಯಂತ ವೇಗಯುಕ್ತವಾದ; ಇಮಮ್=ಈ ಅಶ್ವವನ್ನು [ಅಶ್ವಶಿರಸ್ಸನ್ನು]; ಮಾ ಹಿಂಸೀಃ=ಸುಡಬೇಡ; ಗೌರಮ್ ಆರಣ್ಯಮ್=ಆರಣ್ಯ ಪಶುವಾದ ಸಿಂಹವನ್ನು;

–ಮನು ತೇ ದಿಶಾಮಿ ತೇನ ಚಿನ್ವಾನಸ್ತನುವೋ ನಿಷೀದ ॥

ಅಜಸ್ರಮಿಂದುಮರುಷಂ ಭುರಣ್ಯುಮಗ್ನಿಮೀಡೇ

ಪೂರ್ವಚಿತ್ತೌ ನಮೋಭಿಃ ।

---

ಅನ್ವಿತಿ । ತೇ । ದಿಶಾಮಿ । ತೇನ । ಚಿನ್ವಾನಃ । ತನುವಃ । ನೀತಿ । ಸೀದ ॥ ಅಜಸ್ರಮ್ । ಇಂದುಮ್ । ಅರುಷಮ್ । ಭುರಣ್ಯುಮ್ । ಅಗ್ನಿಮ್ । ಈಡೇ । ಪೂರ್ವಚಿತ್ತಾವಿತಿ ಪೂರ್ವ–ಚಿತ್ತೌ । ನಮೋಭಿರಿತಿ ನಮಃ–ಭಿಃ ॥

---

| ಮಂತ್ರ | ವಿನಿಯೋಗ |
|---|---|
| ಅಜಸ್ರಂ...ವಿರಾಜಮ್ ॥ | ಋಷಭದ ಶಿರಸ್ಸನ್ನು ಉಪಧಾನ ಮಾಡಲು |

---

ತೇ=ನಿನಗೆ; ಅನು ದಿಶಾಮಿ=[ಆಹಾರವಾಗಿ] ಕೊಡುತ್ತೇನೆ. ತೇನ=ಅದರಿಂದ; ತನುವಃ=[ಜ್ವಾಲಾರೂಪವಾದ] [ನಿನ್ನ] ಶರೀರಗಳನ್ನು; ಚಿನ್ವಾನಃ=ತೃಪ್ತಿಪಡಿಸುವವನಾಗಿ; ನಿಷೀದ=ಇಲ್ಲಿ ಉಪಸ್ಥಿತನಾಗಿರು; ▲ ಪೂರ್ವಚಿತ್ತೌ=ಪುರಾತನರಾದ ಋಷಿಗಳ ಬುದ್ಧಿಯಲ್ಲಿ; [ಪೂಜ್ಯಭಾವದಿಂದ ಇರುವ]; ಅಜಸ್ರಮ್=ನಿರಂತರವಾಗಿ; ಇಂದುಮ್=ಪರಮೈಶ್ವರ್ಯಯುಕ್ತನಾದ; ಅರುಷಮ್=[ಯಜಮಾನನ]ಮರ್ಮಗಳನ್ನು; ಭುರಣ್ಯುಮ್=[ಶತ್ರುಗಳಿಂದ] ರಕ್ಷಿಸಿ ಪೋಷಿಸುವ; ಅಗ್ನಿಮ್=ಅಗ್ನಿಯನ್ನು; ನಮೋಭಿಃ=ನಮಸ್ಕಾರಗಳಿಂದ; ಅಹಮ್=ನಾನು; ಈಡೇ=ಸ್ತುತಿಸುವೆನು.

---

ಜ್ವಾಲಾರೂಪವಾದ ಶರೀರಗಳನ್ನು ಪೋಷಿಸು. ತೃಪ್ತನಾಗಿ ಇಲ್ಲಿ ಕುಳಿತುಕೋ.

ಹೇ! ಅಗ್ನಿಯೇ! ನೀನು ಅಶ್ವಶಿರಸ್ಸನ್ನು ದಹಿಸದಿರು. ಅಶ್ವವು ವಾಯುವೇಗವುಳ್ಳದ್ದು. '**ಪ್ರಜಾಪತಿರ್ವರುಣಾಯಾಶ್ವಮ್**' ಎಂಬ ಶ್ರುತಿವಚನದಂತೆ ವರುಣನಿಗೆ ಪ್ರಿಯವಾದುದು. ಆ ವರುಣದೇವನಿಗೆ ನಾಭಿಯಂತೆ ಪ್ರಿಯವಾದುದು. ಅಂತೆಯೇ '**ವಾರುಣೋ ವಾ ಅಶ್ವಃ**' ಎಂಬ ಶ್ರುತಿಯೂ ಇದೆ. ಅಶ್ವವು ಸಮುದ್ರದಲ್ಲಿ ಜನಿಸಿದುದು. '**ಅಪ್ಸು ಯೋನಿರ್ವಾ**

ಸ ಪರ್ವಭಿರ್ ಋತುಶಃ ಕಲ್ಪಮಾನೋ ಗಾಂ ಮಾ ಹಿಗ್ಂಸೀರದಿತಿಂ ವಿರಾಜಮ್ ॥ ಇಮಗ್ಂ ಸಮುದ್ರಗ್ಂ ಶತಧಾರಮುತ್ಸಂ ವ್ಯಚ್ಯಮಾನಂ ಭುವನಸ್ಯ ಮಧ್ಯೇ ।

---

ಸಃ । ಪರ್ವಭಿರಿತಿ ಪರ್ವ-ಭಿಃ । ಋತುಶ ಇತ್ಯೃತು-ಶಃ । ಕಲ್ಪಮಾನಃ । ಗಾಮ್ । ಮಾ । ಹಿಗ್ಂಸೀಃ । ಅದಿತಿಮ್ । ವಿರಾಜಮಿತಿ ವಿ-ರಾಜಮ್ ॥ ಇಮಮ್ । ಸಮುದ್ರಮ್ । ಶತಧಾರಮಿತಿ ಶತ-ಧಾರಮ್ । ಉತ್ಸಮ್ । ವ್ಯಚ್ಯಮಾನಮಿತಿ ವಿ-ಅಚ್ಯಮಾನಮ್ । ಭುವನಸ್ಯ । ಮಧ್ಯೇ ॥

---

| ಮಂತ್ರ | ವಿನಿಯೋಗ |
| --- | --- |
| ಇಮಗ್ಂ...ನಿಷೀದ ॥ | ಋಷಭಶಿರಸ್ಸಿನ ಉಪಸ್ಥಾನಕ್ಕಾಗಿ. |

---

**ಸಃ**=ಆ ಆದಿತ್ಯರೂಪನಾದ ಅಗ್ನಿಯು; **ಪರ್ವಭಿಃ**=ಅಮಾವಾಸ್ಯಾದಿ ತಿಥಿಗಳಿಂದಲೂ; **ಋತುಶಃ**=ಕರ್ಮಕಾಲವಾದ ಆಯಾ ಋತುಗಳಿಂದಲೂ; **ಕಲ್ಪಮಾನಃ**=[ಕರ್ಮಗಳನ್ನು] ನೆರವೇರಿಸುವವನಾಗಿದ್ದಾನೆ. [ಅಂತಹ ಅಗ್ನಿಯೇ!] **ಅದಿತಿಮ್**=ಖಂಡಿಸಬಾರದ; **ವಿರಾಜಮ್**=ವಿಶೇಷವಾಗಿ ಪ್ರಕಾಶಿಸುವ; **ಗಾಮ್**=ಋಷಭಶಿರಸ್ಸನ್ನು; **ಮಾ ಹಿಂಸೀಃ**=ಹಿಂಸಿಸಬೇಡ. 🔔 **ಅಗ್ನೇ**=ಹೇ! ಅಗ್ನಿಯೇ! **ಸಮುದ್ರಮ್**=ಅತ್ಯುನ್ನತವಾಗಿರುವ; **ಶತಧಾರಮ್**=[ತನ್ನಿಂದ ಉತ್ಪನ್ನವಾದ ನೂರಾರು ಧೇನುಗಳಿಂದ] ಕ್ಷೀರಧಾರೆಯನ್ನು ಒದಗಿಸುವ; **ಉತ್ಸಮ್**=ಜಲಪ್ರವಾಹದಂತಿರುವ [ಕ್ಷೀರ-ಘೃತಾದಿಪ್ರವಾಹಗಳಿಗೆ ಕಾರಣವಾದ] **ಭುವನಸ್ಯ**=ಲೋಕದ; **ಮಧ್ಯೇ**=ಮಧ್ಯದಲ್ಲಿ; **ವ್ಯಚ್ಯಮಾನಮ್**=ಸೇವಿಸಲ್ಪಡುವ;

---

ಅಶ್ವಃ' ಎಂಬ ವಚನವಿದೆ. ಸಮುದ್ರವು ನದಿಗಳ ಪತಿಯಾದುದರಿಂದ ಅಶ್ವವು ತಾಯಿಯಂತಿರುವ ನದಿಗಳಿಗೆ ಶಿಶುವಿನಂತೆ ಇದೆ. ಅದು ಸವಾರರನ್ನು ಒಯ್ಯುತ್ತದೆ.

ಘೃತಂ ದುಹಾನಾಮದಿತಿಂ ಜನಾಯಾಗ್ನೇ ಮಾ [(೪೩)
ಹಿಗ್ಂಸೀಃ ಪರಮೇ] ಹಿಗ್ಂಸೀಃ ಪರಮೇ ವ್ಯೋಮನ್ನ್ ।
ಗವಯಮಾರಣ್ಯಮನು ತೇ ದಿಶಾಮಿ ತೇನ
ಚಿನ್ವಾನಸ್ತನುವೋ ನಿಷೀದ ॥

---

ಘೃತಮ್ । ದುಹಾನಾಮ್ । ಅದಿತಿಮ್ । ಜನಾಯ । ಅಗ್ನೇ । ಮಾ ।(೪೩)।
ಹಿಗ್ಂಸೀಃ । ಪರಮೇ । ವ್ಯೋಮನ್ನಿತಿ ವಿ-ಓಮನ್ನ್ ॥ ಗವಯಮ್ । ಆರಣ್ಯಮ್ ।
ಅನ್ವಿತಿ । ತೇ । ದಿಶಾಮಿ । ತೇನ । ಚಿನ್ವಾನಃ । ತನುವಃ । ನೀತಿ । ಸೀದ ॥

---

**ಘೃತಮ್**=[ಧೇನುಗಳ ಮೂಲಕ] ತುಪ್ಪವನ್ನು; ***ದುಹಾನಾಮ್**=ಸುರಿಸುವ; **ಅದಿತಿಮ್**=ಅಖಂಡನೀಯವಾದ; **ಇಮಮ್**=ಈ ವೃಷಭಶಿರಸ್ಸನ್ನು; **ಜನಾಯ**= ಯಜಮಾನನಿಗಾಗಿ; **ಮಾ ಹಿಂಸೀಃ**=ದಹಿಸಬೇಡ; **ಪರಮೇ ವ್ಯೋಮನ್**=ಶ್ರೇಷ್ಠ ವಾದ ರಕ್ಷಣೆಯಲ್ಲಿ [ಸ್ಥಾಪಿಸು]. **ಆರಣ್ಯಮ್ ಗವಯಮ್**=ಆರಣ್ಯಮೃಗವಾದ ಗೋಸದೃಶವಾದ ಗವಯವನ್ನು; **ತೇ**=ನಿನಗೆ; **ಅನು**=ಈ ಋಷಭಶಿರಸ್ಸನ್ನು ಅನುಸ ರಿಸಿ; **ದಿಶಾಮಿ**=ಕೊಡುತ್ತೇನೆ; **ತೇನ ತನುವಃ**=ಅದರಿಂದ ನಿನ್ನ ಜ್ವಾಲಾರೂಪವಾದ ಶರೀರಗಳನ್ನು; **ಚಿನ್ವಾನಃ**=ಪೋಷಿಸುವವನಾಗಿ; **ನಿಷೀದ**=[ಈ ಯಜ್ಞದಲ್ಲಿ] ಉಪ ಸ್ಥಿತನಾಗಿರು.

---

ಅದು ಸಂಚರಿಸಿದ ಮಾರ್ಗದಲ್ಲಿ ಕಲ್ಲುಗಳು ಗೊರಸಿನಿಂದ ಪುಡಿಯಾಗುವುದರಿಂದ ಮಾರ್ಗವು ಅಶ್ವವು ಸಂಚರಿಸಿದುದೆಂದು ತಿಳಿಯುತ್ತದೆ. ಇಂತಹ ಅಶ್ವವನ್ನು ಅಗ್ನಿಯು ದಹಿಸದಿರಲಿ. ಸರ್ವರೋಗರಹಿತವಾದ ಶ್ರೇಷ್ಠಸ್ಥಾನದಲ್ಲಿ ಅಶ್ವವನ್ನು ಇಡಲಿ.

ಹೇ! ಅಗ್ನಿಯೇ! ನೀನು ಈ ಅಶ್ವಶಿರಸ್ಸನ್ನು ನಿನ್ನ ಜ್ವಾಲೆಗಳಿಂದ ಸುಡದಿರು. ಅಶ್ವವು

---

* ಅದಿತಿ ಎಂಬುದಕ್ಕೆ ವಿಶೇಷಣವಾಗಿ ಸ್ತ್ರೀಲಿಂಗವಾಗಿದೆ.

ವರೂತ್ರಿಂ ತ್ವಷ್ಟುರ್ವರುಣಸ್ಯ ನಾಭಿಮವಿಂ ಜಜ್ಞಾನಾಗ್ಂ

ರಜಸಃ ಪರಸ್ಮಾತ್ । ಮಹೀಗ್ಂ ಸಾಹಸ್ರೀಮಸುರಸ್ಯ

ಮಾಯಾಮಗ್ನೇ ಮಾ ಹಿಗ್ಂಸೀಃ ಪರಮೇ ವ್ಯೋಮನ್ ॥

---

ವರೂತ್ರಿಮ್ । ತ್ವಷ್ಟುಃ । ವರುಣಸ್ಯ । ನಾಭಿಮ್ । ಅವಿಮ್ । ಜಜ್ಞಾನಾಮ್ । ರಜಸಃ ।

ಪರಸ್ಮಾತ್ ॥ ಮಹೀಮ್ । ಸಾಹಸ್ರೀಮ್ । ಅಸುರಸ್ಯ । ಮಾಯಾಮ್ । ಅಗ್ನೇ । ಮಾ ।

ಹಿಗ್ಂಸೀಃ । ಪರಮೇ । ವ್ಯೋಮನ್ನಿತಿ ವಿ–ಓಮನ್ ॥

---

| ಮಂತ್ರ | ವಿನಿಯೋಗ |
| --- | --- |
| ವರೂತ್ರಿಂ...ವ್ಯೋಮನ್ ॥ | ಕುರಿಯ ತಲೆಯ ಉಪಧಾನವನ್ನು ಮಾಡಲು. |

---

▲ ಅಗ್ನೇ=ಅಗ್ನಿಯೇ! ತ್ವಷ್ಟುಃ=[ರೂಪನಿಷ್ಪಾದಕನಾದ] ತ್ವಷ್ಟೃದೇವನ [ಅನುಗ್ರಹ ದಿಂದ] ವರೂತ್ರಿಮ್=ಶ್ರೇಷ್ಠವಾದ ರೂಪವುಳ್ಳ; ವರುಣಸ್ಯ=ಅನಿಷ್ಟನಿವಾರಕನಾದ ಅಗ್ನಿಯ; ನಾಭಿಮ್=ನಾಭಿಸ್ಥಾನದಂತಿರುವ; ಪರಸ್ಮಾತ್ ರಜಸಃ=ಉತ್ಕೃಷ್ಟನಾದ ಜಗದ್ರಂಜಕನಾದ ಪ್ರಜಾಪತಿಯಿಂದ; ಜಜ್ಞಾನಾಮ್=ಹುಟ್ಟಿರುವ; ಮಹೀಮ್=ಶ್ರೇಷ್ಠವಾಗಿರುವ; ಸಾಹಸ್ರೀಮ್=ಸಹಸ್ರಮೂಲ್ಯವುಳ್ಳ; *ಅಸುರಸ್ಯ=ಸ್ವರ್ಭಾನು ವೆಂಬ ಅಸುರನ; ಮಾಯಾಮ್=ಮಾಯಾರೂಪವಾಗಿರುವ; ಅವಿಮ್=ಕುರಿಯ ಶಿರಸ್ಸನ್ನು; ಮಾ ಹಿಗ್ಂಸೀಃ=ಸುಡಬೇಡ; ಪರಮೇ ವ್ಯೋಮನ್=ಶ್ರೇಷ್ಠವಾದ ರಕ್ಷಣೆಯಲ್ಲಿ [ಸ್ಥಾಪಿಸು].

---

ನಾಲ್ಕು ಕಾಲಿನ ಪ್ರಾಣಿಗಳಲ್ಲಿ ಒಂದು ಗೊರಸಿನ ಪ್ರಾಣಿ. ಅದು ವೇಗವಾಗಿ ಓಡುವ ಪ್ರಾಣಿ. ನಿನಗೆ ಆರಣ್ಯಪಶುವಾದ ಸಿಂಹವನ್ನು ಆಹಾರವನ್ನಾಗಿ ನೀಡುವೆನು. ನೀನು ನಿನ್ನ ಜ್ವಾಲೆಗಳನ್ನು ತೃಪ್ತಿಪಡಿಸಿ, ಇಲ್ಲಿ ಉಪಸ್ಥಿತನಾಗಿರು.

---

* 'ಸುವರ್ಭಾನುರಾಸುರಃ...' ಎಂದು ಆರಂಭಗೊಳ್ಳುವ ಶ್ರುತಿಯಲ್ಲಿ 'ತಸ್ಯ ಯತ್ಪ್ರಥಮೋಽಪಾಘ್ನನ್ತ್ಸಾ ಕೃಷ್ಣಾವಿರಭವತ್' ಎಂದಿರುವುದರಿಂದ 'ಅಸುರಸ್ಯ ಮಾಯಾಮ್' ಎಂದು ಇಲ್ಲಿ ಶ್ರುತಿಯು ಹೇಳಿದೆ.

ಇಮಾಮೂರ್ಣಾಯುಂ ವರುಣಸ್ಯ ಮಾಯಾಂ ತ್ವಚಂ

ಪಶೂನಾಂ ದ್ವಿಪದಾಂ ಚತುಷ್ಪದಾಮ್ । ತ್ವಷ್ಟುಃ ಪ್ರಜಾನಾಂ

ಪ್ರಥಮಂ ಜನಿತ್ರಮಗ್ನೇ ಮಾ ಹಿಗ್ಂಸೀಃ ಪರಮೇ ವ್ಯೋಮನ್ನ್ ।

---

ಇಮಾಮ್ । ಊರ್ಣಾಯುಮ್ । ವರುಣಸ್ಯ । ಮಾಯಾಮ್ । ತ್ವಚಮ್ । ಪಶೂನಾಮ್ ।

ದ್ವಿಪದಾಮಿತಿ ದ್ವಿ-ಪದಾಮ್ । ಚತುಷ್ಪದಾಮಿತಿ ಚತುಃ-ಪದಾಮ್ ॥ ತ್ವಷ್ಟುಃ ।

ಪ್ರಜಾನಾಮಿತಿ ಪ್ರ-ಜಾನಾಮ್ । ಪ್ರಥಮಮ್ । ಜನಿತ್ರಮ್ । ಅಗ್ನೇ । ಮಾ ।

ಹಿಗ್ಂಸೀಃ । ಪರಮೇ । ವ್ಯೋಮನ್ನಿತಿ ವಿ-ಓಮನ್ನ್ ॥

---

| ಮಂತ್ರ | ವಿನಿಯೋಗ |
|---|---|
| ಇಮಾಮೂರ್ಣಾಯುಂ...ನಿಷೀದ ॥ | ಅವಿ (ಕುರಿ) ಶಿರಸ್ಸಿನ ಉಪಸ್ಥಾನಕ್ಕಾಗಿ. |

---

🔔 **ಅಗ್ನೇ**=ಅಗ್ನಿಯೇ! **ವರುಣಸ್ಯ**=ಅನಿಷ್ಟನಿವಾರಕನಾದ ಅಗ್ನಿಯ; **ಮಾಯಾಮ್**=ಸಂಬಂಧಿಯಾಗಿ ನಿರ್ಮಿತವಾದ; **ದ್ವಿಪದಾಮ್**=ಮಾನವರಿಗೂ; **ಚತುಷ್ಪದಾಮ್**=ನಾಲ್ಕು ಕಾಲುಳ್ಳ; **ಪಶೂನಾಮ್**=ಗವಾದಿಗಳಿಗೂ; **ತ್ವಚಮ್**=ಶೀತನಿವಾರಕವಾದ ಚರ್ಮದಂತಿರುವ; **ಪ್ರಜಾನಾಮ್**=ಪ್ರಜೆಗಳ ಪೈಕಿ; **ತ್ವಷ್ಟುಃ**=ತ್ವಷ್ಟೃಪ್ರಜಾಪತಿಯಿಂದ; **ಪ್ರಥಮಮ್**=ಮುಖ್ಯವಾಗಿ; **ಜನಿತ್ರಮ್**=ಹುಟ್ಟಿರುವ; **ಇಮಾಮ್**=ಈ; **ಊರ್ಣಾಯುಮ್**=ಈ ವೃಷ್ಣಿ ಶಿರಸ್ಸನ್ನು; **ಮಾ ಹಿಗ್ಂಸೀಃ**=ಸುಡಬೇಡ; **ಪರಮೇ ವ್ಯೋಮನ್**=ಉತ್ಕೃಷ್ಟವಾದ ರಕ್ಷಣೆಯಲ್ಲಿ [ಸ್ಥಾಪಿಸು].

---

ಈ ಅಗ್ನಿಯು ಪುರಾತನಮುನಿಗಳಿಂದ ಪೂಜ್ಯನಾದವನು. ಯಾವಾಗಲೂ ಪರಮೈಶ್ವರ್ಯಯುಕ್ತನು. ಯಜಮಾನನನ್ನು ರಕ್ಷಿಸತಕ್ಕವನು. ಇಂತಹ ಅಗ್ನಿಯನ್ನು ನಮಸ್ಕರಿಸಿ, ಸ್ತುತಿಸುತ್ತೇನೆ. ಈ ಅಗ್ನಿಯು ಆದಿತ್ಯರೂಪದಿಂದ ಆಯಾ ಋತುಗಳಲ್ಲಿಯೂ ಪರ್ವಕಾಲ

ಉಷ್ಟ್ರಮಾರಣ್ಯಮನು [(೪೪)ತೇ ದಿಶಾಮಿ] ತೇ ದಿಶಾಮಿ
ತೇನ ಚಿನ್ವಾನಸ್ತನುವೋ ನಿಷೀದ ।

---

ಉಷ್ಟ್ರಮ್ । ಆರಣ್ಯಮ್ । ಅನ್ವಿತಿ । (೪೪) । ತೇ । ದಿಶಾಮಿ । ತೇನ । ಚಿನ್ವಾನಃ ।
ತನುವಃ । ನೀತಿ । ಸೀದ ॥

---

ತೇ=ನಿನಗೆ; ಆರಣ್ಯಮ್ ಉಷ್ಟ್ರಮ್=ಆರಣ್ಯಪಶುವಾದ ಒಂಟೆಯನ್ನು; ಅನು ದಿಶಾಮಿ=ಹಿಂದೆಯೇ ಕೊಡುತ್ತೇನೆ. ತೇನ ತನುವಃ ಚಿನ್ವಾನಃ=ಅದರಿಂದ ಜ್ವಾಲೆಗಳಾದ ಶರೀರಗಳನ್ನು ತೃಪ್ತಿಗೊಳಿಸಿ; ನಿಷೀದ=[ಇಲ್ಲಿ] ಸ್ಥಿರನಾಗಿರು.

---

ದಲ್ಲಿಯೂ ಕರ್ಮಸಾಧಕನಾಗಿದ್ದಾನೆ. ಇಂತಹ ಅಗ್ನಿಯು ಹಿಂಸಿಸಬಾರದ ಪ್ರಕಾಶಮಾನವಾದ ಋಷಭಶಿರಸ್ಸನ್ನು ಸುಡದಿರಲಿ.

ಈ ಮಂತ್ರದಲ್ಲಿ ಋಷಭಶಿರಸ್ಸನ್ನು ಬದುಕಿರುವ ಋಷಭದಂತೆ ವರ್ಣಿಸಲಾಗಿದೆ. ಮುಂದೆ ಬೇರೆ ಬೇರೆ ಪಶುಗಳ ಶಿರಸ್ಸುಗಳನ್ನೂ ಹೀಗೆಯೇ ವರ್ಣಿಸಲಾಗಿದೆ.

ಹೇ! ಅಗ್ನಿಯೇ! ನೂರಾರು ಧೇನುಗಳಿಂದ ಕ್ಷೀರಧಾರೆಯನ್ನು ಒದಗಿಸುವ, ಲೋಕದಲ್ಲಿ ಸೇವಿಸಲ್ಪಡುವ, ಅಖಂಡನೀಯವಾದ ಈ ವೃಷಭಶಿರಸ್ಸನ್ನು ದಹಿಸದಿರು. ನಿನಗೆ ಆರಣ್ಯಮೃಗವಾದ ಗವಯವನ್ನು ನೀಡುವೆನು. ನೀನು ಅದರಿಂದ ತೃಪ್ತನಾಗಿ ನಿನ್ನ ಶರೀರವನ್ನು ಪೋಷಿಸಿಕೊಂಡು ಈ ಯಜ್ಞದಲ್ಲಿರು.

ಹೇ! ಅಗ್ನಿಯೇ! ರೂಪನಿಷ್ಪಾದಕನಾದ ತ್ವಷ್ಟೃದೇವನ ಅನುಗ್ರಹದಿಂದ ಶ್ರೇಷ್ಠವಾದ ರೂಪವುಳ್ಳ, ಅಗ್ನಿಯ ನಾಭಿಯಂತಿರುವ, ಪ್ರಜಾಪತಿಯಿಂದ ಜನಿಸಿರುವ ಸ್ವರ್ಭಾನುವೆಂಬ ಅಸುರನ ಮಾಯೆಯಂತಿರುವ ಕುರಿಯ ಶಿರಸ್ಸನ್ನು ಹಿಂಸಿಸದಿರು. ಅದನ್ನು ರಕ್ಷಿಸು.

ಹೇ! ಅಗ್ನಿಯೇ! ಈ ವೃಷ್ಣಿಶಿರಸ್ಸನ್ನು ಸುಡದಿರು. ಈ ವೃಷ್ಣಿಯು [ಕುರಿಯು] ಪ್ರಜಾಪತಿಯಿಂದ ಪ್ರಾಧಾನ್ಯವನ್ನು ಪಡೆದು ಜನಿಸಿದೆ. ಇದರ ಉಣ್ಣೆಯನ್ನು ಎರಡು ಮತ್ತು ನಾಲ್ಕು ಕಾಲಿನ ಪ್ರಾಣಿಗಳೂ ಧರಿಸುತ್ತವೆ. ಮನುಷ್ಯರು ಶೀತನಿವಾರಣೆಗಾಗಿ ಉಣ್ಣೆಯ ಕಂಬಳಿಗಳನ್ನು ಹೊದೆಯುತ್ತಾರೆ. ಪ್ರಾಣಿಗಳೂ ಭಾರವನ್ನು ಹೊರುವಾಗ ಮೃದುವಾಗಿರುವಂತೆ ಬೆನ್ನಿನಲ್ಲಿ ಕಂಬಳಿಗಳಿಂದ ಹೊದಿಸಲ್ಪಡುತ್ತವೆ. ಆದುದರಿಂದ ಇದು ಚರ್ಮರೂಪವಾಗಿದೆ.

**ಯೋ ಅಗ್ನಿರಗ್ನೇಸ್ತಪಸೋಽಧಿ ಜಾತಶ್ಶೋಚಾತ್ಪೃಥಿವ್ಯಾ ಉತ ವಾ ದಿವಸ್ಪರಿ । ಯೇನ ಪ್ರಜಾ ವಿಶ್ವಕರ್ಮಾ ವ್ಯಾನಟ್ತಮಗ್ನೇ ಹೇಡಃ ಪರಿ ತೇ ವೃಣಕ್ತು ॥**

---

ಯಃ । ಅಗ್ನಿಃ । ಅಗ್ನೇಃ । ತಪಸಃ । ಅಧೀತಿ । ಜಾತಃ । ಶೋಚಾತ್ । ಪೃಥಿವ್ಯಾಃ । ಉತ । ವಾ । ದಿವಃ । ಪರಿ ॥ ಯೇನ । ಪ್ರಜಾ ಇತಿ ಪ್ರ-ಜಾಃ । ವಿಶ್ವಕರ್ಮೇತಿ ವಿಶ್ವ-ಕರ್ಮಾ । ವ್ಯಾನಡಿತಿ ವಿ-ಆನಟ್ । ತಮ್ । ಅಗ್ನೇ । ಹೇಡಃ । ಪರೀತಿ । ತೇ । ವೃಣಕ್ತು ॥

---

| ಮಂತ್ರ | ವಿನಿಯೋಗ |
|---|---|
| ಯೋ ಅಗ್ನಿಃ...ವೃಣಕ್ತು ॥ | ಆಡಿನ ಶಿರಸ್ಸಿನ ಉಪಧಾನಕ್ಕೆ. |

---

▲ **ಯಃ ಅಗ್ನಿಃ**=ವ್ಯವಹಾರಸಾಧನಭೂತನಾದ ಯಾವ ಅಗ್ನಿಯು; **ಅಗ್ನೇಃ**=ಅಗ್ರಗಾಮಿಯಾದ ಪ್ರಜಾಪತಿಯ; **ತಪಸಃ**=ಸಂಕಲ್ಪರೂಪವಾದ ತಪಸ್ಸಿನಿಂದ; **ಅಧಿ ಜಾತಃ**=ಹುಟ್ಟಿದವನಾಗಿ; **ಪೃಥಿವ್ಯಾಃ ಪರಿ**=ಭೂಮಿಯ ಮೇಲೆ; **ಉತ ವಾ**=ಮತ್ತೂ; **ದಿವಃ ಪರಿ**=ಸ್ವರ್ಗದಲ್ಲಿ; **ಶೋಚಾತ್**=ತಾಪವನ್ನು ಉಂಟು ಮಾಡುತ್ತಿದ್ದಾನೆಯೋ; **ಯೇನ**=ಯಾವ ಮೇಕೆಯಿಂದ; **ವಿಶ್ವಕರ್ಮಾ**=[ಅಂತಹ]ಸೃಷ್ಟಿಕರ್ತನಾದ ಪ್ರಜಾಪತಿಯು; **ಪ್ರಜಾಃ**=ಪ್ರಜಾ-ಪಶುಗಳನ್ನು; **ವ್ಯಾನಟ್**=ವ್ಯಾಪಕವಾಗಿ ಸೃಷ್ಟಿಸಿದನೋ; **ತಮ್**=ಆ ಬಸ್ತಶಿರಸ್ಸನ್ನು; **ಅಗ್ನೇ**=ಹೇ! ಅಗ್ನಿಯೇ! **ತೇ**=ನಿನ್ನ; **ಹೇಡಃ**=ಕೋಪವು; **ಪರಿ ವೃಣಕ್ತು**=ಬಿಟ್ಟುಬಿಡಲಿ.

---

ಶ್ರುತಿಯಲ್ಲಿ **'ರಾಜನ್ಯೋ ಮನುಷ್ಯಾಣಾಮವಿಃ ಪಶೂನಾಮ್'** ಎಂದು ಪ್ರಾಧಾನ್ಯವನ್ನೂ **'ತಸ್ಮಾತ್ತೇ ವೀರ್ಯಾವಂತಃ'** ಎಂದು ವೀರ್ಯಸಂಪನ್ನತೆಯನ್ನೂ ತಿಳಿಸಿದೆ.

ಪ್ರಜಾಪತಿಯ ಸಂಕಲ್ಪದಿಂದ ಜನಿಸಿದ ಅಗ್ನಿಯು ಭೂಮಿ-ಸ್ವರ್ಗಗಳಲ್ಲಿ ತಾಪವನ್ನುಂಟುಮಾಡುವವನು. ಸೃಷ್ಟಿಕರ್ತನು ಯಾವ ಮೇಕೆಯಿಂದ ಪ್ರಜಾ-ಪಶುಸೃಷ್ಟಿಯನ್ನು ಮಾಡಿದನೋ ಅಂತಹ ಆಡಿನ ಶಿರಸ್ಸನ್ನು ಎಲೈ! ಅಗ್ನಿಯೇ ದಹಿಸದಿರು.

ಅಜಾ ಹ್ಯಗ್ನೇರಜನಿಷ್ಟ ಗರ್ಭಾತ್ಸಾ ವಾ

ಅಪಶ್ಯಜ್ಜನಿತಾರಮಗ್ರೇ । ತಯಾ ರೋಹಮಾಯನ್ನುಪ

ಮೇಧ್ಯಾಸಸ್ತಯಾ ದೇವಾ ದೇವತಾಮಗ್ರ ಆಯನ್ನ್ ।

---

ಅಜಾ । ಹಿ । ಅಗ್ನೇಃ । ಅಜನಿಷ್ಟ । ಗರ್ಭಾತ್ । ಸಾ । ವೈ । ಅಪಶ್ಯತ್ । ಜನಿತಾರಮ್ । ಅಗ್ರೇ ॥ ತಯಾ । ರೋಹಮ್ । ಆಯನ್ನ್ । ಉಪೇತಿ । ಮೇಧ್ಯಾಸಃ । ತಯಾ । ದೇವಾಃ । ದೇವತಾಮ್ । ಅಗ್ರೇ । ಆಯನ್ನ್ ॥

---

| ಮಂತ್ರ | ವಿನಿಯೋಗ |
|---|---|
| ಅಜಾ...ನಿಷೀದ ॥ | ಬಸ್ತ [ಆಡು] ಶಿರಸ್ಸಿನ ಉಪಸ್ಥಾನಕ್ಕಾಗಿ. |

---

🔔 ಹಿ=ಯಾವ ಕಾರಣದಿಂದ; **ಅಜಾ**=ಮೇಕೆಯು; **ಅಗ್ನೇಃ**=ಅಗ್ನಿಯ; **ಗರ್ಭಾತ್**=ಮಧ್ಯಭಾಗದಿಂದ; **ಅಜನಿಷ್ಟ**=ಜನಿಸಿತೋ; **ಸಾ ವೈ**=ಆ ಮೇಕೆಯು; **ಜನಿತಾರಮ್**=ಉತ್ಪಾದಕನಾದ ಪ್ರಜಾಪತಿಯನ್ನು; **ಅಗ್ರೇ**=[ಉತ್ಪತ್ತಿಯ] ಅನಂತರ ಮೊದಲು; **ಅಪಶ್ಯತ್**=ನೋಡಿತು. **ಮೇಧ್ಯಾಸಃ**=ಯಾಗಯೋಗ್ಯರಾದ/ಯಾಗಕರ್ತರಾದ ಯಜಮಾನರು; **ತಯಾ**=ಆ ಮೇಕೆಯಿಂದ; **ರೋಹಮ್**=ಸ್ವರ್ಗಾರೋಹಣವನ್ನು; **ಉಪ ಆಯನ್**=ಸಮೀಪದಲ್ಲಿಯೇ ಹೊಂದಿದರು. **ತಯಾ**=ಆ ಮೇಕೆಯಿಂದ; **ದೇವಾಃ**=ದೇವತೆಗಳು; **ಅಗ್ರೇ**=ಮೊದಲು; **ದೇವತಾಮ್**=ದೇವತ್ವವನ್ನು; **ಆಯನ್**=ಪಡೆದರು; [ಅದನ್ನು ನೀನು ಹಿಂಸಿಸದಿರು]

---

ಈ ಮಂತ್ರದಲ್ಲಿ ಅಗ್ನಿಶಬ್ದವು ಅಗ್ರಗಾಮಿಯೆಂಬ ಅವಯವಾರ್ಥದಿಂದ ಪ್ರಜಾಪತಿ ಎಂಬ ಅರ್ಥದಲ್ಲಿದೆ. ಪ್ರಜಾಪತಿಯು ಸೃಷ್ಟಿಯ ಸಂಕಲ್ಪವನ್ನು ತಪಸ್ಸೆಂದು **'ತದ್ಭ್ಯೋಽತಪ್ಯತ'** ಎಂಬ ಶ್ರುತಿಗೆ ಅನುಸಾರವಾಗಿ ವಿವರಿಸಲಾಗಿದೆ.

**'ತತೋಽಜಸ್ತೂಪರಃ ಸಮಭವತ್ತಗ್ಂ ಸ್ವಾಯೈ ದೇವತಾಯಾ ಆಲಭತ ತತೋ**

# ಶರಭಮಾರಣ್ಯಮನು ತೇ ದಿಶಾಮಿ ತೇನ

# ಚಿನ್ವಾನಸ್ತನುವೋ ನಿಷೀದ ॥ [೪೫-10]

[ಅಗ್ನೇ ಮಾ ಹಿಗ್ಂಸೀರಗ್ನೇ ಮೋಷ್ಟ್ರಮಾರಣ್ಯಮನು ಶರಭಂ ನವ ಚ ॥]

---

ಶರಭಮ್ । ಆರಣ್ಯಮ್ । ಅನ್ವಿತಿ । ತೇ । ದಿಶಾಮಿ । ತೇನ । ಚಿನ್ವಾನಃ । ತನುವಃ । ನೀತಿ । ಸೀದ ॥ (೪೫) ॥

---

ಆರಣ್ಯಮ್ ಶರಭಮ್=ಸಿಂಹವನ್ನು ಕೊಲ್ಲುವ ಬಲಶಾಲಿಯಾದ ಶರಭವೆಂಬ ಆರಣ್ಯಪಶುವನ್ನು; ಅನು ತೇ ದಿಶಾಮಿ=ನಿನಗೆ ಕೊಡುತೇನೆ. ತೇನ ತನುವಃ= ಅದರಿಂದ ಜ್ವಾಲಾರೂಪವಾದ (ನಿನ್ನ) ಶರೀರಗಳನ್ನು; ಚಿನ್ವಾನಃ=ಪೋಷಿಸುವ ವನಾಗಿ; ನಿಷೀದ=ಇಲ್ಲಿ ಸ್ಥಿರನಾಗಿರು.

---

ವೈ ಸ ಪ್ರಜಾಃ ಪಶೂನಸೃಜತ' ಎಂಬ ಶ್ರುತಿವಾಕ್ಯವು ಅಜವು ಪ್ರಜಾಪಶುಸಾಧನ ವೆಂದು ತಿಳಿಸುತ್ತದೆ.

ಅಜವು ಪ್ರಜಾ-ಪಶುಸಾಧನವಾಗಿದೆ. ಪ್ರಜಾಪತಿಯ ಸಂಕಲ್ಪದಿಂದ ಅಗ್ನಿ ಯಿಂದ ಜನಿಸಿದುದು. ಅದು ಯಜಮಾನನಿಗೆ ಸ್ವರ್ಗಪ್ರಾಪ್ತಿಗೆ ಸಾಧನವಾಗಿದೆ. ಪೂರ್ವದಲ್ಲಿ ದೇವತೆಗಳು ಇದರಿಂದ ದೇವತ್ವವನ್ನು ಪಡೆದರು. ಇಂತಹ ಮಹಿಮೆಯುಳ್ಳ ಅಜದ ಶಿರಸ್ಸನ್ನು ಅಗ್ನಿಯು ದಹಿಸದಿರಲಿ. ಇದಕ್ಕೆ ಬದಲಾಗಿ ಆರಣ್ಯವಾದ ಶರಭವನ್ನು ಕೊಡುತ್ತೇನೆ. ಇದರಿಂದ ಅಗ್ನಿಯು ತೃಪ್ತನಾಗಲಿ.

---

## ವಿನಿಯೋಗಸಂಗ್ರಹ

1ಆದ್ಯುಖಾಯಾಂ ಶಿರೋ ಧತ್ತೇ 2ಇಮಮಿತ್ಯುಪತಿಷ್ಠತೇ ।
3ವಾತಾಶ್ವಸ್ಯ ಶಿರಃ ಪ್ರಾಚ್ಯಾಂ ದಧ್ಯಾದಿಮಂ4 ಜಪೇತ್ತಥಾ ॥
5ಅಜರ್ಷಭಶಿರಃ ಪಶ್ಚಾದಿ6ಮಮಿತ್ಯನುಮಂತ್ರಣಮ್ ।
7ವರೂ ದಕ್ಷಿಣತೋ ವೃಷ್ಣಿ ಶಿರಸ್ತನ್ಮಂತ್ರಣಂ ತ್ವಿಮಾಮ್8 ॥

9ಯ ಉದೀಚ್ಯಾಂ ಬಸ್ತಶಿರಸ್ತನ್ಮಂತ್ರಣ10ಮಜೇತ್ಯತಃ ।
ದಶಮೇ ತ್ವನುವಾಕೇಽಸ್ಮಿನ್ ದಶ ಮಂತ್ರಾ ಉದೀರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–10

---

## ಅನುವಾಕದ ವಿಶೇಷವಿಷಯಗಳು

### ಅ) ಮೀಮಾಂಸಾ

**೧) ಅಪಶವೋ ವಾ ಅನ್ಯೇ ಗೋ ಅಶ್ವೇಭ್ಯಃ ಎಂಬಲ್ಲಿ ಗುಣವಿಧಿಯೇ ಅಥವಾ ಸ್ತುತ್ಯರ್ಥವಾದ ಅರ್ಥವಾದವೇ? [ಜೈ. ಸೂ. 1.4.16]**

ಚಯನಬ್ರಾಹ್ಮಣದಲ್ಲಿ **'ಅಪಶವೋ ವಾ ಅನ್ಯೇ ಗೋ ಅಶ್ವೇಭ್ಯಃ'** ಈ ಶ್ರುತಿ ವಾಕ್ಯದಲ್ಲಿ ಗೋವು ಅಶ್ವಗಳಿಗಿಂತಲೂ ಬೇರೆಯ ಪ್ರಾಣಿಗಳು ಅಪಶುಗಳು ಎಂದು ಹೇಳಲಾಗಿದೆ. ಇಲ್ಲಿ ಹೇಳಿರುವ ಅಪಶು ಎಂಬುದರಿಂದ ಪಶುವಿಗೆ ಹೇಳಿರುವ ಕಾರ್ಯಗಳ ನಿಷೇಧವು ತಿಳಿಯುತ್ತದೆಯೇ? ಆ ನಿಷೇಧವೆಂಬ ಗುಣವಿಧಿಯೇ? ಅಥವಾ ಗೋವು ಅಶ್ವಗಳು ಪ್ರಶಸ್ತವಾದವುಗಳೆಂಬ ಸ್ತುತಿರೂಪವಾದ ಅರ್ಥವಾದವೇ? ಎಂಬುದು ಇಲ್ಲಿನ **ಸಂಶಯ.**

ಅಪಶು ಎಂಬ ಶಬ್ದವು ಪಶುವಲ್ಲದ ಘಟಪಟ ಮುಂತಾದ ಪದಾರ್ಥಗಳನ್ನು ತಿಳಿಸುತ್ತದೆ. ಆ ಘಟಪಟಾದಿಗಳು ಗೋ ಅಶ್ವಗಳಂತೆ ಪ್ರಶಸ್ತವಾದವುಗಳಲ್ಲ. ಈ ಅಪ್ರಾಶಸ್ತ್ಯವು ಅಜ ಮುಂತಾದವುಗಳಲ್ಲಿದೆ ಎಂಬುದನ್ನು ತಿಳಿಸಲು ಪಶುಗಳಾದವುಗಳೂ ಸಹ ಅಪಶುಗಳಾಗಿವೆ ಎಂದು ತಿಳಿಸುವ ಮೂಲಕ ಗೋ–ಅಶ್ವಗಳ ಪ್ರಾಶಸ್ತ್ಯವನ್ನು ತಿಳಿಸುವ ಸ್ತುತಿರೂಪವಾದ ಅರ್ಥವಾದವಾಗಿದೆ. ಇದರಿಂದ ಅಜ ಮುಂತಾದವುಗಳಿಗೆ ಘಟಾದಿಗಳ ಸಾಮ್ಯವನ್ನು ಹೇಳಿದಂತಾಗುತ್ತದೆ.

ಶ್ರುತಿಯಲ್ಲಿ **'ಅಯಜ್ಞೋ ವಾ ಏಷ ಯೋಽಸಾಮಾ'** ಎಂಬಲ್ಲಿ ಸಾಮವೇದದ ಪ್ರಶಂಸೆ ಇದೆ. **'ಅಸತ್ರಂ ವಾ ಏತತ್ ಯದಛಂದೋಮಮ್'** ಎಂಬಲ್ಲಿ ವಿಶಿಷ್ಟವಾದ ಮೂರು ಸ್ತೋಮಗಳ ಪ್ರಶಸ್ತಿಯು ಇದೆ.

ಹೀಗಾಗಿ **'ಅಪಶವೋ ವಾ...'** ಎಂಬುದು ಸ್ತುತ್ಯರ್ಥವಾದ ಅರ್ಥವಾದವಾಗಿದೆ. ಇದು ಇಲ್ಲಿನ **ಸಿದ್ಧಾಂತ.**

## ॥ ಏಕಾದಶೋಽನುವಾಕಃ ॥

ಇಂದ್ರಾಗ್ನೀ ರೋಚನಾ ದಿವಃ ಪರಿ ವಾಜೇಷು ಭೂಷಥಃ ।
ತದ್ವಾಂ ಚೇತಿ ಪ್ರ ವೀರ್ಯಮ್ ॥

---

ಇಂದ್ರಾಗ್ನೀ ಇತೀಂದ್ರ-ಅಗ್ನೀ । ರೋಚನಾ । ದಿವಃ । ಪರೀತಿ । ವಾಜೇಷು । ಭೂಷಥಃ ॥ ತತ್ । ವಾಮ್ । ಚೇತಿ । ಪ್ರೇತಿ । ವೀರ್ಯಮ್ ॥

---

ಹತ್ತನೆಯ ಅನುವಾಕದಲ್ಲಿ ಪಶುಶಿರಸ್ಸುಗಳ ಉಪಧಾನವು ಹೇಳಲ್ಪಟ್ಟಿದೆ. ಈ ಹನ್ನೊಂದನೆಯ ಅನುವಾಕದಲ್ಲಿ ಯಾಜ್ಯಾನುವಾಕ್ಯಗಳು ಹೇಳಲ್ಪಟ್ಟಿವೆ. ಈ ಅನುವಾಕವು ವೈಶ್ವದೇವಕಾಂಡಕ್ಕೆ ಸೇರಿದುದಾಗಿದೆ.

---

| ಮಂತ್ರ | ವಿನಿಯೋಗ |
|---|---|
| ಇಂದ್ರಾಗ್ನೀ...ವೀರ್ಯಮ್ ॥ | ಚಾತುರ್ಮಾಸ್ಯೇಷ್ಟಿಯ ವರುಣಪ್ರಘಾಸಪರ್ವದಲ್ಲಿನ ಏಕಾದಶಕಪಾಲ ಐಂದ್ರಾಗ್ನಹವಿಸ್ಸಿನ ಪುರೋನುವಾಕ್ಯೆ. |

---

🔔 ದಿವಃ=ದ್ಯುಲೋಕಕ್ಕೆ; ರೋಚನಾ=ಪ್ರಕಾಶಕರಾದ; ಇಂದ್ರಾಗ್ನೀ=ಹೇ! ಇಂದ್ರಾಗ್ನಿ ದೇವತೆಗಳೇ! ವಾಜೇಷು=ಹವಿಸ್ಸಿನ ರೂಪದ ಅನ್ನದಲ್ಲಿ; ಪರಿ ಭೂಷಥಃ=ಎಲ್ಲ ಕಡೆಗಳಲ್ಲಿಯೂ [ಭಾಗವನ್ನು] ಪಡೆಯುವಿರಿ. ತತ್=ಆ ಕಾರಣದಿಂದ; ವಾಮ್=ನಿಮ್ಮಿಬ್ಬರ; ವೀರ್ಯಮ್=ಸಾಮರ್ಥ್ಯವು; ಪ್ರ ಚೇತಿ=[ಎಲ್ಲರಿಂದಲೂ] ಚೆನ್ನಾಗಿ ತಿಳಿಯಲ್ಪಟ್ಟಿದೆ.

---

ಚಾತುರ್ಮಾಸ್ಯೇಷ್ಟಿಯ ವರುಣಪ್ರಘಾಸಪರ್ವದಲ್ಲಿ ಏಕಾದಶಕಪಾಲ ಐಂದ್ರಾಗ್ನ

ಶ್ನಥದ್ವೃತ್ರಮುತ ಸನೋತಿ ವಾಜಮಿಂದ್ರಾ ಯೋ ಅಗ್ನೀ

ಸಹುರೀ ಸಪರ್ಯಾತ್ । ಇರಜ್ಯಂತಾ ವಸವ್ಯಸ್ಯ

ಭೂರೇಸ್ಸಹಸ್ತಮಾ ಸಹಸಾ ವಾಜಯಂತಾ ॥

---

ಶ್ನಥತ್ । ವೃತ್ರಮ್ । ಉತ । ಸನೋತಿ । ವಾಜಮ್ । ಇಂದ್ರಾ । ಯಃ । ಅಗ್ನೀ ಇತಿ ।

ಸಹುರೀ ಇತಿ ಸ–ಹುರೀ । ಸಪರ್ಯಾತ್ ॥ ಇರಜ್ಯಂತಾ । ವಸವ್ಯಸ್ಯ । ಭೂರೇಃ ।

ಸಹಸ್ತಮೇತಿ ಸಹಃ–ತಮಾ । ಸಹಸಾ । ವಾಜಯಂತೇತಿ ವಾಜ–ಯಂತಾ ॥

---

| ಮಂತ್ರ | ವಿನಿಯೋಗ |
| --- | --- |
| ಶ್ನಥದ್ವೃತ್ರಮ್...ವಾಜಯಂತಾ ॥ | ಚಾತುರ್ಮಾಸ್ಯೇಷ್ಟಿಯ ವರುಣಪ್ರಘಾಸ ಪರ್ವದಲ್ಲಿನ ಏಕಾದಶಕಪಾಲ ಐಂದ್ರಾಗ್ನ ಹವಿಸ್ಸಿನ ಯಾಜ್ಯಾನುವಾಕ್ಯೆ. |

---

▲ ಯಃ=ಯಾವ ಯಜಮಾನನು; ಸಹುರೀ=ಒಟ್ಟಿಗೆ ಆಮಂತ್ರಿಸಲ್ಪಡುವ; ಇಂದ್ರಾ ಅಗ್ನೀ=ಇಂದ್ರಾಗ್ನಿದೇವತೆಗಳನ್ನು; ಸಪರ್ಯಾತ್=ಅರ್ಚಿಸುವನೋ; ಸಃ=ಆ ಯಜಮಾನನು; ವೃತ್ರಮ್=ವೈರಿಯನ್ನು; ಶ್ನಥತ್=ನಾಶಮಾಡುವನು. ಉತ=ಮತ್ತು; ವಾಜಮ್=ಅನ್ನವನ್ನು; ಸನೋತಿ=[ಎಲ್ಲರಿಗೂ] ಕೊಡುವನು. [ಅಲ್ಲದೆ] [ಆ ಇಂದ್ರಾಗ್ನಿದೇವತೆಗಳು] ಭೂರೇಃ=ಹೆಚ್ಚಾದ; ವಸವ್ಯಸ್ಯ=ಐಶ್ವರ್ಯವನ್ನು; ಇರಜ್ಯಂತಾ=ಹೊಂದಿದವರು. ಸಹಸಾ=[ತಮ್ಮ ಬಲದಿಂದ] ಸಹಸ್ತಮಾ=ಹೆಚ್ಚಾದ ಎದುರಿಸುವ ಶಕ್ತಿಯುಳ್ಳವರು; ವಾಜಯಂತಾ=ಅನ್ನವನ್ನು ಬಯಸುವವರು.

ಪುರೋಡಾಶವು ವಿಧಿಸಲ್ಪಟ್ಟಿದೆ. ಅಲ್ಲಿಯ ನಾಲ್ಕು ಹವಿಸ್ಸುಗಳ ಯಾಜ್ಯಾ–ಪುರೋನುವಾಕ್ಯೆಗಳು ಇಲ್ಲಿವೆ.

ಹೇ! ಇಂದ್ರಾಗ್ನಿ ದೇವತೆಗಳೇ! ನೀವು ಎಲ್ಲೆಡೆ ಹವಿರ್ಭಾಗವನ್ನು ಪಡೆಯುವಿರಿ. ಹೀಗಾಗಿ ನಿಮ್ಮ ಸಾಮರ್ಥ್ಯವನ್ನು ಎಲ್ಲರೂ ಬಲ್ಲರು.

ಹವಿಸ್ವೀಕಾರಕ್ಕಾಗಿ ಏಕಕಾಲದಲ್ಲಿಯೇ ಆಮಂತ್ರಿಸಲ್ಪಡುವವರೂ, ಅತುಲೈಶ್ವರ್ಯ

# ಪ್ರ ಚರ್ಷಣಿಭ್ಯಃ ಪೃತನಾ ಹವೇಷು ಪ್ರ ಪೃಥಿವ್ಯಾ ರಿರಿಚಾಥೇ ದಿವಶ್ಚ । ಪ್ರ ಸಿಂಧುಭ್ಯಃ ಪ್ರ ಗಿರಿಭ್ಯೋ ಮಹಿತ್ವಾ ಪ್ರೇಂದ್ರಾಗ್ನೀ ವಿಶ್ವಾ ಭುವನಾಽತ್ಯನ್ಯಾ ॥

ಪ್ರೇತಿ । ಚರ್ಷಣಿಭ್ಯಇತಿ ಚರ್ಷಣಿ-ಭ್ಯಃ । ಪೃತನಾ । ಹವೇಷು । ಪ್ರೇತಿ । ಪೃಥಿವ್ಯಾಃ । ರಿರಿಚಾಥೇ ಇತಿ । ದಿವಃ । ಚ ॥ ಪ್ರೇತಿ । ಸಿಂಧುಭ್ಯ ಇತಿ ಸಿಂಧು-ಭ್ಯಃ । ಪ್ರೇತಿ । ಗಿರಿಭ್ಯ ಇತಿ ಗಿರಿ-ಭ್ಯಃ । ಮಹಿತ್ವೇತಿ ಮಹಿ-ತ್ವಾ । ಪ್ರೇತಿ । ಇಂದ್ರಾಗ್ನೀ ಇತೀಂದ್ರ-ಅಗ್ನೀ । ವಿಶ್ವಾ । ಭುವನಾ । ಅತೀತಿ । ಅನ್ಯಾ ॥

| ಮಂತ್ರ | ವಿನಿಯೋಗ |
|---|---|
| ಪ್ರಚರ್ಷಣಿಭ್ಯಃ...ಅನ್ಯಾ ॥ | ಐಂದ್ರಾಗ್ನಹವಿಸ್ಸಿನ ವಿಕಲ್ಪಿತ ಯಾಜ್ಯಾನುವಾಕ್ಯೆ. |

▲ ಇಂದ್ರಾಗ್ನೀ=ಹೇ! ಇಂದ್ರಾಗ್ನಿದೇವತೆಗಳೇ! ಪೃತನಾ=ಯುದ್ಧಗಳಲ್ಲಿ; ಹವೇಷು=[ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ಮಾಡುವ] ಆಹ್ವಾನಗಳಲ್ಲಿ; **ಚರ್ಷಣಿಭ್ಯಃ**=ಮನುಷ್ಯರಿಗಿಂತಲೂ; ಪ್ರ **ರಿರಿಚಾಥೇ**=[ನೀವು]ಮಿಗಿಲಾದವರಾಗಿದ್ದೀರಿ. **ಪೃಥಿವ್ಯಾಃ**=ಭೂಮಿಗಿಂತಲೂ; **ಚ**=ಮತ್ತು; **ದಿವಃ**=ದ್ಯುಲೋಕಕ್ಕಿಂತಲೂ; ಪ್ರ ರಿರಿಚಾಥೇ=ಹೆಚ್ಚಾದವರಾಗಿದ್ದೀರಿ. **ಸಿಂಧುಭ್ಯಃ**=ಸಮುದ್ರಗಳಿಗಿಂತಲೂ; ಪ್ರ ರಿರಿಚಾಥೇ=ಹೆಚ್ಚಿನವರಾಗಿದ್ದೀರಿ. **ಗಿರಿಭ್ಯಃ**=ಪರ್ವತಗಳಿಗಿಂತಲೂ; ಪ್ರ ರಿರಿಚಾಥೇ=ಮಿಗಿಲಾದವರಾಗಿದ್ದೀರಿ. **ಅನ್ಯಾ**=ಉಳಿದ; **ವಿಶ್ವಾ**=ಎಲ್ಲ; **ಭುವನಾ**=ಭುವನಗಳನ್ನು; **ಅತಿ**=ಅತಿಕ್ರಮಿಸಿ; **ಮಹಿತ್ವಾ**=ಮಹಿಮೆಯಿಂದ; [ನೀವು] ಪ್ರ ರಿರಿಚಾಥೇ=ಮೀರಿಸಿದವರಾಗಿದ್ದೀರಿ.

**ವಂತರೂ, ಬಲಿಷ್ಠರಾಗಿ ಸಹನಶಕ್ತಿಯುಳ್ಳವರೂ, ಹವಿಸ್ಸನ್ನು ಅಪೇಕ್ಷಿಸುವವರೂ ಆದ ಇಂದ್ರಾಗ್ನಿದೇವತೆಗಳನ್ನು ಯಾವ ಯಜಮಾನನು ಹವಿಸ್ಸಿನಿಂದ ಆರಾಧಿಸುವನೋ ಅವನು ಶತ್ರುಗಳನ್ನು ನಾಶ ಮಾಡಲು ಶಕ್ತನಾಗಿ ಎಲ್ಲರಿಗೂ ಅನ್ನದಾತನಾಗುವನು.**

**ಮರುತೋ ಯಸ್ಯ ಹಿ [(೪೬)] ಕ್ಷಯೇ ಪಾಥಾ ದಿವೋ ವಿಮಹಸಃ । ಸ ಸುಗೋಪಾತಮೋ ಜನಃ ॥ ಯಜ್ಞೈರ್ವಾ ಯಜ್ಞವಾಹಸೋ ವಿಪ್ರಸ್ಯ ವಾ ಮತೀನಾಮ್ । ಮರುತಃ**

---

ಮರುತಃ । ಯಸ್ಯ । ಹಿ । (೪೬) । ಕ್ಷಯೇ । ಪಾಥ । ದಿವಃ । ವಿಮಹಸ ಇತಿ ವಿ–ಮಹಸಃ ॥ ಸಃ । ಸುಗೋಪಾತಮ ಇತಿ ಸುಗೋಪ–ತಮಃ । ಜನಃ ॥ ಯಜ್ಞೈಃ । ವಾ । ಯಜ್ಞವಾಹಸ ಇತಿ ಯಜ್ಞ–ವಾಹಸಃ । ವಿಪ್ರಸ್ಯ । ವಾ । ಮತೀನಾಮ್ ॥ ಮರುತಃ ।

---

| ಮಂತ್ರ | ವಿನಿಯೋಗ |
| --- | --- |
| ಮರುತೋ...ಜನಃ ॥ | ಚಾತುರ್ಮಾಸ್ಯದ ವರುಣಪ್ರಘಾಸಪರ್ವದ ಮಾರುತ್ಯಾಮಿಕ್ಷಾಯಾಗದ ಪುರೋನುವಾಕ್ಯೆ. |
| ಯಜ್ಞೈರ್ವಾ...ಹವಮ್ ॥ | ಅದೇ ಯಾಗದ ವೈಕಲ್ಪಿಕಪುರೋನುವಾಕ್ಯೆ. |

---

▲ **ವಿಮಹಸಃ**=ವಿಶೇಷವಾದ ತೇಜಸ್ಸುಳ್ಳ; **ಮರುತಃ**=ಮರುದ್ದೇವತೆಗಳೇ! **ದಿವಃ**=ಸ್ವರ್ಗಲೋಕದಿಂದ [ಬಂದಿರುವ] [ನೀವು]; **ಯಸ್ಯ**=ಯಾವ ಯಜಮಾನನ; **ಕ್ಷಯೇ**=ಮನೆಯಲ್ಲಿ; **ಪಾಥ**=ರಕ್ಷಣೆಯನ್ನು ಒದಗಿಸುತ್ತೀರೋ; **ಸಃ**=ಆ ಯಜಮಾನನು; **ಸುಗೋಪಾತಮಃ**=ಬೇರೆಯವರನ್ನು ಚೆನ್ನಾಗಿ ರಕ್ಷಿಸುವ; **ಜನಃ ಹಿ**=ವ್ಯಕ್ತಿಯೇ [ಆಗುವನು/ಆಗಲಿ]. ▲ **ಯಜ್ಞವಾಹಸಃ**=ಯಜ್ಞನಿರ್ವಾಹಕರಾದ; **ಮರುತಃ**=ಮರುದ್ದೇವತೆಗಳೇ! **ಯಜ್ಞೈಃ ವಾ**=ಯಜ್ಞಗಳ ನಿಮಿತ್ತದಿಂದಾಗಲೀ; **ವಿಪ್ರಸ್ಯ**=ಬ್ರಾಹ್ಮಣನಾದ ಯಜಮಾನನ; **ಮತೀನಾಮ್ ವಾ**=ಪ್ರಾರ್ಥನೆಯ ಬುದ್ಧಿಯ [ಅನುಗ್ರಹಕ್ಕಾಗಲೀ];

---

ಹೇ! ಇಂದ್ರಾಗ್ನಿಗಳೇ! ನೀವು ಯುದ್ಧಗಳಲ್ಲಿ ಮಾನವರಿಗಿಂತಲೂ ಸಮರ್ಥರು. ಯಜ್ಞಗಳಲ್ಲಿ ಹವಿಸ್ಸನ್ನು ಪಡೆಯುವ ನೀವು ಮಾನವರಿಗಿಂತಲೂ ಅಧಿಕರು. ನೀವು

ಶೃಣುತಾ ಹವಮ್ ॥ ಶ್ರಿಯಸೇ ಕಂ ಭಾನುಭಿಸ್ಸಂ ಮಿಮಿಕ್ಷಿರೇ ತೇ ರಶ್ಮಿಭಿಸ್ತ ಋಕ್ವಭಿಃ ಸುಖಾದಯಃ । ತೇ ವಾಶೀಮಂತ ಇಷ್ಮಿಣೋ ಅಭೀರವೋ ವಿದ್ರೇ ಪ್ರಿಯಸ್ಯ ಮಾರುತಸ್ಯ ಧಾಮ್ನಃ ॥

ಶೃಣುತ । ಹವಮ್ ॥ ಶ್ರಿಯಸೇ । ಕಮ್ । ಭಾನುಭಿರಿತಿ ಭಾನು-ಭಿಃ । ಸಮಿತಿ । ಮಿಮಿಕ್ಷಿರೇ । ತೇ । ರಶ್ಮಿಭಿರಿತಿ ರಶ್ಮಿ-ಭಿಃ । ತೇ । ಋಕ್ವಭಿರಿತ್ಯೃಕ್ವ-ಭಿಃ । ಸುಖಾದಯ ಇತಿ ಸು-ಖಾದಯಃ ॥ ತೇ । ವಾಶೀಮಂತ ಇತಿ ವಾಶಿ-ಮಂತಃ । ಇಷ್ಮಿಣಃ । ಅಭೀರವಃ । ವಿದ್ರೇ । ಪ್ರಿಯಸ್ಯ । ಮಾರುತಸ್ಯ । ಧಾಮ್ನಃ ॥

| ಮಂತ್ರ | ವಿನಿಯೋಗ |
|---|---|
| ಶ್ರಿಯಸೇ...ಧಾಮ್ನಃ ॥ | ಮಾರುತ್ಯಾಮಿಕ್ಷಾಯಾಗದ ಯಾಜ್ಯಾನುವಾಕ್ಯೆ. |

**ಹವಮ್**=[ನಮ್ಮ] ಆಹ್ವಾನವನ್ನು; **ಶೃಣುತ**=ಆಲಿಸಿರಿ. 🔔 **ತೇ**=ಪುರೋವಾತರೂಪರಾದ ಮರುತ್ತುಗಳು; **ಕಮ್**=[ಪ್ರಾಣಿಗಳು] ನೀರನ್ನು/ಸುಖವನ್ನು; **ಶ್ರಿಯಸೇ**=ಹೊಂದುವುದಕ್ಕಾಗಿ; **ಭಾನುಭಿಃ**=ಪ್ರಕಾಶಕವಾದ; **ರಶ್ಮಿಭಿಃ**=ಸೂರ್ಯಕಿರಣಗಳಿಂದ ಕೂಡಿಕೊಂಡು; **ಸಂ ಮಿಮಿಕ್ಷಿರೇ**=[ಮಳೆಯಿಂದ ಭೂಮಿಯನ್ನು] ತೋಯಿಸುತ್ತಾರೆ. **ತೇ**=ಆ ಮರುತರು; **ಋಕ್ವಭಿಃ**=ಯಾಜ್ಯಾ-ಪುರೋನುವಾಕ್ಯರೂಪವಾದ ಋಕ್ಕುಗಳಿಂದ [ಸ್ತುತರಾಗಿ]; **ಸುಖಾದಯಃ**=[ಹವಿಸ್ಸನ್ನು] ಚೆನ್ನಾಗಿ ಸೇವಿಸುತ್ತಾರೆ. **ತೇ**=ಆ ಮರುತರು; **ವಾಶೀಮಂತಃ**=[ಸಂತೋಷದಿಂದ] ಘೋಷಗಳನ್ನು ಮಾಡುತ್ತಾ; **ಅಭೀರವಃ**=ರಾಕ್ಷಸಭಯರಹಿತರಾಗಿ; **ಇಷ್ಮಿಣಃ**=ತಮ್ಮ ಸ್ಥಾನಗಳಿಗೆ ಹಿಂದಿರುಗಿದವರಾಗುತ್ತಾರೆ; **ಪ್ರಿಯಸ್ಯ**=ಪ್ರಿಯವಾದ; **ಮಾರುತಸ್ಯ**=ಮರುತರಿಗೆ ಸಂಬಂಧಿಸಿದ; **ಧಾಮ್ನಃ**=ಸ್ಥಾನವನ್ನು; **ವಿದ್ರೇ**=ಹೊಂದುತ್ತಾರೆ.

# *ಅವ ತೇ ಹೇಡ *ಉದುತ್ತಮಮ್ ॥

ಅವೇತಿ । ತೇ । ಹೇಡಃ । ಉದಿತಿ । ಉತ್ತಮಮಿತ್ಯುತ್-ತಮಮ್ ॥

---

ಅವ ತೇ ಹೇಡೋ ವರುಣ ನಮೋಭಿರವ ಯಜ್ಞೇಭಿರೀಮಹೇ ಹವಿರ್ಭಿಃ ।
ಕ್ಷಯನ್ನಸ್ಮಭ್ಯಮಸುರ ಪ್ರಚೇತೋ ರಾಜನ್ನೇನಾಗ್ಂಸಿ ಶಿಶ್ರಥಃ ಕೃತಾನಿ ॥
ಉದುತ್ತಮಂ ವರುಣ ಪಾಶಮಸ್ಮದವಾಧಮಂ ವಿಮಧ್ಯಮಗ್ಗ್ಂ ಶ್ರಥಾಯ ।
ಅಥಾ ವಯಮಾದಿತ್ಯ ವ್ರತೇ ತವಾನಾಗಸೋ ಅದಿತಯೇ ಸ್ಯಾಮ ॥

---

| ಮಂತ್ರ | ವಿನಿಯೋಗ |
|---|---|
| ಅವ ತೇ ಹೇಡೋ...ಕೃತಾನಿ ॥<br>ಉದುತ್ತಮಮ್...ಸ್ಯಾಮ ॥ | ಚಾತುರ್ಮಾಸ್ಯದ ವರುಣಪ್ರಘಾಸಪರ್ವದ ವಾರುಣ್ಯಾಮಿಕ್ಷಾಯಾಗದ ಪುರೋನುವಾಕ್ಯೆ ಮತ್ತು ಯಾಜ್ಯಾನುವಾಕ್ಯೆಗಳ ಪ್ರತೀಕಗಳು |

---

ದ್ಯಾವಾಪೃಥಿವಿಗಳಿಗಿಂತಲೂ, ನದೀ-ಸಮುದ್ರಗಳಿಗಿಂತಲೂ, ಪರ್ವತಗಳಿಗಿಂತಲೂ ಹೆಚ್ಚಿನವರು. ನೀವು ನಿಮ್ಮ ಮಹಿಮೆಯಿಂದ ಬೇರೆಯ ಎಲ್ಲ ಲೋಕಗಳನ್ನೂ ಅತಿಕ್ರಮಿಸಿರುತ್ತೀರಿ.

ಮರುದ್ದೇವತೆಗಳು ವಿಶೇಷವಾದ ತೇಜಸ್ಸುಳ್ಳವರು. ಆರಾಧನೆಯಿಂದ ಸುಪ್ರೀತರಾದ ಆ ಮರುತರು ಯಜಮಾನನ ಮನೆಗೆ ಬಂದು ರಕ್ಷಣೆಯನ್ನು ಒದಗಿಸುವರು. ಅವರ ಅನುಗ್ರಹದಿಂದ ಯಜಮಾನನು ಬೇರೆಯವರನ್ನು ರಕ್ಷಿಸಲಿ. ರಕ್ಷಿಸಲು ಸಮರ್ಥನಾಗಲಿ.

ಯಜ್ಞವನ್ನು ವಹಿಸುವ ಮರುದ್ದೇವತೆಗಳೇ! ಯಜ್ಞವನ್ನು ರಕ್ಷಿಸುವ ನಿಮಿತ್ತದಿಂದಾಗಲೀ, ಯಜಮಾನನ ಪ್ರಾರ್ಥನೆಯ ಬುದ್ಧಿಯ ನಿಮಿತ್ತದಿಂದಾಗಲೀ, ಯಜಮಾನನ ಚಿತ್ತವೃತ್ತಿಗಳನ್ನು ಅನುಗ್ರಹಿಸುವುದಕ್ಕಾಗಲೀ, ನಮ್ಮ ಆಹ್ವಾನವನ್ನು ಕೇಳಿ ಯಜ್ಞಭೂಮಿಗೆ ಆಗಮಿಸಿರಿ.

---

* ಪ್ರಥಮಕಾಂಡದ ಐದನೆಯ ಪ್ರಪಾಠಕದ 'ವೈಶ್ವಾನರೋ ನಃ' ಎಂಬ ಅನುವಾಕದಲ್ಲಿ ವ್ಯಾಖ್ಯಾನ ಮಾಡಲ್ಪಟ್ಟಿದೆ. ಇಲ್ಲಿ ತಾತ್ಪರ್ಯವನ್ನು ನೀಡಿದೆ.

**ಕಯಾ ನಶ್ಚಿತ್ರ ಆ ಭುವದೂತೀ ಸದಾವೃಧಸ್ಸಖಾ । ಕಯಾ ಶಚಿಷ್ಠಯಾ ವೃತಾ ॥ [( ೪೭ )]**

---

ಕಯಾ । ನಃ । ಚಿತ್ರಃ । ಏತಿ । ಭುವತ್ । ಊತೀ । ಸದಾವೃಧ ಇತಿ ಸದಾ-ವೃಧಃ । ಸಖಾ ॥ ಕಯಾ । ಶಚಿಷ್ಠಯಾ । ವೃತಾ ॥(೪೭)।

---

| ಮಂತ್ರ | ವಿನಿಯೋಗ |
|---|---|
| **ಕಯಾ ನಃ...ವೃತಾ ॥** | ಏಕಕಪಾಲವಾದ ಕಾಯಯಾಗದ ಪುರೋನುವಾಕ್ಯೆ. |

---

▲ **ಕಯಾ**=ಪ್ರಜಾಪತಿಗೆ ಸಂಬಂಧಿಸಿದ; **ಊತೀ**=ರಕ್ಷಣೆಯಿಂದ; **ಚಿತ್ರಃ**=ವಿಚಿತ್ರವಾದ ಈ ಯಜ್ಞವು; **ನಃ**=ನಮ್ಮನ್ನು; **ಆ ಭುವತ್**=ಹೊಂದಿತು. [ಈ ಯಜ್ಞವು] **ಸದಾವೃಧಃ**=ಯಾವಾಗಲೂ ವೃದ್ಧಿಯನ್ನು ಹೊಂದುವುದಾಗಿದೆ. **ಸಖಾ**=[ನಮ್ಮ] ಮಿತ್ರನಾಗಿದೆ. **ಕಯಾ**=ಪ್ರಜಾಪತಿಸಂಬಂಧಿಯಾದ; **ಶಚಿಷ್ಠಯಾ**=ಅತಿಶಯವಾದ ಶಕ್ತಿಯಿಂದ; **ವೃತಾ**=ಯುಕ್ತವಾಗಿದೆ.

---

ಮರುತರು ಪುರೋವಾತವಾಗಿ ಪ್ರಕಾಶಕವಾದ ಸೂರ್ಯಕಿರಣಗಳೊಂದಿಗೆ ಕೂಡಿಕೊಂಡಾಗ ಮಳೆಯನ್ನು ಸುರಿಸಿ ಲೋಕಕ್ಕೆ ಸುಖಕರವಾದ ನೀರನ್ನು ಸುರಿಸುತ್ತಾರೆ. ಆ ಮರುತರು ಯಾಜ್ಯಾ-ಪುರೋನುವಾಕ್ಯರೂಪವಾದ ಋಕ್ಕುಗಳಿಂದ ಸಮರ್ಪಿಸುವ ಹವಿಸ್ಸನ್ನು ಸವಿದು ತೃಪ್ತರಾಗಿ ಸಂತೋಷಸೂಚಕವಾದ ಘೋಷವನ್ನು ಮಾಡುತ್ತಾ ಹಿಂದಿರುಗುತ್ತಾರೆ. ಭಯರಹಿತರಾದ ಮರುತರು ಸ್ವರ್ಗದಲ್ಲಿ ತಮಗೆ ಪ್ರಿಯವಾದ ಸ್ಥಾನವನ್ನು ಹೊಂದುತ್ತಾರೆ.

**ತಾತ್ಪರ್ಯ:-ಅವ ತೇ ಹೇಡಃ**-ಶ್ರೇಷ್ಠವಾದ ಮನಸ್ಸುಳ್ಳ, ರಾಕ್ಷಸರನ್ನು ನಾಶಪಡಿಸಬಲ್ಲ, ವರುಣರಾಜನೇ! ನಮ್ಮ ಅಪರಾಧದಿಂದ ನಿನಗೆ ಬಂದಿರಬಹುದಾದ ರೋಷವನ್ನು ನಮಸ್ಕಾರಗಳಿಂದಲೂ ಯಾಗಗಳಿಂದಲೂ ಹವಿಸ್ಸುಗಳಿಂದಲೂ ಹೋಗಲಾಡಿಸುತ್ತೇನೆ. ನಮ್ಮ ಹಿತಕ್ಕಾಗಿ ಯಾಗಭೂಮಿಯಲ್ಲಿರುವ ನೀನು ನಮ್ಮ ಪಾಪಗಳನ್ನು ಪರಿಹರಿಸು.

**ಉದುತ್ತಮಮ್**-ಅದಿತಿಪುತ್ರನಾದ ವರುಣದೇವನೇ! ನೀನು ನಮ್ಮ ಶಿರೋಭಾಗದಲ್ಲಿ

**ಕೋ ಅದ್ಯ ಯುಙ್ಕ್ತೇ ಧುರಿ ಗಾ ಋತಸ್ಯ ಶಿಮೀವತೋ ಭಾಮಿನೋ ದುರ್ಹೃಣಾಯೂನ್ ।**

**ಆಸನ್ನಿಷೂನ್ಹೃತ್ಸ್ವಸೋ ಮಯೋಭೂನ್, ಯ ಏಷಾಂ ಭೃತ್ಯಾಮೃಣಧತ್ಸ ಜೀವಾತ್ ॥**

---

ಕಃ । ಅದ್ಯ । ಯುಙ್ಕ್ತೇ । ಧುರಿ । ಗಾಃ । ಋತಸ್ಯ । ಶಿಮೀವತಃ । ಭಾಮಿನಃ । ದುರ್ಹೃಣಾಯೂನಿತಿ ದುಃ–ಹೃಣಾಯೂನ್ ॥ ಆಸನ್ನಿಷೂನ್ನಿತ್ಯಾಸನ್ನ್–ಇಷೂನ್ । ಹೃತ್ಸ್ವಸ ಇತಿ ಹೃತ್ಸು–ಅಸಃ । ಮಯೋಭೂನಿತಿ ಮಯಃ–ಭೂನ್ । ಯಃ । ಏಷಾಮ್ । ಭೃತ್ಯಾಮ್ । ಋಣಧತ್ । ಸಃ । ಜೀವಾತ್ ॥

---

| ಮಂತ್ರ | ವಿನಿಯೋಗ |
|---|---|
| **ಕೋ ಅದ್ಯ...ಸ ಜೀವಾತ್ ॥** | ಏಕಕಪಾಲಯಾಗದ ಯಾಜ್ಯಾನುವಾಕ್ಯೆ. |

---

**ಕಃ**=ಪ್ರಜಾಪತಿಯು; **ಅದ್ಯ**=ಇಲ್ಲಿ [ಈ ದಿನದಲ್ಲಿ] **ಋತಸ್ಯ ಧುರಿ**=ಯಜ್ಞದ ಅಗ್ರಭಾಗದಲ್ಲಿರುವ; **ಶಿಮೀವತಃ**=ಈ ಕರ್ಮಯೋಗ್ಯವಾದ; **ಭಾಮಿನಃ**=ಸ್ವಾರ್ಥ ಪ್ರಕಾಶಕವಾದ; **ದುರ್ಹೃಣಾಯೂನ್**=ದುಃಖನಿವಾರಕವಾದ; **ಆಸನ್ನಿಷೂನ್**= ನಮ್ಮ ಮುಖವನ್ನು ಹೊಂದಿರುವ; **ಹೃತ್ಸ್ವಸಃ**=ಹೃದಯಂಗಮವಾದ; **ಮಯೋಭೂನ್**=ಸುಖವನ್ನುಂಟುಮಾಡುವ; **ಗಾಃ**=[ನಮ್ಮ ಸ್ತುತಿರೂಪವಾದ] ವಾಗ್ವಿಶೇಷಗಳನ್ನು; **ಯುಂಕ್ತೇ**=[ತನ್ನ ಮನಸ್ಸಿನಲ್ಲಿ] ಇಟ್ಟುಕೊಳ್ಳುತ್ತಾನೆ. **ಯಃ**= ಯಾವ ಯಜಮಾನನು; **ಏಷಾಮ್**=ಈ ವಾಗ್ವಿಶೇಷಗಳ; **ಭೃತ್ಯಾಮ್**=ಭರಣಕ್ರಿಯೆ ಯನ್ನು; **ಋಣಧತ್**=ವೃದ್ಧಿಗೊಳಿಸುತ್ತಾನೆಯೋ/ಮತ್ತೆ ಮತ್ತೆ ಸ್ತುತಿಸುತ್ತಾನೆಯೋ; **ಸಃ**=ಅವನು; **ಜೀವಾತ್**=ಚಿರಕಾಲ ಜೀವಿಸುತ್ತಾನೆ.

# *ಅಗ್ನೇ ನಯಾ^ಽಽದೇವಾನಾಗ್‌ಂ ✦ಶಂ ನೋ ಭವಂತು ✱ವಾಜೇವಾಜೇ ॥

ಅಗ್ನೇ । ನಯ ॥ ಏತಿ । ದೇವಾನಾಮ್ ॥ ಶಮ್ । ನಃ । ಭವಂತು ॥ ವಾಜೇವಾಜ ಇತಿ ವಾಜೇ-ವಾಜೇ ॥

ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್, ವಿಶ್ವಾನಿ ದೇವ ವಯುನಾನಿ ವಿದ್ವಾನ್ ।
ಯುಯೋಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ ॥
ಆ ದೇವಾನಾಮಪಿ ಪಂಥಾಮಗನ್ಮ ಯಚ್ಛಕ್ನವಾಮ ತದನು ಪ್ರವೋಢುಮ್ ।
ಅಗ್ನಿರ್ವಿದ್ವಾನ್ತ್ಸ ಯಜಾತ್ಸೇದು ಹೋತಾ ಸೋ ಅಧ್ವರಾನ್ತ್ಸ ಋತೂನ್ಕಲ್ಪಯಾತಿ ॥
ಶಂ ನೋ ಭವಂತು ವಾಜಿನೋ ಹವೇಷು । ದೇವತಾತಾ ಮಿತದ್ರವಸ್ಸ್ವರ್ಕಾಃ ।
ಜಂಭಯಂತೋಽಹಿಂ ವೃಕಗ್‌ಂ ರಕ್ಷಾಗ್‌ಂಸಿ ಸನೇಮ್ಯಸ್ಮದ್ಯುಯವನ್ನಮೀವಾಃ ॥
ವಾಜೇವಾಜೇಽವತ ವಾಜಿನೋ ನೋ ಧನೇಷು ವಿಪ್ರಾ ಅಮೃತಾ ಋತಜ್ಞಾಃ ।
ಅಸ್ಯ ಮಧ್ವಃ ಪಿಬತ ಮಾದಯಧ್ವಂ ತೃಪ್ತಾ ಯಾತ ಪಥಿಭಿರ್ದೇವಯಾನೈಃ ॥

| ಮಂತ್ರ | ವಿನಿಯೋಗ |
|---|---|
| ಅಗ್ನೇ ನಯ...ವಿಧೇಮ ॥ | ಸ್ವಿಷ್ಟಕೃದ್ಯಾಗದ ಪುರೋನುವಾಕ್ಯೆ. |
| ಆ ದೇವಾನಾಮ್...ಕಲ್ಪಯಾತಿ ॥ | ಸ್ವಿಷ್ಟಕೃದ್ಯಾಗದ ಯಾಜ್ಯಾನುವಾಕ್ಯೆ. |
| ಶಂ ನೋ ಭವಂತು...ಅಮೀವಾಃ ॥ | ವಾಜಿನಯಾಗದ ಪುರೋನುವಾಕ್ಯೆ. |
| ವಾಜೇವಾಜೇ...ದೇವಯಾನೈಃ ॥ | ವಾಜಿನಯಾಗದ ಯಾಜ್ಯಾನುವಾಕ್ಯೆ. |

*1-1-14 ^1-1-14 ✦ 1-7-8 ✱ 1-7-8 ರಲ್ಲಿ ಪಠಿತವಾಗಿರುವ ಈ ಎಲ್ಲಾ ಮಂತ್ರಗಳ ವ್ಯಾಖ್ಯಾನವನ್ನು ಆಯಾ ಸಂಪುಟದಲ್ಲಿ ಕೊಡಲಾಗಿದೆ. ಇಲ್ಲಿ ತಾತ್ಪರ್ಯವನ್ನು ಮಾತ್ರ ನೀಡಲಾಗಿದೆ.

## ಅಪ್ಸ್ವಗ್ನೇ ಸಧಿಷ್ಟವ ಸೌಷಧೀರನು ರುಧ್ಯಸ್ಯೇ ।

ಅಪ್ಸ್ವಿತ್ಯಪ್-ಸು । ಅಗ್ನೇ । ಸಧಿಃ । ತವ । ಸಃ । ಓಷಧೀಃ । ಅನ್ವಿತಿ । ರುಧ್ಯಸೇ ॥

| ಮಂತ್ರ | ವಿನಿಯೋಗ |
| --- | --- |
| ಅಪ್ಸ್ವಗ್ನೇ...ಫುನಃ ॥ | ಅವಭೃಥಯಾಗದಲ್ಲಿ ಪ್ರಥಮಾಜ್ಯಭಾಗದ ಪುರೋನುವಾಕ್ಯೆ. |

ಅಗ್ನೇ=ಅಗ್ನಿದೇವನೇ! ತವ=ನಿನ್ನ; ಸಧಿಃ=ಬಲವು; ಅಪ್ಸು=ನೀರಿನಲ್ಲಿ; ವರ್ತತೇ =ಇದೆ; ಸಃ=ಅಂತಹ ನೀನು; ಓಷಧೀಃ=ವ್ರೀಹಿಯವಾದ್ಯೋಷಧಿಗಳನ್ನು; ಅನು ರುಧ್ಯಸೇ=[ಜಠರಾಗ್ನಿರೂಪದಿಂದ] ಅನುಸರಿಸುತ್ತೀಯೆ.

ಪಾದಭಾಗದಲ್ಲಿ ಮತ್ತು ಮಧ್ಯಭಾಗದಲ್ಲಿರುವ ನಿನ್ನ ಪಾಶಗಳನ್ನು ನಾಶಪಡಿಸು. ಬಳಿಕ ನಾವು ನಿನಗೆ ಸಂಬಂಧಿಸಿದ ಯಾಗಾದಿಗಳನ್ನು ಮಾಡುವುದರಲ್ಲಿ ಅಡ್ಡಿಗಳಿಲ್ಲದೆ ಪ್ರವೃತ್ತರಾಗುವಂತೆ ಅನುಗ್ರಹಿಸು.

'ಕ' ಎಂಬ ಶಬ್ದವು **'ಮಾರುತೇ ವೇಧಸಿ ಬ್ರಧ್ನೇ ಪುಂಸಿ ಕಃ'** [ವಾಯು, ಬ್ರಹ್ಮ ಮತ್ತು ಸೂರ್ಯ ಎಂಬರ್ಥದಲ್ಲಿ ಕ ಶಬ್ದವು ಪುಲ್ಲಿಂಗದಲ್ಲಿದೆ] **ಕಂ ಶಿರೋಽಂಬುನೋಃ** [ತಲೆ ಮತ್ತು ನೀರು ಎಂಬರ್ಥದಲ್ಲಿ ಕ ಶಬ್ದವು ನಪುಂಸಕಲಿಂಗದಲ್ಲಿದೆ] 'ಕ' [ಪ್ರಜಾಪತಿ] ಗೆ ಸಂಬಂಧಿಸಿದುದು **'ಕಾ'** ಎಂದಾಗಿದೆ. **'ಕಯಾ'** ಎಂಬುದು ತೃತೀಯಾವಿಭಕ್ತಿಯಲ್ಲಿದೆ.

ಪ್ರಾಜಾಪತ್ಯವಾದ ರಕ್ಷಣೆಯಿಂದ ಕೂಡಿದ ವಿಚಿತ್ರವಾದ ನಮ್ಮ ಯಜ್ಞವು ಸದಾ ವೃದ್ಧಿಹೊಂದುತ್ತದೆ. ನಮ್ಮ ಮಿತ್ರನಾಗಿದೆ. ಇದು ಪ್ರಾಜಾಪತ್ಯವಾದ ಶಕ್ತಿಯಿಂದ ಯುಕ್ತವಾಗಿದೆ. ಇಂತಹ ಯಜ್ಞವನ್ನು ನಾವು ಪಡೆದಿರುತ್ತೇವೆ.

ಪ್ರಜಾಪತಿದೇವನು ನಾವು ಯಜ್ಞಕ್ಕೆ ಮೊದಲು ಹೇಳುವ ಸ್ತುತಿವಿಶೇಷವಾಕ್ಯಗಳನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳುತ್ತಾನೆ. ಈ ಸ್ತುತಿವಾಕ್ಯಗಳು ಕರ್ಮಯೋಗ್ಯವಾಗಿವೆ. ಇವು ಅರ್ಥಪ್ರಕಾಶಕಗಳಾಗಿವೆ. ದುಃಖವನ್ನು ಹೋಗಲಾಡಿಸತಕ್ಕವುಗಳಾಗಿವೆ. ನಮ್ಮ ಮುಖ ದಿಂದ ಹೊರಡುವ ಈ ವಾಕ್ಯಗಳು ಹೃದಯಂಗಮವಾಗಿವೆ. ಸುಖವನ್ನುಂಟು ಮಾಡತ ಕ್ಕವುಗಳಾಗಿವೆ. ಇವುಗಳನ್ನು ಮತ್ತೆ ಮತ್ತೆ ಪ್ರಯೋಗಿಸುವ ಯಜಮಾನನು ದೇವನ ಅನುಗ್ರಹದಿಂದ ಚಿರಂಜೀವಿಯಾಗುತ್ತಾನೆ.

**ತಾ:-ಅಗ್ನೇ ನಯ-ಹೇ!** ಅಗ್ನಿದೇವನೇ! ನೀನು ಒಳ್ಳೆಯ ಮಾರ್ಗದಿಂದ ನಮ್ಮನ್ನು ಧನ ಸಂಪಾದನೆಯ ಮಾರ್ಗದಲ್ಲಿ ಕರೆದುಕೊಂಡು ಹೋಗು. ವಿದ್ವಾಂಸನಾದ ನೀನು ಎಲ್ಲ

# ಗರ್ಭೇ ಸಞ್ಜಾಯಸೇ ಪುನಃ ॥

ಗರ್ಭೇ । ಸನ್ । ಜಾಯಸೇ । ಪುನಃ ॥

**ಗರ್ಭೇ ಸನ್**=ಅರಣಿಗಳಲ್ಲಿ ಇರುವವನಾಗಿ; **ಪುನಃ ಜಾಯಸೇ**=[ಮಂಥನದಿಂದ ಮತ್ತೆ] ಹುಟ್ಟಿರುವೆ.

ಮಾರ್ಗಗಳನ್ನೂ ತಿಳಿದಿರುವವನು. ನೀನು ನರಕಕಾರಣವಾದ ಕುಟಿಲವಾದ ಪಾಪವನ್ನು ನಮ್ಮಿಂದ ದೂರ ಮಾಡು. ನಾವು ನಿನಗೆ ಹೆಚ್ಚಾದ ನಮಸ್ಕಾರೋಕ್ತಿಗಳನ್ನು ಹೇಳುತ್ತೇವೆ.

**ಆ ದೇವಾನಾಮ್**:-ನಾವು ತಪ್ಪಿರುವ ದೇವಮಾರ್ಗವನ್ನು ಮತ್ತೆ ಹೊಂದಿರುತ್ತೇವೆ. ನಾವು ಯಾವ ಯಜ್ಞವನ್ನು ಮಾಡಲು ಸಮರ್ಥರೋ ಅದನ್ನು ವಿಚ್ಛಿತ್ತಿ ಇಲ್ಲದೆ ಮಾಡುತ್ತೇವೆ. ವಿದ್ವಾಂಸನಾದ ಅಗ್ನಿಯು ಯಾಗವನ್ನು ಸಫಲಗೊಳಿಸುತ್ತಾನೆ. ಅವನೇ ದೇವತೆಗಳನ್ನು ಆಹ್ವಾನಿಸುವವನು. ಅವನೇ ಯಜ್ಞಗಳನ್ನು ಕಾಲಾತಿಕ್ರಮವಾಗದಂತೆ ನಿರ್ವಹಿಸುತ್ತಾನೆ.

**ಶಂ ನೋ ಭವಂತು**:-ಅಶ್ವಾಭಿಮಾನಿದೇವತೆಗಳೇ!/ವಾಜಿನಯಾಗದ ದೇವತೆಗಳೇ! ವೇಗವಾಗಿ ಸಂಚರಿಸುವ, ಯಜ್ಞಗಳಲ್ಲಿ ಒಳ್ಳೆಯ ಗೌರವಕ್ಕೆ ಪಾತ್ರರಾದ ನೀವು ಹಾವಿನಂತೆ ಅಥವಾ ತೋಳದಂತೆ ಹಿಂಸಿಸುವ ರಾಕ್ಷಸರನ್ನು ನಮ್ಮಿಂದ ದೂರ ಮಾಡಿರಿ. ರೋಗಗಳನ್ನು ಹೋಗಲಾಡಿಸಿರಿ.

**ವಾಜೇ ವಾಜೇ**:-ವಾಜಿನಯಾಗದೇವತೆಗಳೇ!/ಅಶ್ವಾಭಿಮಾನಿದೇವತೆಗಳೇ!, ನೀವು ಬ್ರಾಹ್ಮಣರಂತೆ ಪರಿಶುದ್ಧರು. ಅನ್ನನಿಮಿತ್ತವಾಗಿಯೂ, ಧನನಿಮಿತ್ತವಾಗಿಯೂ ನಮ್ಮನ್ನು ರಕ್ಷಿಸಿರಿ. ನೀವು ಮರಣರಹಿತರೂ, ಸತ್ಯವಾದಿಗಳೂ ಆಗಿರುತ್ತೀರಿ. ಯಜಮಾನನು ಸಮರ್ಪಿಸುವ-ಮಧುವಿನಂತೆ ಸಿಹಿಯಾದ-ವಾಜಿನವನ್ನು ಸ್ವೀಕರಿಸಿ ತೃಪ್ತರಾಗಿರಿ. ದೇವಮಾರ್ಗದಿಂದ ನಿಮ್ಮ ಲೋಕಕ್ಕೆ ಪ್ರಯಾಣ ಮಾಡಿರಿ. **'ವಾಜಿಭ್ಯೋ ವಾಜಿನಮ್'** ಎಂಬ ವಾಕ್ಯದಂತೆ ವಾಜಿನಕ್ಕೆ ವಾಜಿ[ಅಶ್ವ]ನರೇ ಅಭಿಮಾನಿದೇವತೆಗಳು.

ಹೇ! ಅಗ್ನಿಯೇ! ನಿನ್ನ ಬಲವು ವೈದ್ಯುತಾಗ್ನಿರೂಪದಿಂದ ನೀರಿನಲ್ಲಿ ಇದೆ. ನೀನು ಜಠರಾಗ್ನಿರೂಪದಿಂದ ವ್ರೀಹಿ, ಯವ ಮುಂತಾದ ಓಷಧಿಗಳನ್ನು ಅನುಸರಿಸುತ್ತೀಯೆ. ಅರಣಿಗಳಲ್ಲಿ ಗೂಢರೂಪದಿಂದ ಇರತಕ್ಕ ನೀನು ಮಂಥನದಿಂದ ಮತ್ತೆ ಮತ್ತೆ ಜನಿಸುತ್ತೀಯೆ. ನೀನು ನಮ್ಮನ್ನು ಅನುಗ್ರಹಿಸು.

ವೃಷಾ ಸೋಮ ದ್ಯುಮಾಗ್ಂ ಅಸಿ ವೃಷಾ ದೇವ ವೃಷವ್ರತಃ ।
ವೃಷಾ ಧರ್ಮಾಣಿ ದಧಿಷೇ ॥ *ಇಮಂ ಮೇ ವರುಣ ^ತತ್ತ್ವಾ ಯಾಮಿ ✦ತ್ವಂ ನೋ ಅಗ್ನೇ *ಸ ತ್ವಂ ನೋ ಅಗ್ನೇ ॥ ೪೮-11 ॥

[ಹಿ ವೃತಾ ಮ ಏಕಾದಶ ಚ ॥]

---

ವೃಷಾ । ಸೋಮ । ದ್ಯುಮಾನಿತಿ ದ್ಯು-ಮಾನ್ । ಅಸಿ । ವೃಷಾ । ದೇವ । ವೃಷವ್ರತ ಇತಿ ವೃಷ-ವ್ರತಃ ॥ ವೃಷಾ । ಧರ್ಮಾಣಿ । ದಧಿಷೇ ॥ ಇಮಮ್ । ಮೇ । ವರುಣ ॥ ತತ್ । ತ್ವಾ । ಯಾಮಿ ॥ ತ್ವಮ್ । ನಃ । ಅಗ್ನೇ ॥ ಸಃ । ತ್ವಮ್ । ನಃ । ಅಗ್ನೇ ॥ (೮) ॥

---

| ಮಂತ್ರ | ವಿನಿಯೋಗ |
|---|---|
| ವೃಷಾ ಸೋಮ...ದಧಿಷೇ ॥ | ದ್ವಿತೀಯಾಜ್ಯಭಾಗದ ಪುರೋನುವಾಕ್ಯೆ. |
| ಇಮಂ ಮೇ...ಆಚಕೇ ॥ | ವಾರುಣಯಾಗದ ಪುರೋನುವಾಕ್ಯೆ. |
| ತತ್ತ್ವಾ ಯಾಮಿ...ಪ್ರಮೋಷೀಃ ॥ | ವಾರುಣಯಾಗದ ಯಾಜ್ಯಾನುವಾಕ್ಯೆ. |
| ತ್ವಂ ನೋ...ಮುಮುಗ್ಧ್ಯಸ್ಮತ್ ॥ | ಅಗ್ನಿವಾರುಣಸ್ವಿಷ್ಟಕೃದ್ಯಾಗದ ಪುರೋನುವಾಕ್ಯೆ. |
| ಸ ತ್ವಂ ನೋ...ಏಧಿ ॥ | ಅಗ್ನಿವಾರುಣಸ್ವಿಷ್ಟಕೃದ್ಯಾಗದ ಯಾಜ್ಯಾನುವಾಕ್ಯೆ. |

---

🔔 **ಸೋಮ ದೇವ**=ಸೋಮದೇವನೇ! [ನೀನು] **ವೃಷಾ**=ಕಾಮನೆಗಳನ್ನು ಸುರಿಸುವವನೂ; **ದ್ಯುಮಾನ್**=ದೀಪ್ತಿಮಂತನೂ; **ಅಸಿ**=ಆಗಿರುವೆ; **ವೃಷಾ**=ವರ್ಷುಕ [ಕಾಮನೆಗಳನ್ನುಸುರಿಸಿಕೊಡುವ]ನಾದ ನೀನು; **ವೃಷವ್ರತಃ**=ಕಾಮನೆಗಳನ್ನು ಸುರಿಸುವ ಕರ್ಮಗಳಿಗೆ ಪ್ರೇರಕನಾಗಿರುತ್ತೀಯೆ; **ವೃಷಾ**=ಇಷ್ಟಾರ್ಥಗಳನ್ನು ಸುರಿಸುವ [ನೀನು]; **ಧರ್ಮಾಣಿ**=ಪುಣ್ಯಗಳನ್ನು; **ದಧಿಷೇ**=ಧರಿಸಿರುವೆ.

---

*2-1-11 ^2-1-11 ✦ 2-5-12 * 2-5-12 ಈ ಎಲ್ಲಾ ಮಂತ್ರಗಳ ವ್ಯಾಖ್ಯಾನವನ್ನು ಆಯಾ ಸಂಪುಟದಲ್ಲಿ ಕೊಡಲಾಗಿದೆ. ಇಲ್ಲಿ ತಾತ್ಪರ್ಯವನ್ನು ಮಾತ್ರ ನೀಡಲಾಗಿದೆ.

ಇಮಂ ಮೇ ವರುಣ ಶ್ರುಧೀ ಹವಮದ್ಯಾ ಚ ಮೃಡಯ । ತ್ವಾಮವಸ್ಯುರಾಚಕೇ ॥

ತತ್ತ್ವಾಯಾಮಿ ಬ್ರಹ್ಮಣಾ ವಂದಮಾನಸ್ತದಾಶಾಸ್ತೇ ಯಜಮಾನೋ ಹವಿರ್ಭಿಃ ।

ಅಹೇಡಮಾನೋ ವರುಣೇಹ ಬೋಧ್ಯುರುಶಗ್‍ಂಸ ಮಾ ನ ಆಯುಃ ಪ್ರಮೋಷೀಃ ॥

ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನ್ದೇವಸ್ಯ ಹೇಡೋಽವಯಾಸಿಸೀಷ್ಠಾಃ ।

ಯಜಿಷ್ಠೋ ವಹ್ನಿತಮಶ್ಶೋಶುಚಾನೋ ವಿಶ್ವಾ ದ್ವೇಷಾಗ್‍ಂಸಿ ಪ್ರಮುಮುಗ್ಧ್ಯಸ್ಮತ್ ॥

ಸ ತ್ವಂ ನೋ ಅಗ್ನೇವಮೋಭವೋತೀ ನೇದಿಷ್ಠೋ ಅಸ್ಯಾ ಉಷಸೋ ವ್ಯುಷ್ಟೌ ।

ಅವಯಕ್ಷ್ವ ನೋ ವರುಣಗ್‍ಂ ರರಾಣೋ ವೀಹಿ ಮೃಡೀಕಗ್‍ಂ ಸುಹವೋ ನ ಏಧಿ ॥

---

ಎಲೈ! ಸೋಮದೇವನೇ! ನೀನು ನಿನ್ನನ್ನು ಆರಾಧಿಸುವವರ ಇಷ್ಟಾರ್ಥಗಳನ್ನು ಸುರಿಸುವವನು, ಪ್ರಕಾಶಿಸುವವನು. ಕಾಮವೃಷ್ಟಿನಿಮಿತ್ತವಾಗಿ ಕರ್ಮಗಳನ್ನು ಅಪೇಕ್ಷಿಸುವವನು. ಪುಣ್ಯಕರ್ಮಗಳ ಫಲಗಳನ್ನು ಭಕ್ತರಿಗೆ ಕೊಡಲು ಧರಿಸಿರುವವನು. ಇಂತಹ ನೀನು ನಮ್ಮ ಕಾಮನೆಗಳನ್ನು ಪೂರ್ತಿಗೊಳಿಸು.

**ತಾ:-ಇಮಂ ಮೇ:-** ಹೇ! ವರುಣನೇ! ನಮ್ಮ ಆಹ್ವಾನವನ್ನು ಕೇಳು. ನಮ್ಮನ್ನು ಸುಖಪಡಿಸು. ನಾನು ರಕ್ಷಣೆಯನ್ನು ಅಪೇಕ್ಷಿಸುತ್ತಾ ನಿನ್ನನ್ನು ಸ್ತುತಿಸುತ್ತೇನೆ.

**ತತ್ತ್ವಾಯಾಮಿ:-**ವರುಣನೇ! ಮಂತ್ರಗಳನ್ನು ಹೇಳಿ ನಿನ್ನನ್ನು ಸ್ತುತಿಸುತ್ತಾ ನಿನ್ನನ್ನು ಹೊಂದುತ್ತೇನೆ. ಯಜಮಾನನು ಹವಿಸ್ಸುಗಳನ್ನು ಸಮರ್ಪಿಸಿ ರಕ್ಷಣೆಯನ್ನು ಪ್ರಾರ್ಥಿಸಿಕೊಳ್ಳುತ್ತಾನೆ. ನೀನು ಕೋಪರಹಿತನಾಗಿ ಶಾಂತನಾಗಿ ನಿನ್ನ ಪ್ರಾರ್ಥನೆಯನ್ನು ತಿಳಿದುಕೋ. ನಮ್ಮ ಆಯುಸ್ಸು ಕಡಿಮೆಯಾಗದಂತೆ ಮಾಡಿ ನಮ್ಮನ್ನು ದೀರ್ಘಾಯುಷ್ಮಂತರನ್ನಾಗಿ ಮಾಡಿ ಅನುಗ್ರಹಿಸು.

**ತ್ವಂ ನೋ ಅಗ್ನೇ:-**ಹೇ! ಅಗ್ನಿದೇವನೇ! ನೀನು ನಮ್ಮ ಭಕ್ತಿಯನ್ನು ತಿಳಿದವನು. ನೀನು ವರುಣದೇವನ ಕೋಪವನ್ನು ಹೋಗಲಾಡಿಸು. ನೀನು ಅತಿಶಯವಾಗಿ ಯಜ್ಞನಿರ್ವಾಹಕನು. ಹವಿಸ್ಸುಗಳನ್ನು ದೇವತೆಗಳಿಗೆ ಅತಿಶಯವಾಗಿ ಒಯ್ಯುವವನು. ಪ್ರಕಾಶಯುಕ್ತನು. ಇಂತಹ ನೀನು ನಮ್ಮ ಶತ್ರುಗಳ ದ್ವೇಷದ ಕಾರ್ಯಗಳನ್ನು ಹೋಗಲಾಡಿಸು.

**ಸ ತ್ವಂ ನೋ ಅಗ್ನೇ:-**ಹೇ! ಅಗ್ನಿಯೇ! ನೀನು ನಮಗೆ ರಕ್ಷಣೆಯನ್ನು ಒದಗಿಸಿ ರಕ್ಷಕನಾಗು. ನೀನು ಉಷಃಕಾಲಾನಂತರ ಪ್ರಾತಃಕಾಲದಲ್ಲಿ ನಮಗೆ ಹತ್ತಿರದಲ್ಲಿ ಇರುವವನು. ನೀನು ವರುಣನ ಕೋಪವನ್ನು ದೂರವಾಗುವಂತೆ ಮಾಡು. ಸುಖಕರವಾದ ಹವಿಸ್ಸನ್ನು ಸಂತುಷ್ಟಚಿತ್ತನಾಗಿ ಸ್ವೀಕರಿಸು. ನಮ್ಮ ಈ ಆಹ್ವಾನವನ್ನು ಶಾಂತಚಿತ್ತನಾಗಿ ಸ್ವೀಕರಿಸು.

## ವಿನಿಯೋಗಸಂಗ್ರಹ

ವಾರುಣ್ಯಾಖ್ಯ ಪ್ರಘಾಸೇಷು ಯಾಜ್ಯಾ ಅಂತ್ಯಾನುವಾಕಗಾಃ ।
1-3 ಇಂದ್ರಾಗ್ನೀ ತಿಸ್ರ ಐಂದ್ರಾಗ್ನೇ ಮಾರುತೇ ತು 4-6 ಮರುತ್ತ್ರಯಮ್ ॥
7-8ಅವೋದು ವಾರುಣೇ ಯಾಗೇ 9ಕಯಾ 10 ಕೋ ಕಾಯಯಾಗಕೇ ।
11ಅಗ್ನ 12ಆ ದೇವ ಸಂಯಾಜ್ಯೇ 13ಶಂನೋ 14 ವಾಜೇ ತು ವಾಜಿನೇ ॥
15-16 ಅಪ್ಸ್ವದ್ವಯಂ ಚಾವಭೃಥೇಽನುವಾಕ್ಯೇ ಆಜ್ಯಭಾಗಯೋಃ ।
17ಇಮಂ 18ತತ್ತ್ವಾ ಪ್ರಧಾನಸ್ಯ ಪ್ರೋಕ್ತೇ 19ತ್ವಂ 20ಸ ತ್ವಮಿತ್ಯಯಮ್ ॥
ಸಂಯಾಜ್ಯೇ ಇತಿ ಮಂತ್ರಾಸ್ತು ವಿಂಶತಿಃ ಸಮುದೀರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-20

---

ವಿಷ್ಣೋಃ ಕ್ರಮೋಽಸಿ ದಿವಸ್ಪರ್ಯಣ್ಣಪತೇಽಪೇತ ಸಮಿತಂ ಯಾ ಜಾತಾ ಮಾ ನೋ ಹಿಗ್ಂಸೀದಭ್ಯಸ್ಥಾ ದ್ಯುವಾಽಸ್ಯಾದಿತ್ಯಂ ಗರ್ಭಮಿಂದ್ರಾಗ್ನೀ ರೋಚನ್ಯೇಕಾದಶ ॥ ೧೧ ॥

ವಿಷ್ಣೋರಸ್ಮಿನ್, ಹವ್ಯೇತಿ ತ್ವಾಽಹಂ ಧೀತಿಭಿರ್, ಹೋತ್ರಾ
ಅಷ್ಟಾಚತ್ವಾರಿಗ್ಂಶತ್ ॥ ೪೮ ॥

॥ ವಿಷ್ಣೋಃ ಕ್ರಮೋಽಸಿ ಸ ತ್ವಂ ನೋ ಅಗ್ನೇ ॥

॥ ಹರಿಃ ಓಮ್ ॥

ಶ್ರೀ ಕೃಷ್ಣಾರ್ಪಣಮಸ್ತು

ಇತಿ ಚತುರ್ಥಕಾಂಡೇ ದ್ವಿತೀಯಃ ಪ್ರಶ್ನಃ

# ತೈತ್ತಿರೀಯ ಸಂಹಿತಾ

## ಚತುರ್ಥಃ ಕಾಂಡಃ ತೃತೀಯಃ ಪ್ರಶ್ನಃ

## ॥ ಪ್ರಥಮೋಽನುವಾಕಃ ॥

### ಅಪಾಂ ತ್ವೇಮನ್ಥ್ಸಾದಯಾ-

ಅಪಾಮ್ । ತ್ವಾ । ಏಮನ್ನ್ । ಸಾದಯಾಮಿ ।

ಎರಡನೆಯ ಪ್ರಶ್ನದಲ್ಲಿ ಚಯನಕ್ಷೇತ್ರಸಂಬಂಧಿವಿಷಯಗಳು ಹೇಳಲ್ಪಟ್ಟಿವೆ. ಈ ಮೂರನೆಯ ಪ್ರಶ್ನದಲ್ಲಿ ಪಂಚಚಿತಿಗಳು ಹೇಳಲ್ಪಡುತ್ತವೆ. ಮೊದಲ ಮೂರು ಅನುವಾಕಗಳಿಂದ ಪ್ರಥಮಚಿತಿಯೂ, ನಾಲ್ಕು ಮತ್ತು ಐದನೆಯ ಅನುವಾಕಗಳಿಂದ ದ್ವಿತೀಯಚಿತಿಯೂ, ಆರು ಮತ್ತು ಏಳನೆಯ ಅನುವಾಕಗಳಿಂದ ತೃತೀಯಚಿತಿಯೂ, ಎಂಟು, ಒಂಬತ್ತು, ಹತ್ತು ಮತ್ತು ಹನ್ನೊಂದನೆಯ ಅನುವಾಕಗಳಿಂದ ಚತುರ್ಥ ಚಿತಿಯೂ, ಹನ್ನೆರಡನೆಯ ಅನುವಾಕದಿಂದ ಐದನೆಯ ಚಿತಿಯೂ ಕೊನೆಯ ಅನುವಾಕ ದಲ್ಲಿ ಯಾಜ್ಯಾ-ಪುರೋನುವಾಕ್ಯೆಗಳೂ ಹೇಳಲ್ಪಟ್ಟಿವೆ.

ಪ್ರಥಮಾನುವಾಕದಲ್ಲಿ ಅಪಸ್ಯೇಷ್ಟಕೋಪಧಾನವು ಹೇಳಲ್ಪಟ್ಟಿದೆ. ಪ್ರಥಮ ಪಂಚಕವು ಹೀಗೆ ಹೇಳಲ್ಪಟ್ಟಿದೆ.

| ಮಂತ್ರ | ವಿನಿಯೋಗ |
| --- | --- |
| ಅಪಾಂ ತ್ವೇಮನ್ಥ್ಸಾದಯಾಮಿ ॥<br>ಅಪಾಂ ತ್ವೋದ್ಮನ್ಥ್ಸಾದಯಾಮಿ ॥<br>ಅಪಾಂ ತ್ವಾ ಭಸ್ಮನ್ಥ್ಸಾದಯಾಮಿ ॥<br>ಅಪಾಂ ತ್ವಾ ಜ್ಯೋತಿಷಿ ಸಾದಯಾಮಿ ॥<br>ಅಪಾಂ ತ್ವಾಯನೇ ಸಾದಯಾಮಿ॥ | ಅಪಸ್ಯೇಷ್ಟಕೋಪಧಾನದಲ್ಲಿ ಪೂರ್ವಭಾಗದ ಐದು ಇಷ್ಟಕೆಗಳನ್ನು ಉಪಧಾನ ಮಾಡಲು. [ಪ್ರಥಮ ಪಂಚಕ] |

▲ [ಎಲೈ! ಇಷ್ಟಕೆಯೇ!]ತ್ವಾ=ನಿನ್ನನ್ನು; ಅಪಾಮ್=ನೀರಿಗೆ ಸಂಬಂಧಿಸಿದ; ಏಮನ್ =ಪ್ರವಾಹಾದಿಗಮನಪ್ರಕಾರದಲ್ಲಿ; ಸಾದಯಾಮಿ= ಸ್ಥಾಪಿಸುತ್ತೇನೆ.

-ಮ್ಯಪಾಂ ತ್ವೋದ್ಮನ್ಥ್ಸಾದಯಾಮ್ಯಪಾಂ ತ್ವಾ ಭಸ್ಮ-
ನ್ಥ್ಸಾದಯಾಮ್ಯಪಾಂ ತ್ವಾ ಜ್ಯೋತಿಷಿ ಸಾದಯಾಮ್ಯಪಾಂ
ತ್ವಾಽಽಯನೇ ಸಾದಯಾಮ್ಯರ್ಣವೇ ಸದನೇ ಸೀದ

---

ಅಪಾಮ್ । ತ್ವಾ । ಓದ್ಮನ್ನ್ । ಸಾದಯಾಮಿ । ಅಪಾಮ್ । ತ್ವಾ । ಭಸ್ಮನ್ನ್ ।
ಸಾದಯಾಮಿ । ಅಪಾಮ್ । ತ್ವಾ । ಜ್ಯೋತಿಷಿ । ಸಾದಯಾಮಿ । ಅಪಾಮ್ । ತ್ವಾ ।
ಆಯನೇ । ಸಾದಯಾಮಿ । ಅರ್ಣವೇ । ಸದನೇ । ಸೀದ ।

---

| ಮಂತ್ರ | ವಿನಿಯೋಗ |
|---|---|
| **ಅರ್ಣವೇ ಸದನೇ ಸೀದ ॥** | |
| **ಸಮುದ್ರೇ ಸದನೇ ಸೀದ ॥** | ದಕ್ಷಿಣಭಾಗದ ಐದು ಇಷ್ಟಕೆಗಳ ಉಪಧಾನ ಮಾಡಲು [ದ್ವಿತೀಯಪಂಚಕ] |
| **ಸಲಿಲೇ ಸದನೇ ಸೀದ ॥** | |
| **ಅಪಾಂ ಕ್ಷಯೇ ಸೀದ ॥** | |
| **ಅಪಾಗ್ಂ ಸಧಿಷಿ ಸೀದ ॥** | |

---

🔔 [ಇಷ್ಟಕೆಯೇ!] **ತ್ವಾ**=ನಿನ್ನನ್ನು; **ಅಪಾಮ್ ಓದ್ಮನ್**=ನೀರಿನ ಅಲೆಗಳೇ ಮುಂತಾದ ಪ್ರಕಾರಗಳಲ್ಲಿ; **ಸಾದಯಾಮಿ**=ಇಡುತ್ತೇನೆ. [ಇಷ್ಟಕೆಯೇ!] **ತ್ವಾ**=ನಿನ್ನನ್ನು; **ಅಪಾಮ್**=ನೀರಿನ; **ಭಸ್ಮನ್**=ಭಾಸಕವಾದ ಶುಕ್ಲರೂಪದಲ್ಲಿ; **ಸಾದಯಾಮಿ**=ಸ್ಥಾಪಿಸುತ್ತೇನೆ. [ಇಷ್ಟಕೆಯೇ!] **ತ್ವಾ**=ನಿನ್ನನ್ನು; **ಅಪಾಮ್**=ನೀರಿನ; **ಜ್ಯೋತಿಷಿ**=ನಿರ್ಮಲಪ್ರಕಾಶದಲ್ಲಿ; **ಸಾದಯಾಮಿ**=ಇಡುತ್ತೇನೆ. [ಇಷ್ಟಕೆಯೇ!] **ತ್ವಾ**=ನಿನ್ನನ್ನು; **ಅಪಾಮ್**=ನೀರಿನ; **ಆಯನೇ**=ಆಧಾರವಾದ ನದಿ, ಬಾವಿ, ಕೆರೆ ಮುಂತಾದ ಕಡೆಯಲ್ಲಿ; **ಸಾದಯಾಮಿ**=ಸ್ಥಾಪಿಸುತ್ತೇನೆ. 🔔 [ಇಷ್ಟಕೆಯೇ!] [ನೀನು] **ಅರ್ಣವೇ ಸದನೇ**=ಸಮುದ್ರದಂತೆ ವಿಶಾಲವಾದ ದೊಡ್ಡ ಕೆರೆ ಮುಂತಾದ ನೀರಿನಲ್ಲಿ; **ಸೀದ**=ಇರು.

ಸಮುದ್ರೇ ಸದನೇ ಸೀದ ಸಲಿಲೇ ಸದನೇ ಸೀದಾಪಾಂ ಕ್ಷಯೇ ಸೀದಾಪಾಗ್ಂ ಸಧಿಷಿ ಸೀದಾಪಾಂ ತ್ವಾ ಸದನೇ ಸಾದಯಾ-

---

ಸಮುದ್ರೇ । ಸದನೇ । ಸೀದ । ಸಲಿಲೇ । ಸದನೇ । ಸೀದ । ಅಪಾಮ್ । ಕ್ಷಯೇ । ಸೀದ । ಅಪಾಮ್ । ಸಧಿಷಿ । ಸೀದ । ಅಪಾಮ್ । ತ್ವಾ । ಸದನೇ । ಸಾದಯಾಮಿ ।

---

| ಮಂತ್ರ | ವಿನಿಯೋಗ |
|---|---|
| ಅಪಾಂ ತ್ವಾ ಸದನೇ ಸಾದಯಾಮಿ ॥ | ಪಶ್ಚಿಮಭಾಗದ ಐದು ಇಷ್ಟಕೆಗಳನ್ನು ಉಪಧಾನ ಮಾಡಲು [ತೃತೀಯಪಂಚಕ] |
| ಅಪಾಂ ತ್ವಾ ಸಧಸ್ಥೇ ಸಾದಯಾಮಿ ॥ | |
| ಅಪಾಂ ತ್ವಾ ಪುರೀಷೇ ಸಾದಯಾಮಿ ॥ | |
| ಅಪಾಂ ತ್ವಾ ಯೋನೌ ಸಾದಯಾಮಿ ॥ | |
| ಅಪಾಂ ತ್ವಾ ಪಾಥಸಿ ಸಾದಯಾಮಿ ॥ | |

---

ಸಮುದ್ರೇ ಸದನೇ=ಸಮುದ್ರದ ನೀರಿನಲ್ಲಿ; ಸೀದ=ಇರು; ಸಲಿಲೇ ಸದನೇ= [ಅನಿರ್ಧಾರಿತವಾದ ಜಲಾಧಾರದ] ನೀರಿನಲ್ಲಿ; ಸೀದ=ಇರು; ಅಪಾಮ್ ಕ್ಷಯೇ= ಒಣಗಿದ ಕೆರೆ ಮುಂತಾದ ಪ್ರದೇಶದಲ್ಲಿ; ಸೀದ=ಇರು; ಅಪಾಮ್ ಸಧಿಷಿ=ನೀರಿನೊಡನೆ ಮೋಡದಲ್ಲಿರುವ ಆಲಿಕಲ್ಲು ಮುಂತಾದೆಡೆ; ಸೀದ=ಇರು. ▲ [ಇಷ್ಟಕೆಯೇ!] ತ್ವಾ=ನಿನ್ನನ್ನು; ಅಪಾಮ್ ಸದನೇ=ನೀರಿನ ಆಶ್ರಯವಾದ ನದ್ಯಾದಿಗಳಲ್ಲಿ; ಸಾದಯಾಮಿ=ಇಡುತ್ತೇನೆ.

---

ಎಲೈ! ಅಪಸ್ಯೇಷ್ಟಕೆಯೇ! ನಿನ್ನನ್ನು ನೀರಿನ ಪ್ರವಾಹಾದಿಗಮನರೀತಿಯಲ್ಲಿಯೂ, ಅಲೆಗಳಲ್ಲಿಯೂ, ಶುಕ್ಲರೂಪದಲ್ಲಿಯೂ, ಪ್ರಕಾಶದಲ್ಲಿಯೂ, ನದಿ, ಬಾವಿ, ಕೆರೆ ಮುಂತಾದೆಡೆಯಲ್ಲಿಯೂ ಸ್ಥಾಪಿಸುವೆನು.

ಎಲೈ! ಇಷ್ಟಕೆಯೇ! ನೀನು ದೊಡ್ಡ ಕೆರೆ ಮುಂತಾದ ಕಡೆಯಲ್ಲಿಯೂ, ಸಮುದ್ರದ ನೀರಿನಲ್ಲಿಯೂ, ಅನಿರ್ದಿಷ್ಟವಾದ ಜಲಾಧಾರದ ನೀರಿನಲ್ಲಿಯೂ, ಒಣಗಿರುವ ಕೆರೆ

ಮ್ಯಪಾಂ ತ್ವಾ ಸಧಸ್ಥೇ ಸಾದಯಾಮ್ಯಪಾಂ ತ್ವಾ ಪುರೀಷೇ ಸಾದಯಾಮ್ಯಪಾಂ ತ್ವಾ ಯೋನೌ ಸಾದಯಾಮ್ಯಪಾಂ ತ್ವಾ ಪಾಥಸಿ ಸಾದಯಾಮಿ ಗಾಯತ್ರೀ ಛಂದಸ್ತ್ರಿಷ್ಟುಪ್ಛಂದೋ

---

ಅಪಾಮ್ । ತ್ವಾ । ಸಧಸ್ಥ ಇತಿ ಸಧ-ಸ್ಥೇ । ಸಾದಯಾಮಿ । ಅಪಾಮ್ । ತ್ವಾ । ಪುರೀಷೇ । ಸಾದಯಾಮಿ । ಅಪಾಮ್ । ತ್ವಾ । ಯೋನೌ । ಸಾದಯಾಮಿ । ಅಪಾಮ್ । ತ್ವಾ । ಪಾಥಸಿ । ಸಾದಯಾಮಿ । ಗಾಯತ್ರೀ । ಛಂದಃ । ತ್ರಿಷ್ಟುಪ್ । ಛಂದಃ ।

---

| ಮಂತ್ರ | ವಿನಿಯೋಗ |
|---|---|
| ಗಾಯತ್ರೀ ಛಂದಃ ॥<br>ತ್ರಿಷ್ಟುಪ್ ಛಂದಃ ॥<br>ಜಗತೀ ಛಂದಃ ॥<br>ಅನುಷ್ಟುಪ್ ಛಂದಃ ॥<br>ಪಙ್ಕ್ತಿಶ್ಛಂದಃ ॥ | ಉತ್ತರಭಾಗದ ಐದು ಇಷ್ಟಕೆಗಳನ್ನು ಉಪಧಾನ ಮಾಡಲು.<br>**[ಚತುರ್ಥಪಂಚಕ]** |

---

▲ [ಇಷ್ಟಕೆಯೇ!] **ತ್ವಾ**=ನಿನ್ನನ್ನು; **ಅಪಾಮ್ ಸಧಸ್ಥೇ**=ಮಿಂಚು ಮೊದಲಾದವುಗಳಿಂದ ಕೂಡಿದ ನೀರುಳ್ಳ ಮೋಡದಲ್ಲಿ; **ಸಾದಯಾಮಿ**=ಇಡುತ್ತೇನೆ; [ಇಷ್ಟಕೆಯೇ!] **ತ್ವಾ**=ನಿನ್ನನ್ನು; **ಅಪಾಮ್ ಪುರೀಷೇ**=ನದಿ ಮುಂತಾದವುಗಳಲ್ಲಿರುವ ಮರಳಿನಲ್ಲಿ; **ಸಾದಯಾಮಿ**=ಸ್ಥಾಪಿಸುತ್ತೇನೆ; [ಇಷ್ಟಕೆಯೇ!] **ತ್ವಾ**=ನಿನ್ನನ್ನು; **ಅಪಾಮ್ ಯೋನೌ**=ಜಲಕಾರಣವಾದ ಅಗ್ನಿಯಲ್ಲಿ; **ಸಾದಯಾಮಿ**=ಇಡುತ್ತೇನೆ; [ಇಷ್ಟಕೆಯೇ!] **ತ್ವಾ**=ನಿನ್ನನ್ನು; **ಅಪಾಮ್ ಪಾಥಸಿ**=ಮೋಡಗಳು ನೀರನ್ನು ಹೀರಿಕೊಳ್ಳುವ ಸಮುದ್ರದಲ್ಲಿ; **ಸಾದಯಾಮಿ**=ಸ್ಥಾಪಿಸುತ್ತೇನೆ. ▲ [ಇಷ್ಟಕೆಯೇ!] [ನೀನು] **ಗಾಯತ್ರೀ ಛಂದಃ**=ಗಾಯತ್ರೀಛಂದೋರೂಪಳಾಗಿರುವೆ; [ಇಷ್ಟಕೆಯೇ!] [ನೀನು] **ತ್ರಿಷ್ಟುಪ್ ಛಂದಃ**=ತ್ರಿಷ್ಟುಪ್ಛಂದೋರೂಪಳಾಗಿರುವೆ.

## ಜಗತೀ ಛಂದೋಽನುಷ್ಟುಪ್ಛಂದಃ ಪಙ್ಕ್ತಿಶ್ಛಂದಃ ॥ ೧-1 ॥

[ಯೋನೌ ಪಂಚದಶ ಚ ॥]

---

ಜಗತೀ । ಛಂದಃ । ಅನುಷ್ಟುಬಿತ್ಯನು-ಸ್ತುಪ್ । ಛಂದಃ । ಪಂಕ್ತಿಃ । ಛಂದಃ ॥ (೧) ॥

---

[ಇಷ್ಟಕೆಯೇ!] [ನೀನು] ಜಗತೀ ಛಂದಃ=ಜಗತೀಛಂದಸ್ಸಿನ ರೂಪವನ್ನು ಹೊಂದಿದವಳಾಗಿರುವೆ; [ಇಷ್ಟಕೆಯೇ!] [ನೀನು] ಅನುಷ್ಟುಪ್ ಛಂದಃ=ಅನುಷ್ಟುಪ್‌ಛಂದೋರೂಪಳಾಗಿರುವೆ; [ಇಷ್ಟಕೆಯೇ!] [ನೀನು] ಪಙ್ಕ್ತಿಃ ಛಂದಃ=ಪಂಕ್ತಿಛಂದೋರೂಪಳಾಗಿರುವೆ. [ನಿನ್ನನ್ನು ಇಲ್ಲಿ ಸ್ಥಾಪಿಸುತ್ತೇನೆ]

---

ಮುಂತಾದೆಡೆಯಲ್ಲಿಯೂ, ಮೋಡದಲ್ಲಿರುವ ಆಲಿಕಲ್ಲು ಮುಂತಾದ ಕಡೆಯಲ್ಲಿಯೂ ಇರು.

ಎಲೈ! ಇಷ್ಟಕೆಯೇ! ನಿನ್ನನ್ನು ಆಶ್ರಯವಾದ ನದ್ಯಾದಿಗಳಲ್ಲಿಯೂ, ಮಿಂಚು ಮುಂತಾದವುಗಳಿಂದ ಕೂಡಿದ ಮೋಡದಲ್ಲಿಯೂ, ನದೀತೀರದ ಮರಳಿನಲ್ಲಿಯೂ, ನೀರಿನ ಕಾರಣವಾದ *ಅಗ್ನಿಯಲ್ಲಿಯೂ, ಮೋಡಗಳು ನೀರನ್ನು ಹೀರಿಕೊಳ್ಳುವ ಸಮುದ್ರದಲ್ಲಿಯೂ ಸ್ಥಾಪಿಸುವೆನು.

ಎಲೈ! ಇಷ್ಟಕೆಯೇ! ನೀನು ಗಾಯತ್ರೀ, ತ್ರಿಷ್ಟುಪ್, ಜಗತೀ, ಅನುಷ್ಟುಪ್, ಪಂಕ್ತಿ ಮುಂತಾದ ವಿವಿಧ ಛಂದೋರೂಪಳಾಗಿರುತ್ತೀಯೆ. ನಿನ್ನನ್ನು ಇಲ್ಲಿ ಸ್ಥಾಪಿಸುವೆನು.

ಈ ಮಂತ್ರದಲ್ಲಿ ಇಷ್ಟಕೆಗಳನ್ನು ಛಂದೋರೂಪದಿಂದ ಸ್ತುತಿಸಲಾಗಿದೆ.

### ವಿನಿಯೋಗಸಂಗ್ರಹ

ಅಪಾಮಪಸ್ಯಾ ದಿಕ್ಷ್ವೇತಾ ಉಪಧೇಯಾಸ್ತು ವಿಂಶತಿಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ– 4/20

---

* 'ಅಗ್ನೇರಾಪಃ' ಎಂಬ ಶ್ರುತಿಯು ನೀರಿಗೆ ಅಗ್ನಿಯು ಕಾರಣವೆಂದು ಹೇಳಿದೆ.

## ॥ ದ್ವಿತೀಯೋಽನುವಾಕಃ ॥

**ಅಯಂ ಪುರೋ ಭುವಸ್ತಸ್ಯ ಪ್ರಾಣೋ ಭೌವಾಯನೋ**

**ವಸಂತಃ ಪ್ರಾಣಾಯನೋ**

---

ಅಯಮ್ । ಪುರಃ । ಭುವಃ । ತಸ್ಯ । ಪ್ರಾಣ ಇತಿ ಪ್ರ–ಅನಃ । ಭೌವಾಯನಃ । ವಸಂತಃ । ಪ್ರಾಣಾಯನಃ ।

---

ಈ ಎರಡನೆಯ ಅನುವಾಕದಲ್ಲಿ ಪ್ರಾಣಭೃದಿಷ್ಟಕೋಪಧಾನವನ್ನು ಹೇಳಲಾಗಿದೆ. ಇವು ಒಟ್ಟು ಐವತ್ತು.

---

| ಮಂತ್ರ | ವಿನಿಯೋಗ |
|---|---|
| **ಅಯಂ ಪುರೋ...ಪ್ರಾಣಂ... ಪ್ರಜಾಭ್ಯಃ ॥** | ಪೂರ್ವದಿಕ್ಕಿನಲ್ಲಿ ಉಪಧಾನ ಮಾಡುವ ಹತ್ತು ಇಷ್ಟಕೆಗಳ ಉಪಧಾನಮಂತ್ರಗಳು.* |

---

**ಭುವಃ ಅಯಮ್**=ಭುವನಕಾರಣನಾದ ಈ ಪ್ರಜಾಪತಿಯು; **ಪುರಃ**=ಪೂರ್ವದಿಕ್ಕಿನಲ್ಲಿರುತ್ತಾನೆ; [ಹೇ! ಇಷ್ಟಕೆಯೇ! ನೀನು ಆ ರೂಪಳಾಗಿರುವೆ] **ತಸ್ಯ**=ಆ ಪ್ರಜಾಪತಿಗೆ ಸಂಬಂಧಿಸಿದ; **ಪ್ರಾಣಃ**=ಪ್ರಾಣವು; **ಭೌವಾಯನಃ**=[ಭುವನ ಅಪತ್ಯವೆನಿಸಿ] ಭೌವಾಯನವಾಗಿದೆ; **ವಸಂತಃ**=ವಸಂತ ಋತುವು; **ಪ್ರಾಣಾಯನಃ**= [ಪ್ರಾಣಕ್ಕೆ ಸಂಬಂಧಿಸಿದುದರಿಂದ] ಪ್ರಾಣಾಯನವೆನಿಸಿದೆ;

---

* **ಅಯಂ ಪುರೋ ಭುವ...ಪ್ರಜಾಭ್ಯಃ ।** ಎಂಬಲ್ಲಿಯವರೆಗೆ ಏಕವಾಕ್ಯತೆ ಇರುವುದರಿಂದ ಇದು ಒಂದೇ ಮಂತ್ರವಾದರೂ ಹತ್ತು ಇಷ್ಟಕೆಗಳ ಆವೃತ್ತಿಯಾಗುವುದರಿಂದ ಹತ್ತು ಮಂತ್ರಗಳಾಗುತ್ತವೆ.

ಗಾಯತ್ರೀ ವಾಸಂತೀ ಗಾಯತ್ರಿಯೈ ಗಾಯತ್ರಂ
ಗಾಯತ್ರಾದುಪಾಗ್‌ಂಶುರುಪಾಗ್‌ಂಶೋಸ್ತ್ರಿವೃತ್ತ್ರಿವೃತೋ
ರಥಂತರಗ್‌ಂ ರಥಂತರಾದ್ವಸಿಷ್ಠ ಋಷಿಃ
ಪ್ರಜಾಪತಿಗೃಹೀತಯಾ

---

ಗಾಯತ್ರೀ । ವಾಸಂತೀ । ಗಾಯತ್ರಿಯೈ । ಗಾಯತ್ರಮ್ । ಗಾಯತ್ರಾತ್ । ಉಪಾಗ್‌ಂಶು-ರಿತ್ಯುಪ-ಅಗ್‌ಂಶುಃ । ಉಪಾಗ್‌ಂಶೋರಿತ್ಯುಪ-ಅಗ್‌ಂಶೋಃ । ತ್ರಿವೃದಿತಿ ತ್ರಿ-ವೃತ್ । ತ್ರಿವೃತ ಇತಿ ತ್ರಿ-ವೃತಃ । ರಥಂತರಮಿತಿ ರಥಮ್-ತರಮ್ । ರಥಂತರಾದಿತಿ ರಥಮ್-ತರಾತ್ । ವಸಿಷ್ಠಃ । ಋಷಿಃ । ಪ್ರಜಾಪತಿಗೃಹೀತಯೇತಿ ಪ್ರಜಾಪತಿ-ಗೃಹೀತಯಾ ।

---

**ಗಾಯತ್ರೀ**=ಗಾಯತ್ರೀಛಂದಸ್ಸು; **ವಾಸಂತೀ**=ವಸಂತಕ್ಕೆ ಸಂಬಂಧಿಸಿ ವಾಸಂತಿ ಎನಿಸಿ ಕೊಳ್ಳುತ್ತದೆ; **ಗಾಯತ್ರಿಯೈ ಗಾಯತ್ರಮ್**=ಗಾಯತ್ರೀಛಂದಸ್ಸಿನಿಂದ ಗಾಯತ್ರಸಾಮವೂ; **ಗಾಯತ್ರಾತ್ ಉಪಾಗ್‌ಂಶುಃ**=ಗಾಯತ್ರಸಾಮದಿಂದ ಉಪಾಂಶುಗ್ರಹವೂ; **ಉಪಾಗ್‌ಂಶೋಃ ತ್ರಿವೃತ್**=ಉಪಾಂಶುಗ್ರಹದಿಂದ ತ್ರಿವೃತ್ಸ್ತೋಮವೂ; **ತ್ರಿವೃತಃ ರಥಂತರಮ್**=ತ್ರಿವೃತ್ಸ್ತೋಮದಿಂದ ರಥಂತರಸಾಮವೂ; **ರಥಂತರಾತ್**=ರಥಂತರ ಸಾಮದಿಂದ; **ವಸಿಷ್ಠಃ ಋಷಿಃ**=ವಸಿಷ್ಠಮುನಿಯೂ [ಹುಟ್ಟಿದಂತೆ ಇರುತ್ತಾರೆ] [ಎಲೈ! ಇಷ್ಟಕೆಯೇ!] **ಪ್ರಜಾಪತಿಗೃಹೀತಯಾ**=[ಪ್ರಾಣವಸಂತಾದಿರೂಪದಿಂದ] ಪ್ರಜಾಪತಿದೇವ ನಿಂದ ಸ್ವೀಕೃತಳಾದ;

---

**ಈ ಪ್ರಾಣಭೃದಿಷ್ಟಕೆಗಳನ್ನು ಪೂರ್ವ-ದಕ್ಷಿಣ-ಪಶ್ಚಿಮ-ಉತ್ತರ ಹಾಗೂ ಮಧ್ಯಭಾಗದಲ್ಲಿ ಉಪಧಾನ ಮಾಡಬೇಕು. ಇವು ಒಟ್ಟು ಐವತ್ತು ಆಗುತ್ತವೆ.**

**ಇಲ್ಲಿಯ ಮಂತ್ರಗಳಲ್ಲಿ-ಪ್ರಜಾಪತಿ-ಇಂದ್ರಿಯಗಳು-ಋತು-ಛಂದಸ್ಸು-ಸಾಮ ವಿಶೇಷಗಳು-ಗ್ರಹಗಳು-ಸ್ತೋಮ-ಪೃಷ್ಠಸ್ತೋತ್ರ ಹಾಗೂ ಸಾಮರ್ಷಿಗಳು-ಇವುಗಳು**

ತ್ವಯಾ ಪ್ರಾಣಂ ಗೃಹ್ಣಾಮಿ ಪ್ರಜಾಭ್ಯೋಽಯಂ ದಕ್ಷಿಣಾ
ವಿಶ್ವಕರ್ಮಾ ತಸ್ಯ ಮನೋ ವೈಶ್ವಕರ್ಮಣಂ
ಗ್ರೀಷ್ಮೋ ಮಾನಸಸ್ತ್ರಿಷ್ಟುಗ್ಗ್ರೈಷ್ಮೀ ತ್ರಿಷ್ಟುಭ

---

ತ್ವಯಾ । ಪ್ರಾಣಮಿತಿ ಪ್ರ-ಅನಮ್ । ಗೃಹ್ಣಾಮಿ । ಪ್ರಜಾಭ್ಯ ಇತಿ ಪ್ರ-ಜಾಭ್ಯಃ । ಅಯಮ್ । ದಕ್ಷಿಣಾ । ವಿಶ್ವಕರ್ಮೇತಿ ವಿಶ್ವ-ಕರ್ಮಾ । ತಸ್ಯ । ಮನಃ । ವೈಶ್ವಕರ್ಮಣಮಿತಿ ವೈಶ್ವ-ಕರ್ಮಣಮ್ । ಗ್ರೀಷ್ಮಃ । ಮಾನಸಃ । ತ್ರಿಷ್ಟುಕ್ । ಗ್ರೈಷ್ಮೀ । ತ್ರಿಷ್ಟುಭಃ ।

---

| ಮಂತ್ರ | ವಿನಿಯೋಗ |
|---|---|
| ಅಯಂ ದಕ್ಷಿಣಾ...ಮನೋ ...ಪ್ರಜಾಭ್ಯಃ ॥ | ದಕ್ಷಿಣದಿಕ್ಕಿನಲ್ಲಿ ಉಪಧಾನ ಮಾಡುವ ಹತ್ತು ಇಷ್ಟಕೆಗಳ ಉಪಧಾನಮಂತ್ರಗಳು. |

---

**ತ್ವಯಾ**=ನಿನ್ನಿಂದ; **ಪ್ರಜಾಭ್ಯಃ**=ಪ್ರಜೆಗಳಿಗಾಗಿ; **ಪ್ರಾಣಮ್**=ಪ್ರಾಣವನ್ನು/ಪ್ರಾಣ ರೂಪಳಾದ ನಿನ್ನನ್ನು; **ಗೃಹ್ಣಾಮಿ**=ತೆಗೆದುಕೊಳ್ಳುತ್ತೇನೆ/ಉಪಧಾನ ಮಾಡುತ್ತೇನೆ. 🔔 **ವಿಶ್ವಕರ್ಮಾ ಅಯಮ್**=[ಈ ಜಗದ್ವ್ಯಾಪಾರರೂಪಗಳಾದ] ಸಮಸ್ತಕಾರ್ಯಗಳುಳ್ಳ ವಿಶ್ವಕರ್ಮರೂಪನಾದ ಈ ಪ್ರಜಾಪತಿಯು; **ದಕ್ಷಿಣಾ**=ದಕ್ಷಿಣದಿಕ್ಕಿನಲ್ಲಿರುತ್ತಾನೆ. **ತಸ್ಯ ಮನಃ**=ಅವನ ಮನಸ್ಸು; **ವೈಶ್ವಕರ್ಮಣಮ್**=[ವಿಶ್ವಕರ್ಮನ ಅಪತ್ಯವೆಂದು ಉಪಚರಿಸಿ] ವೈಶ್ವಕರ್ಮಣವೆನಿಸಿದೆ; **ಗ್ರೀಷ್ಮಃ**=ಗ್ರೀಷ್ಮ ಋತುವು; **ಮಾನಸಃ**=ಮನಸ್ಸಂಬಂಧಿಯಾಗಿದೆ; **ತ್ರಿಷ್ಟುಕ್**=ತ್ರಿಷ್ಟುಪ್ ಛಂದಸ್ಸು; **ಗ್ರೈಷ್ಮೀ**=ಗ್ರೀಷ್ಮ ಸಂಬಂಧಿಯಾಗಿದೆ; **ತ್ರಿಷ್ಟುಭಃ**=ತ್ರಿಷ್ಟುಪ್‌ಛಂದಸ್ಸಿನಿಂದ; **ಐಡಮ್**=ಐಡವೆಂಬ ಸಾಮ ವಿಶೇಷವೂ; **ಐಡಾತ್ ಅಂತರ್ಯಾಮಃ**=ಐಡದಿಂದ ಅಂತರ್ಯಾಮಗ್ರಹವೂ;

ಐಡಮ್ಮೈಡಾದಂತರ್ಯಾಮೋಽಂತರ್ಯಾಮಾತ್ಪಂಚದಶಃ ಪಂಚದಶಾದ್ಬೃಹದ್ಬೃಹತೋ ಭರದ್ವಾಜ ಋಷಿಃ ಪ್ರಜಾಪತಿ ಗೃಹೀತಯಾ ತ್ವಯಾ ಮನೋ [ಮನಃ(೨)ಗೃಹ್ಣಾಮಿ]

---

ಐಡಮ್ । ಐಡಾತ್ । ಅಂತರ್ಯಾಮ ಇತ್ಯಂತಃ-ಯಾಮಃ । ಅಂತರ್ಯಾಮಾದಿತ್ಯಂತಃ -ಯಾಮಾತ್ । ಪಂಚದಶ ಇತಿ ಪಂಚ-ದಶಃ । ಪಂಚದಶಾದಿತಿ ಪಂಚ-ದಶಾತ್ । ಬೃಹತ್ । ಬೃಹತಃ । ಭರದ್ವಾಜಃ । ಋಷಿಃ । ಪ್ರಜಾಪತಿಗೃಹೀತಯೇತಿ ಪ್ರಜಾಪತಿ-ಗೃಹೀತಯಾ । ತ್ವಯಾ । ಮನಃ । (೨) ।

---

**ಅಂತರ್ಯಾಮಾತ್ ಪಂಚದಶಃ**=ಅಂತರ್ಯಾಮಗ್ರಹದಿಂದ ಪಂಚದಶಸ್ತೋಮವೂ; **ಪಂಚದಶಾತ್ ಬೃಹತ್**=ಪಂಚದಶಸ್ತೋಮದಿಂದ ಬೃಹತ್ಸಾಮವೂ; **ಬೃಹತಃ ಭರದ್ವಾಜಃ ಋಷಿಃ**=ಬೃಹತ್ಸಾಮದಿಂದ ಭರದ್ವಾಜಮುನಿಯೂ; [ಜನಿಸಿದಂತೆ ಇರುತ್ತಾರೆ] [ಹೇ! ಇಷ್ಟಕೆಯೇ!] **ಪ್ರಜಾಪತಿಗೃಹೀತಯಾ**=[ಮನಸ್ಸು-ಗ್ರೀಷ್ಮಾದಿ ರೂಪದಿಂದ] ಪ್ರಜಾಪತಿದೇವನಿಂದ ಪರಿಗೃಹೀತಳಾದ; **ತ್ವಯಾ**=ನಿನ್ನಿಂದ; **ಪ್ರಜಾಭ್ಯಃ** =ಪ್ರಜೆಗಳಿಗಾಗಿ; **ಮನಃ ಗೃಹ್ಣಾಮಿ**=ಮನೋರೂಪಳಾದ ನಿನ್ನನ್ನು ತೆಗೆದುಕೊಳ್ಳು ತ್ತೇನೆ/ಉಪಧಾನ ಮಾಡುತ್ತೇನೆ.

---

ಒಂದರಿಂದ ಇನ್ನೊಂದು ಜನಿಸಿದಂತೆ ಶ್ರುತಿಯು ತಿಳಿಸಿದೆ.

ಇವುಗಳ ಉತ್ಪತ್ತಿಯು ಲೋಕಪ್ರಸಿದ್ಧವಾದ ಜನನದಂತೆ ಅಲ್ಲ. ಈ ರೀತಿ ಜನಿಸಿದಂತೆ ಭಾವಿಸಿ ಉಪಧಾನ ಮಾಡಬೇಕೆಂದು ಶ್ರುತಿಯ ತಾತ್ಪರ್ಯ.

ಪೂರ್ವದಿಕ್ಕಿನಲ್ಲಿ ಭುವನಕಾರಣನಾದ ಪ್ರಜಾಪತಿಯು ಇರುತ್ತಾನೆ. ಹೇ! ಇಷ್ಟಕೆಯೇ! ನೀನು ಆ ರೂಪಳಾಗಿರುವೆ ಎಂದು ಆರಂಭಿಸಿ ಇಷ್ಟಕೆಯನ್ನು ವಸಂತ-ಗಾಯತ್ರೀ ಛಂದಸ್ಸು-ಗಾಯತ್ರಸಾಮ-ಉಪಾಂಶುಗ್ರಹ-ತ್ರಿವೃತ್‌ಸ್ತೋಮ-ರಥಂತರಸಾಮ ಹಾಗೂ ವಸಿಷ್ಠಮುನಿರೂಪದಿಂದ ಸ್ತುತಿಸಲಾಗಿದೆ. ಈ ರೀತಿ ಸ್ತುತಿಸಿ ಪೂರ್ವದಿಕ್ಕಿನಲ್ಲಿ

# ಗೃಹ್ಣಾಮಿ ಪ್ರಜಾಭ್ಯೋಽಯಂ ಪಶ್ಚಾದ್ವಿಶ್ವವ್ಯಚಾಸ್ತಸ್ಯ ಚಕ್ಷುರ್ವೈಶ್ವವ್ಯಚಸಂ ವರ್ಷಾಣಿ ಚಾಕ್ಷುಷಾಣಿ ಜಗತೀ ವಾರ್ಷೀ ಜಗತ್ಯಾ

---

ಗೃಹ್ಣಾಮಿ । ಪ್ರಜಾಭ್ಯ ಇತಿ ಪ್ರ-ಜಾಭ್ಯಃ । ಅಯಮ್ । ಪಶ್ಚಾತ್ । ವಿಶ್ವವ್ಯಚಾ ಇತಿ ವಿಶ್ವ-ವ್ಯಚಾಃ । ತಸ್ಯ । ಚಕ್ಷುಃ । ವೈಶ್ವವ್ಯಚಸಮಿತಿ ವೈಶ್ವ-ವ್ಯಚಸಮ್ । ವರ್ಷಾಣಿ । ಚಾಕ್ಷುಷಾಣಿ । ಜಗತೀ । ವಾರ್ಷೀ । ಜಗತ್ಯಾಃ ।

---

| ಮಂತ್ರ | ವಿನಿಯೋಗ |
|---|---|
| ಅಯಂ ಪಶ್ಚಾತ್...ಚಕ್ಷುಃ... ಪ್ರಜಾಭ್ಯಃ ॥ | ಪಶ್ಚಿಮದಿಕ್ಕಿನಲ್ಲಿ ಉಪಧಾನ ಮಾಡುವ ಹತ್ತು ಇಷ್ಟಕೆಗಳ ಉಪಧಾನಮಂತ್ರಗಳು. |

---

ಅಯಮ್ ವಿಶ್ವವ್ಯಚಾಃ=ಈ ವಿಶ್ವವ್ಯಚಸನೆಂಬ [ವಿಶ್ವವನ್ನು ವ್ಯಾಪಿಸಿರುವ] ಪ್ರಜಾಪತಿಯು; ಪಶ್ಚಾತ್=ಪಶ್ಚಿಮದಿಕ್ಕಿನಲ್ಲಿರುತ್ತಾನೆ; [ಹೇ! ಇಷ್ಟಕೆಯೇ! ನೀನು ವಿಶ್ವವ್ಯಚಸರೂಪಳಾಗಿದ್ದೀಯೆ]; ತಸ್ಯ ಚಕ್ಷುಃ=ಅವನಿಗೆ ಸಂಬಂಧಿಸಿದ ಚಕ್ಷುಸ್ಸು; ವೈಶ್ವವ್ಯಚಸಮ್=ವೈಶ್ವವ್ಯಚಸವೆನಿಸಿದೆ; ವರ್ಷಾಣಿ=ವರ್ಷರ್ತುವು; ಚಾಕ್ಷುಷಾಣಿ=ಚಾಕ್ಷುಷವಾಗಿದೆ; ಜಗತೀ ವಾರ್ಷೀ=ಜಗತೀಛಂದಸ್ಸು ವರ್ಷರ್ತುಸಂಬಂಧಿಯಾಗಿದೆ; ಜಗತ್ಯಾಃ=ಜಗತೀಛಂದಸ್ಸಿನಿಂದ;

---

ಪ್ರಾಣಭೃದಿಷ್ಟಕೆಗಳ ಉಪಧಾನವನ್ನು ಮಾಡಬೇಕು.

ದಕ್ಷಿಣದಿಕ್ಕಿನಲ್ಲಿ ಜಗದ್ವ್ಯಾಪಾರಾದಿ ಸಮಸ್ತಕಾರ್ಯವನ್ನು ಮಾಡುವ ವಿಶ್ವಕರ್ಮನೆನಿಸುವ ಪ್ರಜಾಪತಿಯು ಇರುತ್ತಾನೆ.

ಇಲ್ಲಿ ಇಷ್ಟಕೆಯನ್ನು ಗ್ರೀಷ್ಮ-ತ್ರಿಷ್ಟುಪ್ ಛಂದಸ್ಸು-ಐಡಸಾಮ-ಅಂತರ್ಯಾಮಗ್ರಹ-

# ಋಕ್ಷಮಮೃಕ್ಷಮಾಚ್ಛುಕ್ರಶ್ಶುಕ್ರಾಥ್ಸಪ್ತದಶಸ್ಸಪ್ತದಶಾದ್ವೈರೂಪಂ ವೈರೂಪಾದ್ವಿಶ್ವಾಮಿತ್ರ ಋಷಿಃ ಪ್ರಜಾಪತಿಗೃಹೀತಯಾ ತ್ವಯಾ ಚಕ್ಷುರ್ಗೃಹ್ಣಾಮಿ ಪ್ರಜಾಭ್ಯ

ಋಕ್ಷಮಮ್ । ಋಕ್ಷಮಾತ್ । ಶುಕ್ರಃ । ಶುಕ್ರಾತ್ । ಸಪ್ತದಶ ಇತಿ ಸಪ್ತ-ದಶಃ । ಸಪ್ತದಶಾದಿತಿ ಸಪ್ತ-ದಶಾತ್ । ವೈರೂಪಮ್ । ವೈರೂಪಾತ್ । ವಿಶ್ವಾಮಿತ್ರ ಇತಿ ವಿಶ್ವ-ಮಿತ್ರಃ । ಋಷಿಃ । ಪ್ರಜಾಪತಿಗೃಹೀತಯೇತಿ ಪ್ರಜಾಪತಿ-ಗೃಹೀತಯಾ । ತ್ವಯಾ । ಚಕ್ಷುಃ । ಗೃಹ್ಣಾಮಿ । ಪ್ರಜಾಭ್ಯ ಇತಿ ಪ್ರ-ಜಾಭ್ಯಃ ।

**ಋಕ್ಷಮಮ್**=ಋಕ್ಷಮವೆಂಬ ಸಾಮವಿಶೇಷವೂ; **ಋಕ್ಷಮಾತ್**=ಋಕ್ಷಮಸಾಮದಿಂದ; **ಶುಕ್ರಃ**=ಶುಕ್ರಗ್ರಹವೂ; **ಶುಕ್ರಾತ್**=ಶುಕ್ರಗ್ರಹದಿಂದ; **ಸಪ್ತದಶಃ**=ಸಪ್ತದಶಸ್ತೋಮವೂ; **ಸಪ್ತದಶಾತ್**=ಸಪ್ತದಶಸ್ತೋಮದಿಂದ; **ವೈರೂಪಮ್**=ವೈರೂಪಸಾಮವೂ; **ವೈರೂಪಾತ್ ವಿಶ್ವಾಮಿತ್ರಃ ಋಷಿಃ**=ವೈರೂಪಸಾಮದಿಂದ ವಿಶ್ವಾಮಿತ್ರಮುನಿಯೂ [ಜನಿಸಿದಂತೆ ಇರುತ್ತಾರೆ] ಹೇ! ಇಷ್ಟಕೆಯೇ!] **ಪ್ರಜಾಪತಿಗೃಹೀತಯಾ**=ಪ್ರಜಾಪತಿಯಿಂದ ಸ್ವೀಕೃತಳಾದ; **ತ್ವಯಾ**=ನಿನ್ನಿಂದ; **ಪ್ರಜಾಭ್ಯಃ**=ಪ್ರಜೆಗಳಿಗಾಗಿ; **ಚಕ್ಷುಃ ಗೃಹ್ಣಾಮಿ**=ಚಕ್ಷೂರೂಪಳಾದ ನಿನ್ನನ್ನು ಗ್ರಹಿಸುತ್ತೇನೆ/ಉಪಧಾನ ಮಾಡುತ್ತೇನೆ.

---

ಪಂಚದಶಸ್ತೋಮ-ಬೃಹತ್ಸಾಮ ಹಾಗೂ ಭರದ್ವಾಜಮುನಿಯ ರೂಪದಿಂದ ಸ್ತುತಿಸಲಾಗಿದೆ. ಈ ರೀತಿ ಸ್ತುತಿಸಿ ದಕ್ಷಿಣದಿಕ್ಕಿನಲ್ಲಿ ಪ್ರಾಣಭೃದಿಷ್ಟಕೆಗಳನ್ನು ಉಪಧಾನ ಮಾಡಬೇಕು.

ಪಶ್ಚಿಮದಿಕ್ಕಿನಲ್ಲಿ ವಿಶ್ವವನ್ನು ವ್ಯಾಪಿಸಿರುವ ವಿಶ್ವವ್ಯಚಸನೆಂಬ ಪ್ರಜಾಪತಿಯು ಇರುತ್ತಾನೆ.

ಇಲ್ಲಿ ಇಷ್ಟಕೆಯನ್ನು ವರ್ಷರ್ತು-ಜಗತೀಛಂದಸ್ಸು-ಋಕ್ಷಮಸಾಮ-ಶುಕ್ರಗ್ರಹ-ಸಪ್ತದಶಸ್ತೋಮ-ವೈರೂಪಸಾಮ ಹಾಗೂ ವಿಶ್ವಾಮಿತ್ರಋಷಿಯ ರೂಪದಿಂದ ಸ್ತುತಿಸಲಾಗಿದೆ.

ಇದಮುತ್ತರಾಥ್ಸುವಸ್ತಸ್ಯ ಶ್ರೋತ್ರಗ್ಂ ಸೌವಗ್ಂ

ಶರಚ್ಛ್ರೌತ್ರ್ಯನುಷ್ಟುಪ್ಶಾರದ್ಯನುಷ್ಟುಭಃ ಸ್ವಾರಗ್ಂ

ಸ್ವಾರಾನ್ಮಂಥೀ ಮಂಥಿನ ಏಕವಿಗ್ಂಶ

---

ಇದಮ್ । ಉತ್ತರಾದಿತ್ಯುತ್–ತರಾತ್ । ಸುವಃ । ತಸ್ಯ । ಶ್ರೋತ್ರಮ್ । ಸೌವಮ್ ।

ಶರತ್ । ಶ್ರೌತ್ರೀ । ಅನುಷ್ಟುಬಿತ್ಯನು–ಸ್ತುಪ್ । ಶಾರದೀ । ಅನುಷ್ಟುಭ ಇತ್ಯನು–ಸ್ತುಭಃ ।

ಸ್ವಾರಮ್ । ಸ್ವಾರಾತ್ । ಮಂಥೀ । ಮಂಥಿನಃ । ಏಕವಿಗ್ಂಶ ಇತ್ಯೇಕ–ವಿಗ್ಂಶಃ ।

---

| ಮಂತ್ರ | ವಿನಿಯೋಗ |
|---|---|
| ಇದಮುತ್ತರಾತ್...ಶ್ರೋತ್ರಂ... ಪ್ರಜಾಭ್ಯಃ ॥ | ಉತ್ತರದಿಕ್ಕಿನಲ್ಲಿ ಉಪಧಾನ ಮಾಡುವ ಹತ್ತು ಇಷ್ಟಕೆಗಳ ಉಪಧಾನಮಂತ್ರಗಳು. |

---

🔔 *ಇದಮ್ ಸುವಃ=[ಜಗತ್ತೆಲ್ಲವನ್ನೂ ಪ್ರೇರಿಸುವವನಾದುದರಿಂದ] ಸುವಃಶಬ್ದವಾಚ್ಯನಾದ ಪ್ರಜಾಪತಿಯು; **ಉತ್ತರಾತ್**=ಉತ್ತರದಿಕ್ಕಿನಲ್ಲಿ ಇರುತ್ತಾನೆ; [ಇಷ್ಟಕೆಯೇ! ನೀನು ಆ ರೂಪದಲ್ಲಿರುವೆ] **ತಸ್ಯ ಶ್ರೋತ್ರಮ್**=ಅವನಿಗೆ ಸಂಬಂಧಿಸಿದ ಶ್ರೋತ್ರೇಂದ್ರಿಯವು; **ಸೌವಮ್**=[ಸುವನಿಗೆ ಸಂಬಂಧಿಸಿದುದಾಗಿ] ಸೌವವಾಗಿದೆ; **ಶರತ್**=ಶರದೃತುವು; **ಶ್ರೌತ್ರೀ**=ಶ್ರೌತ್ರಿಯೆನಿಸಿದೆ; **ಅನುಷ್ಟುಪ್**=ಅನುಷ್ಟುಪ್ ಛಂದಸ್ಸು; **ಶಾರದೀ**=ಶರತ್ಸಂಬಂಧಿಯಾಗಿದೆ; **ಅನುಷ್ಟುಭಃ**=ಅನುಷ್ಟುಪ್ ಛಂದಸ್ಸಿನಿಂದ; **ಸ್ವಾರಮ್**=ಸ್ವಾರವೆಂಬ ಸಾಮವಿಶೇಷವೂ; **ಸ್ವಾರಾತ್**=ಸ್ವಾರಸಾಮದಿಂದ; **ಮಂಥೀ**=ಮಂಥಿಗ್ರಹವೂ; **ಮಂಥಿನಃ**=ಮಂಥಿಗ್ರಹದಿಂದ; **ಏಕವಿಗ್ಂಶಃ**=ಏಕವಿಂಶಸ್ತೋಮವೂ;

---

ಈ ರೀತಿ ಸ್ತೋತ್ರ ಮಾಡಿ ಪಶ್ಚಿಮದಿಕ್ಕಿನಲ್ಲಿ ಪ್ರಾಣಭೃದಿಷ್ಟಕೆಗಳನ್ನು ಉಪಧಾನ

---

* ಸುವಃಶಬ್ದದ ವಿಶೇಷಣ. ಆದುದರಿಂದ ನಪುಂಸಕಲಿಂಗದಲ್ಲಿದೆ.

ಏಕವಿಗ್ಂಶಾದ್ವೈರಾಜಂ ವೈರಾಜಾಜ್ಜಮದಗ್ನಿರ್ ಋಷಿಃ

ಪ್ರಜಾಪತಿಗೃಹೀತಯಾ[..ಗೃಹೀತಯಾ(೩)]ತ್ವಯಾ

ಶ್ರೋತ್ರಂ ಗೃಹ್ಣಾಮಿ ಪ್ರಜಾಭ್ಯ ಇಯಮುಪರಿ ಮತಿಸ್ತಸ್ಯೈ

---

ಏಕವಿಗ್ಂಶಾದಿತ್ಯೇಕ-ವಿಗ್ಂಶಾತ್ । ವೈರಾಜಮ್ । ವೈರಾಜಾತ್ । ಜಮದಗ್ನಿಃ । ಋಷಿಃ । ಪ್ರಜಾಪತಿಗೃಹೀತಯೇತಿ ಪ್ರಜಾಪತಿ-ಗೃಹೀತಯಾ । (೩) । ತ್ವಯಾ । ಶ್ರೋತ್ರಮ್ । ಗೃಹ್ಣಾಮಿ । ಪ್ರಜಾಭ್ಯ ಇತಿ ಪ್ರ-ಜಾಭ್ಯಃ । ಇಯಮ್ । ಉಪರಿ । ಮತಿಃ । ತಸ್ಯೈ ।

---

| ಮಂತ್ರ | ವಿನಿಯೋಗ |
|---|---|
| ಇಯಮುಪರಿ ಮತಿಃ...ವಾಚಂ... ಪ್ರಜಾಭ್ಯಃ ॥ | ಮಧ್ಯಭಾಗದಲ್ಲಿ ಉಪಧಾನ ಮಾಡುವ ಹತ್ತು ಇಷ್ಟಕೆಗಳ ಉಪಧಾನಮಂತ್ರಗಳು. |

---

**ಏಕವಿಗ್ಂಶಾತ್**=ಏಕವಿಂಶಸ್ತೋಮದಿಂದ; **ವೈರಾಜಮ್**=ವೈರಾಜಸಾಮವೂ; **ವೈರಾಜಾತ್**=ವೈರಾಜಸಾಮದಿಂದ; **ಜಮದಗ್ನಿಃ ಋಷಿಃ**=ಜಮದಗ್ನಿಮುನಿಯೂ [ಜನಿಸಿದಂತೆ ಇರುತ್ತಾರೆ] [ಹೇ! ಇಷ್ಟಕೆಯೇ!] **ಪ್ರಜಾಪತಿಗೃಹೀತಯಾ**=ಪ್ರಜಾಪತಿಯಿಂದ ಸ್ವೀಕರಿಸಲ್ಪಟ್ಟ; **ತ್ವಯಾ**=ನಿನ್ನಿಂದ; **ಪ್ರಜಾಭ್ಯಃ**=ಪ್ರಜೆಗಳಿಗಾಗಿ; **ಶ್ರೋತ್ರಮ್**=ಶ್ರೋತ್ರರೂಪಳಾದ ನಿನ್ನನ್ನು; **ಗೃಹ್ಣಾಮಿ**=ತೆಗೆದುಕೊಳ್ಳುತ್ತೇನೆ/ಉಪಧಾನ ಮಾಡುತ್ತೇನೆ. 🔔 **ಇಯಮ್ ಮತಿಃ**=[ವಿಶ್ವವೆಲ್ಲವನ್ನೂ ತಿಳಿಯುವ] ಮತಿಶಬ್ದವಾಚ್ಯನಾದ ಪ್ರಜಾಪತಿಯು; **ಉಪರಿ**=ಮೇಲ್ಭಾಗದಲ್ಲಿ/ಮಧ್ಯದಲ್ಲಿ [ಇರುತ್ತಾನೆ] [ಇಷ್ಟಕೆಯೇ! ನೀನು ಆ ರೂಪದಲ್ಲಿರುವೆ] **ತಸ್ಯೈ ವಾಕ್**=ಅವನಿಗೆ ಸಂಬಂಧಿಸಿದ ವಾಕ್ಕು;

---

**ಮಾಡಬೇಕು.**

**ವಾಙ್ಮಾತೀ ಹೇಮಂತೋ ವಾಚ್ಯಾಯನಃ ಪಂಕ್ತಿರ್**

**ಹೈಮಂತೀ ಪಂಕ್ತ್ಯೈ ನಿಧನವನ್ನಿಧನವತ ಆಗ್ರಯಣ**

**ಆಗ್ರಯಣಾತ್ತ್ರಿಣವತ್ರಯಸ್ತ್ರಿಗ್ಂಶೌ**

**ತ್ರಿಣವತ್ರಯಸ್ತ್ರಿಗ್ಂಶಾಭ್ಯಾಗ್ಂ ಶಾಕ್ವರರೈವತೇ**

---

ವಾಕ್ । ಮಾತೀ । ಹೇಮಂತಃ । ವಾಚ್ಯಾಯನಃ । ಪಂಕ್ತಿಃ । ಹೈಮಂತೀ । ಪಂಕ್ತ್ಯೈ । ನಿಧನವದಿತಿ ನಿಧನ-ವತ್ । ನಿಧನವತ ಇತಿ ನಿಧನ-ವತಃ । ಆಗ್ರಯಣಃ । ಆಗ್ರಯಣಾತ್ । ತ್ರಿಣವತ್ರಯಸ್ತ್ರಿಗ್ಂಶಾವಿತಿ ತ್ರಿಣವ-ತ್ರಯಸ್ತ್ರಿಗ್ಂಶೌ । ತ್ರಿಣವ-ತ್ರಯಸ್ತ್ರಿಗ್ಂಶಾಭ್ಯಾಮಿತಿ ತ್ರಿಣವ-ತ್ರಯಸ್ತ್ರಿಗ್ಂಶಾಭ್ಯಾಮ್ । ಶಾಕ್ವರರೈವತೇ ಇತಿ ಶಾಕ್ವರ-ರೈವತೇ ।

---

**ಮಾತೀ**=ಮಾತಿ[ಮತಿಗೆ ಸಂಬಂಧಿಸಿದುದರಿಂದ]ಯೆನಿಸಿದೆ; **ಹೇಮಂತಃ**=ಹೇಮಂತ ಋತುವೂ; **ವಾಚ್ಯಾಯನಃ**=ವಾಕ್ಕಿಗೆ ಸಂಬಂಧಿಸಿದವನಾಗಿ; ವಾಚ್ಯಾಯನನೆನಿಸಿದ್ದಾನೆ; **ಪಂಕ್ತಿಃ**=ಪಂಕ್ತಿಛಂದಸ್ಸು; **ಹೈಮಂತೀ**=ಹೇಮಂತ ಋತುವಿಗೆ ಸಂಬಂಧಿಸಿದುದಾಗಿದೆ; **ಪಂಕ್ತ್ಯೈ**=ಪಂಕ್ತಿಛಂದಸ್ಸಿನಿಂದ; **ನಿಧನವತ್**=ನಿಧನವತ್ತೆಂಬ ಸಾಮವೂ; **ನಿಧನವತಃ**=ನಿಧನವತ್ಸಾಮದಿಂದ; **ಆಗ್ರಯಣಃ**=ಆಗ್ರಯಣ ಗ್ರಹವೂ; **ಆಗ್ರಯಣಾತ್**=ಆಗ್ರಯಣಗ್ರಹದಿಂದ; **ತ್ರಿಣವತ್ರಯಸ್ತ್ರಿಗ್ಂಶೌ**=ತ್ರಿಣವ ಮತ್ತು ತ್ರಯಸ್ತ್ರಿಗ್ಂಶ ಸ್ತೋಮಗಳೂ; **ತ್ರಿಣವತ್ರಯಸ್ತ್ರಿಗ್ಂಶಾಭ್ಯಾಮ್**=ತ್ರಿಣವ ಮತ್ತು ತ್ರಯಸ್ತ್ರಿಂಶ ಸ್ತೋಮಗಳಿಂದ; **ಶಾಕ್ವರರೈವತೇ**=ಶಾಕ್ವರ-ರೈವತಸಾಮಗಳೂ;

---

**ಉತ್ತರದಿಕ್ಕಿನಲ್ಲಿ ಜಗತ್ತಿಗೆ ಪ್ರೇರಣೆ ನೀಡುವವನಾದುದರಿಂದ 'ಸುವಃ' ಎಂಬ ಹೆಸರಿನ ಪ್ರಜಾಪತಿಯು ಇರುತ್ತಾನೆ. ಇಲ್ಲಿ ಇಷ್ಟಕೆಯನ್ನು ಶರದೃತು-ಅನುಷ್ಟುಪ್ಛಂದಸ್ಸು-**

॥ಶಾಕ್ವರರೈವತಾಭ್ಯಾಂ ವಿಶ್ವಕರ್ಮರ್ಷಿಃ

ಪ್ರಜಾಪತಿಗೃಹೀತಯಾ ತ್ವಯಾ ವಾಚಂ ಗೃಹ್ಣಾಮಿ

ಪ್ರಜಾಭ್ಯಃ ॥ ೪-2 ॥

[ತ್ವಯಾ ಮನೋ ಜಮದಗ್ನಿರ್ ಋಷಿಃ ಪ್ರಜಾಪತಿಗೃಹೀತಯಾ ತ್ರಿಂಶಚ್ಚ ॥]

---

ಶಾಕ್ವರರೈವತಾಭ್ಯಾಮಿತಿ ಶಾಕ್ವರ-ರೈವತಾಭ್ಯಾಮ್ । ವಿಶ್ವಕರ್ಮೇತಿ ವಿಶ್ವ-ಕರ್ಮಾ । ಋಷಿಃ । ಪ್ರಜಾಪತಿಗೃಹೀತಯೇತಿ ಪ್ರಜಾಪತಿ-ಗೃಹೀತಯಾ । ತ್ವಯಾ । ವಾಚಮ್ । ಗೃಹ್ಣಾಮಿ । ಪ್ರಜಾಭ್ಯ ಇತಿ ಪ್ರ-ಜಾಭ್ಯಃ ॥ (೪) ॥

---

**ಶಾಕ್ವರರೈವತಾಭ್ಯಾಮ್**=ಶಾಕ್ವರ-ರೈವತಸಾಮಗಳಿಂದ; **ವಿಶ್ವಕರ್ಮಾ ಋಷಿಃ**= ವಿಶ್ವಕರ್ಮಋಷಿಯೂ [ಜನಿಸಿದವರಂತೆ ಇರುತ್ತಾರೆ] [ಹೇ! ಇಷ್ಟಕೆಯೇ!] **ಪ್ರಜಾಪತಿ ಗೃಹೀತಯಾ**=ಪ್ರಜಾಪತಿಯಿಂದ ಸ್ವೀಕೃತಳಾದ; **ತ್ವಯಾ**=ನಿನ್ನಿಂದ; **ಪ್ರಜಾಭ್ಯಃ**= ಪ್ರಜೆಗಳಿಗಾಗಿ; **ವಾಚಮ್ ಗೃಹ್ಣಾಮಿ**=ವಾಗ್ರೂಪಳಾದ ನಿನ್ನನ್ನು ಗ್ರಹಿಸುತ್ತೇನೆ/ ಉಪಧಾನ ಮಾಡುತ್ತೇನೆ.

---

ಸ್ವಾರಸಾಮ-ಮಂಥಿಗ್ರಹ-ಏಕವಿಂಶಸ್ತೋಮ-ವೈರಾಜಸಾಮ-ಜಮದಗ್ನಿ ಋಷಿಯ ರೂಪದಿಂದ ಸ್ತುತಿಸಲಾಗಿದೆ.

ಈ ರೀತಿ ಸ್ತುತಿಸಿ ಉತ್ತರದಿಕ್ಕಿನಲ್ಲಿ ಪ್ರಾಣಭೃದಿಷ್ಟಕೆಗಳ ಉಪಧಾನ ಮಾಡಬೇಕು.

ಮೇಲ್ಭಾಗದಲ್ಲಿ/ಮಧ್ಯದಲ್ಲಿ ಎಲ್ಲವನ್ನೂ ತಿಳಿದಿರುವುದರಿಂದ ಮತಿಯೆಂಬ ಪ್ರಜಾಪತಿಯು ಇರುತ್ತಾನೆ.

ಇಲ್ಲಿ ಇಷ್ಟಕೆಯನ್ನು ಹೇಮಂತಋತು-ಪಂಕ್ತಿಛಂದಸ್ಸು-ನಿಧನವತ್ಸಾಮ-ಆಗ್ರಯಣ ಗ್ರಹ-ತ್ರಿಣವ-ತ್ರಯಸ್ತ್ರಿಂಶಸ್ತೋಮಗಳು-ಶಾಕ್ವರರೈವತಸಾಮ-ವಿಶ್ವಕರ್ಮಋಷಿಯ ರೂಪದಲ್ಲಿ ಸ್ತುತಿಸಲಾಗಿದೆ.

ಈ ರೀತಿ ಸ್ತುತಿಸಿ ಮಧ್ಯಭಾಗದಲ್ಲಿ ಪ್ರಾಣಭೃದಿಷ್ಟಕೆಗಳನ್ನು ಉಪಧಾನ ಮಾಡಬೇಕು.

ಹೀಗೆ ಪೂರ್ವ-ದಕ್ಷಿಣ-ಪಶ್ಚಿಮ-ಉತ್ತರ ಹಾಗೂ ಮಧ್ಯಭಾಗದಲ್ಲಿ ದಿಕ್ಕಿಗೆ ಹತ್ತರಂತೆ ಐವತ್ತು ಇಷ್ಟಕೆಗಳ ಉಪಧಾನವಾಗುತ್ತದೆ.

---

## ವಿನಿಯೋಗಸಂಗ್ರಹ

**5-(50) ಅಯಂ ಪ್ರಾಣಭೃತೋ ದಧ್ಯಾತ್ ಪಂಚಾಶತ್ ಪಂಚಮಂತ್ರಕೈಃ ||**

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-5

ಆವೃತ್ತಿಯಿಂದ ಉಂಟಾಗುವ ಮಂತ್ರಗಳ ಸಂಖ್ಯೆ-50

---

## ಅನುವಾಕದ ವಿಶೇಷವಿಷಯಗಳು

### ಅ) ಮೀಮಾಂಸಾ

೧) **'ಪ್ರಾಣಭೃತ ಉಪದಧಾತಿ'** ಎಂಬುದಕ್ಕೆ ಅನ್ವಯವು ಎಲ್ಲಿ? **[ಜೈ. ಸೂ. 1.4]**

**'ಪ್ರಾಣಭೃತ ಉಪದಧಾತಿ'** ಎಂಬ ವಿಧಿವಾಕ್ಯದಲ್ಲಿ **'ಪ್ರಾಣಭೃತಃ'** ಎಂಬ ಶಬ್ದವಿದೆ. **'ಅಯಂ ಪುರೋ ಭುವಃ...'** ಎಂಬ ಈ ಅನುವಾಕದಲ್ಲಿ ಪ್ರಾಣಶಬ್ದವು ಮೊದಲನೆಯ ಮಂತ್ರದಲ್ಲಿ ಮಾತ್ರ ಇರುವುದರಿಂದ ಪ್ರಾಣಭೃದಿಷ್ಟಕೋಪಧಾನವು ಮೊದಲನೆಯ ಮಂತ್ರಕ್ಕೆ ಮಾತ್ರ ಅನ್ವಯಿಸುತ್ತದೆಯೇ ಅಥವಾ ಈ ಅನುವಾಕದ ಐದೂ ಮಂತ್ರಗಳಿಗೂ ಅನ್ವಯಿಸುತ್ತದೆಯೇ? ಎಂಬುದು ಇಲ್ಲಿನ **ಸಂಶಯ.**

ಮೊದಲನೆಯ ಮಂತ್ರದಲ್ಲಿ ಮಾತ್ರ ಪ್ರಾಣಶಬ್ದವಿರುವುದರಿಂದ ಆ ಮಂತ್ರಕ್ಕೆ ಮಾತ್ರ **'ಪ್ರಾಣಭೃತ ಉಪದಧಾತಿ'** ಎಂಬುದು ವಿಧಿವಾಕ್ಯವಾಗುತ್ತದೆ ಎಂದು ಇಲ್ಲಿನ **ಪೂರ್ವಪಕ್ಷ.**

**'ಛತ್ರಿಣೋ ಯಾಂತಿ'** ಎಂಬ ವಾಕ್ಯವನ್ನು ಛತ್ರವನ್ನು ಹಿಡಿದು ನಡೆಯುತ್ತಿರುವವರನ್ನು ತಿಳಿಸಲು ಬಳಸುವಂತೆಯೇ ಛತ್ರವನ್ನು ಹಿಡಿಯದವರು ಮತ್ತು ಹಿಡಿದವರು ನಡೆಯುತ್ತಿರುವಾಗಲೂ ಬಳಸುತ್ತಾರೆ. ಹಾಗೆಯೇ **'ಪ್ರಾಣಭೃತ ಉಪದಧಾತಿ'** ಎಂಬ ವಿಧಿವಾಕ್ಯವು ಪ್ರಾಣಶಬ್ದವನ್ನು ಒಳಗೊಂಡಿರುವ ಮತ್ತು ಒಳಗೊಂಡಿರದ ಮಂತ್ರಗಳಿಗೂ ಅನ್ವಯಿಸುತ್ತದೆ. ಅಲ್ಲದೆ **'ರೇತಸ್ಯೇವ ಪ್ರಾಣಾನ್ ದಧಾತಿ'** ಎಂಬ **ಅರ್ಥವಾದ**

ವಾಕ್ಯವು ಇರುವುದರಿಂದ ಅದಕ್ಕೆ ಅನುಗುಣವಾಗಿಯೂ ಎಲ್ಲ ಮಂತ್ರಗಳಿಗೂ ಈ ವಿಧಿವಾಕ್ಯವನ್ನು ಅನ್ವಯಿಸಬೇಕು. ಇದು ಇಲ್ಲಿನ ಸಿದ್ಧಾಂತ.



## ॥ ತೃತೀಯೋಽನುವಾಕಃ ॥

ಪ್ರಾಚೀ ದಿಶಾಂ ವಸಂತ ಋತೂನಾಮಗ್ನಿರ್ದೇವತಾ ಬ್ರಹ್ಮ ದ್ರವಿಣಂ

---

ಪ್ರಾಚೀ । ದಿಶಾಮ್ । ವಸಂತಃ । ಋತೂನಾಮ್ । ಅಗ್ನಿಃ । ದೇವತಾ । ಬ್ರಹ್ಮ । ದ್ರವಿಣಮ್ ।

---

ಎರಡನೆಯ ಅನುವಾಕದಲ್ಲಿ ಪ್ರಾಣಭೃದಿಷ್ಟಕೆಗಳ ಉಪಧಾನಮಂತ್ರಗಳು ಹೇಳಲ್ಪಟ್ಟಿವೆ. ಈ ಮೂರನೆಯ ಅನುವಾಕದಲ್ಲಿ ಅಪಾನಭೃದಿಷ್ಟಕೆಗಳ ಉಪಧಾನಮಂತ್ರಗಳು ಹೇಳಲ್ಪಟ್ಟಿವೆ. ಪ್ರಾಣಭೃದಿಷ್ಟಕೆಗಳಂತೆಯೇ ಇವೂ ಐವತ್ತು ಇರುತ್ತವೆ.

---

| ಮಂತ್ರ | ವಿನಿಯೋಗ |
| --- | --- |
| ಪ್ರಾಚೀ ದಿಶಾಂ...ಸಾನಗ ಋಷಿಃ ॥ | ಪೂರ್ವದಿಕ್ಕಿನಲ್ಲಿ ಉಪಧಾನ ಮಾಡುವ ಹತ್ತು ಅಪಾನಭೃದಿಷ್ಟಕೆಗಳ ಉಪಧಾನಮಂತ್ರಗಳು. |

---

[ಹೇ! ಇಷ್ಟಕೆಯೇ!][ನೀನು] **ದಿಶಾಮ್**=ದಿಕ್ಕುಗಳ ಪೈಕಿ; **ಪ್ರಾಚೀ**=ಪೂರ್ವದಿಕ್ಕಿನ ಸ್ವರೂಪಳಾಗಿದ್ದೀಯೆ; **ಋತೂನಾಮ್**=ಋತುಗಳಲ್ಲಿ; **ವಸಂತಃ**=ವಸಂತ ಋತುವಿನ ಸ್ವರೂಪಳಾಗಿದ್ದೀಯೆ; [ದೇವತೆಗಳಲ್ಲಿ] **ಅಗ್ನಿಃ ದೇವತಾ**=ಅಗ್ನಿದೇವತಾರೂಪಳಾಗಿದ್ದೀಯೆ; [ಧನಗಳಲ್ಲಿ] **ಬ್ರಹ್ಮ ದ್ರವಿಣಮ್**=ಬ್ರಾಹ್ಮಣ್ಯವೆಂಬ ಧನರೂಪಳಾಗಿದ್ದೀಯೆ; [ಯಜ್ಞಸಾಧಕವಾದ ಸ್ತೋಮಗಳಲ್ಲಿ]

# ತ್ರಿವೃಥ್ಸ್ತೋಮಸ್ಸ ಉ ಪಂಚದಶವರ್ತನಿಸ್ತ್ರ್ಯವಿರ್ವಯಃ ಕೃತಮಯಾನಾಂ ಪುರೋವಾತೋ ವಾತಃ ಸಾನಗ ಋಷಿರ್ದಕ್ಷಿಣಾ ದಿಶಾಂ

---

ತ್ರಿವೃದಿತಿ ತ್ರಿ-ವೃತ್ । ಸ್ತೋಮಃ । ಸಃ । ಉ । ಪಂಚದಶವರ್ತನಿರಿತಿ ಪಂಚದಶ-ವರ್ತನಿಃ । ತ್ರ್ಯವಿರಿತಿ ತ್ರಿ-ಅವಿಃ । ವಯಃ । ಕೃತಮ್ । ಅಯಾನಾಮ್ । ಪುರೋವಾತ ಇತಿ ಪುರಃ-ವಾತಃ । ವಾತಃ । ಸಾನಗಃ । ಋಷಿಃ । ದಕ್ಷಿಣಾ । ದಿಶಾಮ್ ।

---

| ಮಂತ್ರ | ವಿನಿಯೋಗ |
|---|---|
| ದಕ್ಷಿಣಾ...ಸನಾತನ ಋಷಿಃ ॥ | ದಕ್ಷಿಣಭಾಗದ ಅಪಾನಭೃದಿಷ್ಟಕೆಗಳ ಉಪಧಾನಮಂತ್ರಗಳು. |

---

**ತ್ರಿವೃತ್ ಸ್ತೋಮಃ**=ತ್ರಿವೃತ್ಸ್ತೋಮರೂಪಳಾಗಿದ್ದೀಯೆ; **ಸಃ ಉ**=[ಆ ಬಹಿಷ್ಪವ ಮಾನಸ್ತೋತ್ರದ] ತ್ರಿವೃತ್ ಸ್ತೋಮವು; **ಪಂಚದಶವರ್ತನಿಃ**=[ಆಜ್ಯಸ್ತೋತ್ರದ] ಪಂಚದಶಸ್ತೋಮಕ್ಕೆ ಪ್ರವರ್ತಕವಾಗಿದೆ; [ನೀನು ಅಂತಹ ಪಂಚದಶ ಸ್ತೋಮಕ್ಕೆ ಪ್ರವರ್ತಕಳು] [ವಯಸ್ಸುಗಳಲ್ಲಿ] ***ತ್ರ್ಯವಿಃ ವಯಃ**=ಕುರಿಗಳ ಮೂರು ವಯಸ್ಸಾದ ಒಂದೂವರೆ ವರ್ಷದ ರೂಪಳು. **ಅಯಾನಾಮ್**=ಯುಗಗಳ ಪೈಕಿ; **ಕೃತಮ್**= ಕೃತಯುಗರೂಪಳು; [ಬೀಸುವ ಗಾಳಿಗಳಲ್ಲಿ] **ಪುರೋವಾತಃ ವಾತಃ**=ಪೂರ್ವದಿಕ್ಕಿನಿಂದ ಬೀಸುವ ಪುರೋವಾತರೂಪಳಾಗಿದ್ದೀಯೆ; [ಋಷಿಗಳಲ್ಲಿ] **ಸಾನಗಃ ಋಷಿಃ**= ಸಾನಗ ಋಷಿರೂಪಳಾಗಿರುವೆ [ಇಂತಹ ನಿನ್ನನ್ನು ಉಪಧಾನ ಮಾಡುತ್ತೇನೆ]. 🔔 [ಹೇ! ಇಷ್ಟಕೆಯೇ!] **ದಿಶಾಮ್**=ದಿಕ್ಕುಗಳ ಪೈಕಿ; **ದಕ್ಷಿಣಾ**= ದಕ್ಷಿಣದಿಗ್ರೂಪಳಾಗಿದ್ದೀಯೆ;

---

* ಕುರಿಯ ಜಾತಿಯಲ್ಲಿ ಪ್ರಾಯಃ ಗರ್ಭ ಧರಿಸಿದ ನಂತರ ಆರನೆಯ ತಿಂಗಳು ತುಂಬಿದಾಗ ಮರಿಯು ಹುಟ್ಟುತ್ತದೆ. ತ್ರಿ+ಅವಿ=ಮೂರಾವೃತ್ತಿಯ ಅವಿ=ಆರು ತಿಂಗಳು=ಹದಿನೆಂಟು ತಿಂಗಳು=1½ ವರ್ಷ ಎಂದು ಶ್ರುತಿಯ ತಾತ್ಪರ್ಯ.

ಗ್ರೀಷ್ಮ ಋತೂನಾಮಿಂದ್ರೋ ದೇವತಾ ಕ್ಷತ್ರಂ ದ್ರವಿಣಂ ಪಂಚದಶಃ ಸ್ತೋಮಸ್ಸ ಉ ಸಪ್ತದಶವರ್ತನಿರ್ದಿತ್ಯವಾಡ್ವಯ ಸ್ತ್ರೇತಾಽಯಾನಾಂ ದಕ್ಷಿಣಾದ್ವಾತೋ ವಾತಃ ಸನಾತನ ಋಷಿಃ

---

ಗ್ರೀಷ್ಮಃ । ಋತೂನಾಮ್ । ಇಂದ್ರಃ । ದೇವತಾ । ಕ್ಷತ್ರಮ್ । ದ್ರವಿಣಮ್ । ಪಂಚದಶ ಇತಿ ಪಂಚ–ದಶಃ । ಸ್ತೋಮಃ । ಸಃ । ಉ । ಸಪ್ತದಶವರ್ತನಿರಿತಿ ಸಪ್ತದಶ–ವರ್ತನಿಃ । ದಿತ್ಯವಾಡಿತಿ ದಿತ್ಯ–ವಾಟ್ । ವಯಃ । ತ್ರೇತಾ । ಅಯಾನಾಮ್ । ದಕ್ಷಿಣಾದ್ವಾತ ಇತಿ ದಕ್ಷಿಣಾತ್–ವಾತಃ । ವಾತಃ । ಸನಾತನ ಇತಿ ಸನಾ–ತನಃ । ಋಷಿಃ ।

---

**ಋತೂನಾಮ್**=ಋತುಗಳ ಪೈಕಿ; **ಗ್ರೀಷ್ಮಃ**=ಗ್ರೀಷ್ಮಸ್ವರೂಪಳಾಗಿದ್ದೀಯೆ; [ದೇವತೆಗಳಲ್ಲಿ] **ಇಂದ್ರಃ ದೇವತಾ**=ಇಂದ್ರದೇವತಾಸ್ವರೂಪಳಾಗಿದ್ದೀಯೆ; [ಧನಗಳಲ್ಲಿ] **ಕ್ಷತ್ರಮ್ ದ್ರವಿಣಮ್**=ಕ್ಷಾತ್ರರೂಪಧನಳಾಗಿದ್ದೀಯೆ; **ಪಂಚದಶಃ ಸ್ತೋಮಃ**=[ಸ್ತೋತ್ರಸಾಧಕವಾದ ಸ್ತೋಮಗಳಲ್ಲಿ] ಪಂಚದಶಸ್ತೋಮರೂಪಳಾಗಿದ್ದೀಯೆ; **ಸಃ ಉ**=ಮಾಧ್ಯಂದಿನದ ಪಂಚದಶಸ್ತೋಮವು; **ಸಪ್ತದಶವರ್ತನಿಃ**=[ಪೃಷ್ಠಸ್ತೋತ್ರಗಳಲ್ಲಿ] ಸಪ್ತದಶಸ್ತೋಮಕ್ಕೆ ಪ್ರವರ್ತಕವಾಗಿದೆ. [ನೀನು ಅಂತಹ ಪ್ರವರ್ತನಶಕ್ತಿಯುಳ್ಳವಳಾಗಿ ಇರುತ್ತೀಯೆ] [ವಯಸ್ಸುಗಳಲ್ಲಿ] **ದಿತ್ಯವಾಟ್ ವಯಃ**=ಎರಡು ವರ್ಷದ ಸ್ವರೂಪಳು. **ಅಯಾನಾಮ್**=ಯುಗಗಳಲ್ಲಿ; **ತ್ರೇತಾ**=ತ್ರೇತಾಯುಗಸ್ವರೂಪಳು; [ಬೀಸುವ ಗಾಳಿಗಳಲ್ಲಿ] **ದಕ್ಷಿಣಾದ್ವಾತಃ ವಾತಃ**=ದಕ್ಷಿಣದಿಕ್ಕಿನಿಂದ ಬೀಸುವ ವಾತರೂಪಳಾಗಿದ್ದೀಯೆ; **ಸನಾತನಃ ಋಷಿಃ**=[ಋಷಿಗಳಲ್ಲಿ] ಸನಾತನ ಋಷಿಸ್ವರೂಪಳಾಗಿದ್ದೀಯೆ; [ಇಂತಹ ನಿನ್ನನ್ನು ಉಪಧಾನ ಮಾಡುತ್ತೇನೆ]

---

ಈ ಅಪಾನಭೃದಿಷ್ಟಕೆಗಳನ್ನು ಪೂರ್ವ–ದಕ್ಷಿಣ–ಪಶ್ಚಿಮ–ಉತ್ತರ ಹಾಗೂ ಮಧ್ಯಭಾಗ

ಪ್ರತೀಚೀ ದಿಶಾಂ ವರ್ಷಾ ಋತೂನಾಂ ವಿಶ್ವೇ ದೇವಾ ದೇವತಾ ವಿಡ್ದ್ರ[ವಿಟ್(೫)ದ್ರವಿಣಗ್‌ಂ]ವಿಣಗ್‌ಂ ಸಪ್ತದಶಃ ಸ್ತೋಮಃ ಸ ಉ ವೇಕವಿಗ್‌ಂಶವರ್ತನಿಸ್ತ್ರಿವತ್ಸೋ ವಯೋ

---

ಪ್ರತೀಚೀ । ದಿಶಾಮ್ । ವರ್ಷಾಃ । ಋತೂನಾಮ್ । ವಿಶ್ವೇ । ದೇವಾಃ । ದೇವತಾ । ವಿಟ್ ।(೫)। ದ್ರವಿಣಮ್ । ಸಪ್ತದಶ ಇತಿ ಸಪ್ತ-ದಶಃ । ಸ್ತೋಮಃ । ಸಃ । ಉ । ಏಕವಿಗ್‌ಂಶವರ್ತನಿರಿತ್ಯೇಕವಿಗ್‌ಂಶ-ವರ್ತನಿಃ । ತ್ರಿವತ್ಸ ಇತಿ ತ್ರಿ-ವತ್ಸಃ । ವಯಃ ।

---

| ಮಂತ್ರ | ವಿನಿಯೋಗ |
|---|---|
| ಪ್ರತೀಚೀ ದಿಶಾಂ...ಅಹಭೂನ ಋಷಿಃ ॥ | ಪಶ್ಚಿಮದಿಕ್ಕಿನ ಅಪಾನಭೃದಿಷ್ಟಕೆಗಳ ಉಪಧಾನಮಂತ್ರಗಳು. |

---

▲ [ಎಲೈ! ಇಷ್ಟಕೆಯೇ!] [ನೀನು] **ದಿಶಾಮ್**=ದಿಕ್ಕುಗಳಲ್ಲಿ; **ಪ್ರತೀಚೀ**=ಪಶ್ಚಿಮ ದಿಗ್ರೂಪಳಾಗಿರುವೆ; **ಋತೂನಾಮ್**=ಋತುಗಳ ಪೈಕಿ; **ವರ್ಷಾಃ**=ವರ್ಷರ್ತುರೂಪ ಳಾಗಿದ್ದೀಯೆ. [ದೇವತೆಗಳ ಪೈಕಿ] **ವಿಶ್ವೇ ದೇವಾಃ ದೇವತಾ**=ವಿಶ್ವೇದೇವದೇವತಾ ಸ್ವರೂಪಳಾಗಿದ್ದೀಯೆ; [ಧನಗಳಲ್ಲಿ] **ವಿಟ್ ದ್ರವಿಣಮ್**=ಶ್ರೇಷ್ಠವೈಶ್ಯತ್ವರೂಪಳಾಗಿ ದ್ದೀಯೆ; [ಸ್ತೋಮಗಳಲ್ಲಿ] **ಸಪ್ತದಶಃ ಸ್ತೋಮಃ**=ಸಪ್ತದಶಸ್ತೋಮರೂಪಳು; **ಸಃ ಉ**=ಆ ಸಪ್ತದಶಸ್ತೋಮವೇ; **ಏಕವಿಗ್‌ಂಶವರ್ತನಿಃ**=ಏಕವಿಂಶಸ್ತೋಮಪ್ರವರ್ತ ಕವಾಗಿದೆ. [ನೀನು ಅಂತಹ ಪ್ರವರ್ತನಶಕ್ತಿಯುಳ್ಳವಳಾಗಿರುವೆ]; [ವಯಸ್ಸುಗಳಲ್ಲಿ] **ತ್ರಿವತ್ಸಃ ವಯಃ**=ಮೂರು ವರ್ಷಗಳ ವಯೋರೂಪಳಾಗಿರುತ್ತೀಯೆ.

---

ದಲ್ಲಿ ಉಪಧಾನ ಮಾಡಬೇಕು. ಇವು ಒಟ್ಟು ಐವತ್ತಾಗುತ್ತವೆ.

ಇಲ್ಲಿಯ ಮಂತ್ರಗಳಲ್ಲಿ ಇಷ್ಟಕೆಯನ್ನು ದಿಕ್ಕು-ಋತು-ದೇವತೆ-ಸಂಪತ್ತು-ಸ್ತೋಮ-ಸ್ತೋಮಪ್ರವರ್ತಕ-ವಯಸ್ಸು-ಯುಗ-ವಾತ ಹಾಗೂ ಋಷಿರೂಪದಲ್ಲಿ ಸ್ತುತಿಸಲಾಗಿದೆ.

**ದ್ವಾಪರೋಽಯಾನಾಂ ಪಶ್ಚಾದ್ವಾತೋ ವಾತೋಽಹಭೂನ**

**ಋಷಿರುದೀಚೀ ದಿಶಾಗ್ಂ ಶರದೃತೂನಾಂ ಮಿತ್ರಾವರುಣೌ**

**ದೇವತಾ ಪುಷ್ಟಂ ದ್ರವಿಣಮೇಕವಿಗ್ಂಶಃ ಸ್ತೋಮಃ**

---

ದ್ವಾಪರಃ । ಅಯಾನಾಮ್ । ಪಶ್ಚಾದ್ವಾತ ಇತಿ ಪಶ್ಚಾತ್-ವಾತಃ । ವಾತಃ ।

ಅಹಭೂನಃ । ಋಷಿಃ । ಉದೀಚೀ । ದಿಶಾಮ್ । ಶರತ್ । ಋತೂನಾಮ್ ।

ಮಿತ್ರಾವರುಣಾವಿತಿ ಮಿತ್ರಾ-ವರುಣೌ । ದೇವತಾ । ಪುಷ್ಟಮ್ । ದ್ರವಿಣಮ್ ।

ಏಕವಿಗ್ಂಶ ಇತ್ಯೇಕ-ವಿಗ್ಂಶಃ । ಸ್ತೋಮಃ ।

---

| ಮಂತ್ರ | ವಿನಿಯೋಗ |
|---|---|
| **ಉದೀಚೀ ದಿಶಾಂ...ಪ್ರತ್ನ ಋಷಿಃ ॥** | ಉತ್ತರದಿಕ್ಕಿನ ಅಪಾನಭೃದಿಷ್ಟಕೆಗಳ ಉಪಧಾನಮಂತ್ರಗಳು. |

---

**ಅಯಾನಾಮ್**=ಯುಗಗಳಲ್ಲಿ; **ದ್ವಾಪರಃ**=ದ್ವಾಪರಯುಗಸ್ವರೂಪಳಾಗಿದ್ದೀಯೆ; [ಬೀಸುವ ಗಾಳಿಗಳಲ್ಲಿ] **ಪಶ್ಚಾದ್ವಾತಃ ವಾತಃ**=ಪಶ್ಚಿಮದಿಕ್ಕಿನಲ್ಲಿ ಬೀಸುವ ಪಶ್ಚಾದ್ವಾತರೂಪಳು; [ಋಷಿಗಳಲ್ಲಿ] **ಅಹಭೂನಃ ಋಷಿಃ**=ಅಹಭೂನನೆಂಬ ಋಷಿ ಸ್ವರೂಪಳು; [ಇಂತಹ ನಿನ್ನನ್ನು ಉಪಧಾನ ಮಡುತ್ತೇನೆ]. 🔔 [ಎಲ್ಯೆ! ಇಷ್ಟಕೆಯೇ!] [ನೀನು] **ದಿಶಾಮ್**=ದಿಕ್ಕುಗಳ ಪೈಕಿ; **ಉದೀಚೀ**=ಉತ್ತರದಿಗ್ರೂಪಳಾಗಿರುವೆ; **ಋತೂನಾಮ್**=ಋತುಗಳ ಪೈಕಿ; **ಶರತ್**=ಶರದೃತುವಾಗಿರುವೆ; [ದೇವತೆಗಳಲ್ಲಿ] **ಮಿತ್ರಾವರುಣೌ ದೇವತಾ**=ಮಿತ್ರಾವರುಣದೇವತಾಸ್ವರೂಪಳಾಗಿರುವೆ; [ಧನಗಳಲ್ಲಿ] **ಪುಷ್ಟಮ್ ದ್ರವಿಣಮ್**=ವರ್ಣತ್ರಯಪುಷ್ಟಿಕರನಾದ ಶೂದ್ರರೂಪದವಳಾಗಿರುವೆ; **ಏಕವಿಗ್ಂಶಃ ಸ್ತೋಮಃ**=[ಸ್ತೋಮಗಳಲ್ಲಿ]ನೀನು ಏಕವಿಂಶಸ್ತೋಮರೂಪಳಾಗಿರುವೆ;

---

**ಈ ರೀತಿ ಸ್ತುತಿಸಿ ಇಷ್ಟಕೋಪಧಾನವನ್ನು ಮಾಡಬೇಕು.**

**ಸ ಉ ತ್ರಿಣವವರ್ತನಿಸ್ತುರ್ಯವಾಡ್ವಯ ಆಸ್ಕಂದೋಽಯಾನಾ ಮುತ್ತರಾದ್ವಾತೋ ವಾತಃ ಪ್ರತ್ನ ಋಷಿರೂರ್ಧ್ವಾ ದಿಶಾಗ್ಂ**

---

ಸಃ । ಉ । ತ್ರಿಣವವರ್ತನಿರಿತಿ ತ್ರಿಣವ-ವರ್ತನಿಃ । ತುರ್ಯವಾಡಿತಿ ತುರ್ಯ-ವಾಟ್ । ವಯಃ । ಆಸ್ಕಂದ ಇತ್ಯಾ-ಸ್ಕಂದಃ । ಅಯಾನಾಮ್ । ಉತ್ತರಾದ್ವಾತ ಇತ್ಯುತ್ತರಾತ್-ವಾತಃ । ವಾತಃ । ಪ್ರತ್ನಃ । ಋಷಿಃ । ಊರ್ಧ್ವಾ । ದಿಶಾಮ್ ।

---

| ಮಂತ್ರ | ವಿನಿಯೋಗ |
|---|---|
| ಊರ್ಧ್ವಾ ದಿಶಾಂ...ಸುಪರ್ಣ ಋಷಿಃ ॥ | ಮೇಲೆ/ಮಧ್ಯಭಾಗದಲ್ಲಿ ಉಪಧಾನ ಮಾಡುವ ಅಪಾನಭೃದಿಷ್ಟಕೆಗಳ ಮಂತ್ರಗಳು. |

---

**ಸಃ ಉ**=ಆ ಏಕವಿಂಶಸ್ತೋಮವು; **ತ್ರಿಣವವರ್ತನಿಃ**=ತ್ರಿಣವಸ್ತೋಮಪ್ರವರ್ತಕವಾಗಿದೆ. [ನೀನು ಅಂತಹ ಪ್ರವರ್ತಕಳು] ***ತುರ್ಯವಾಟ್ ವಯಃ**=[ವಯಸ್ಸುಗಳಲ್ಲಿ] ಮೂರೂವರೆ ವರ್ಷ ವಯೋರೂಪದವಳಾಗಿದ್ದೀಯೆ; **ಅಯಾನಾಮ್**=ಯುಗಗಳಲ್ಲಿ; ★**ಆಸ್ಕಂದಃ**=ಧರ್ಮಶೋಷಕವಾದ ಕಲಿಯುಗವೇ [ನೀನಾಗಿರುವೆ] [ಬೀಸುವ ಗಾಳಿಗಳಲ್ಲಿ] **ಉತ್ತರಾದ್ವಾತಃ ವಾತಃ**=ಉತ್ತರದಿಕ್ಕಿನಲ್ಲಿ ಬೀಸುವ ಉತ್ತರಾದ್ವಾತರೂಪಳು. **ಪ್ರತ್ನಃ ಋಷಿಃ**=[ಋಷಿಗಳಲ್ಲಿ] ಪ್ರತ್ನಋಷಿಸ್ವರೂಪಳಾಗಿರುವೆ. [ಇಂತಹ ನಿನ್ನನ್ನು ಉಪಧಾನ ಮಾಡುತ್ತೇನೆ]. ▲ [ಎಲೈ! ಇಷ್ಟಕೆಯೇ! ನೀನು] **ದಿಶಾಮ್**=ದಿಕ್ಕುಗಳ ಪೈಕಿ; **ಊರ್ಧ್ವಾ**=ಊರ್ಧ್ವದಿಗ್ರೂಪಳಾಗಿರುವೆ;

ಪೂರ್ವದಿಕ್ಕಿನಲ್ಲಿ ಉಪಧಾನ ಮಾಡುವ ಹತ್ತು ಇಷ್ಟಕೆಗಳನ್ನು ಪೂರ್ವವೇ ಮುಂತಾದ ಸ್ವರೂಪದಲ್ಲಿ ಸ್ತುತಿಸಿ ಉಪಧಾನ ಮಾಡಬೇಕು.

---

* ತುರ್ಯಮ್=ಚತುರ್ಥಂ ಸಂವತ್ಸರೋಪಕ್ರಮಮ್=ನಾಲ್ಕನೆಯ ವರ್ಷದ ಆರಂಭವನ್ನು; ವಹತಿ=ತಂದು ಕೊಡುತ್ತದೆ. ಹೀಗಾಗಿ ತುರ್ಯವಾಟ್=ಮೂರೂವರೆ ವರ್ಷ.

★ಆ=ಸಮಂತಾತ್ ಸ್ಕಂದನಂ=ಶೋಷಣಂ ಧರ್ಮಸ್ಯ ಯಸ್ಮಿನ್=ಯಾವ ಕಾಲದಲ್ಲಿ ಧರ್ಮಕ್ಕೆ ಸರ್ವತೋಮುಖವಾದ ಹಿನ್ನಡೆಯಿರುತ್ತದೆಯೋ ಆ ಕಾಲ ಆಸ್ಕಂದ=ಕಲಿಯುಗ.

ಹೇಮಂತಶಿಶಿರಾವೃತೂನಾಂ ಬೃಹಸ್ಪತಿರ್ದೇವತಾ ವರ್ಚೋ

ದ್ರವಿಣಂ ತ್ರಿಣವಃ ಸ್ತೋಮಃ ಸ ಉ ತ್ರಯಸ್ತ್ರಿಗ್‌ಂಶವರ್ತನಿಃ

ಪಷ್ಠವಾದ್ವಯೋಽಭಿಭೂರಯಾನಾಂ ವಿಷ್ವಗ್ವಾತೋ ವಾತಃ

---

ಹೇಮಂತಶಿಶಿರಾವಿತಿ ಹೇಮಂತ–ಶಿಶಿರೌ । ಋತೂನಾಮ್ । ಬೃಹಸ್ಪತಿಃ । ದೇವತಾ । ವರ್ಚಃ । ದ್ರವಿಣಮ್ । ತ್ರಿಣವ ಇತಿ ತ್ರಿ–ನವಃ । ಸ್ತೋಮಃ । ಸಃ । ಉ । ತ್ರಯಸ್ತ್ರಿಗ್‌ಂಶವರ್ತನಿರಿತಿ ತ್ರಯಸ್ತ್ರಿಗ್‌ಂಶ–ವರ್ತನಿಃ । ಪಷ್ಠವಾದಿತಿ ಪಷ್ಠ–ವಾತ್ । ವಯಃ । ಅಭಿಭೂರಿತ್ಯಭಿ–ಭೂಃ । ಅಯಾನಾಮ್ । ವಿಷ್ವಗ್ವಾತ ಇತಿ ವಿಷ್ವಕ್–ವಾತಃ । ವಾತಃ ।

---

**ಋತೂನಾಮ್**=ಋತುಗಳಲ್ಲಿ [ನೀನು]; **ಹೇಮಂತಶಿಶಿರೌ**=ಹೇಮಂತ–ಶಿಶಿರ ಋತುಸ್ವರೂಪಳಾಗಿ ಇರುತ್ತೀಯೆ; [ದೇವತೆಗಳಲ್ಲಿ] **ಬೃಹಸ್ಪತಿಃ ದೇವತಾ**= ಬೃಹಸ್ಪತಿದೇವತಾಸ್ವರೂಪಳಾಗಿದ್ದೀಯೆ; **ವರ್ಚಃ ದ್ರವಿಣಮ್**=[ಧನಗಳಲ್ಲಿ] ಸರ್ವ ವರ್ಣಗಳ ಬಲಸ್ವರೂಪಳು; **ತ್ರಿಣವಃ ಸ್ತೋಮಃ**=[ಸ್ತೋಮಗಳಲ್ಲಿ] ತ್ರಿಣವ ಸ್ತೋಮಸ್ವರೂಪಳು; **ಸಃ ಉ**=ಆ ತ್ರಿಣವಸ್ತೋಮವು; **ತ್ರಯಸ್ತ್ರಿಗ್‌ಂಶವರ್ತನಿಃ** =ತ್ರಯಸ್ತ್ರಿಗ್‌ಂಶಸ್ತೋಮದ ಪ್ರವರ್ತಕವಾಗಿದೆ; [ನೀನು ಅಂತಹ ಪ್ರವರ್ತನ ಶಕ್ತಿಯುಳ್ಳವಳಾಗಿರುವೆ] ***ಪಷ್ಠವಾತ್ ವಯಃ**=[ವಯಸ್ಸುಗಳಲ್ಲಿ;] ಎತ್ತು ಭಾರವನ್ನು ಹೊರುವ ನಾಲ್ಕು ಸಂವತ್ಸರಗಳ ವಯಸ್ಸು ನೀನು. **ಅಯಾನಾಮ್**=ಯುಗಗಳ ಪೈಕಿ; **ಅಭಿಭೂಃ**=ಕಲಿಯುಗಾವಸಾನರೂಪಳು ನೀನು; [ಬೀಸುವ ಗಾಳಿಗಳಲ್ಲಿ] **ವಿಷ್ವಗ್ವಾತಃ ವಾತಃ**=ಎಲ್ಲೆಡೆಯಲ್ಲಿಯೂ ಸಂಚರಿಸುವ ವಾಯುರೂಪಳು.

---

ದಕ್ಷಿಣ ದಿಕ್ಕಿನಲ್ಲಿ ಉಪಧಾನ ಮಾಡುವ ಹತ್ತು ಇಷ್ಟಕೆಗಳನ್ನು ದಕ್ಷಿಣದಿಕ್ಕು ಮುಂತಾದ ರೂಪದಲ್ಲಿ ಸ್ತುತಿಸಿ ಉಪಧಾನ ಮಾಡಬೇಕು.

ಪಶ್ಚಿಮ ದಿಕ್ಕಿನಲ್ಲಿ ಉಪಧಾನ ಮಾಡುವ ಹತ್ತು ಇಷ್ಟಕೆಗಳನ್ನು ಪಶ್ಚಿಮದಿಕ್ಕು

---

* **ಪಷ್ಠಂ ವಹತಿ ಇತಿ ಪಷ್ಠವಾಟ್**=ಭಾರವನ್ನು ಹೊರುವಂತಹ ಎತ್ತು. ಟಕಾರದ ಬದಲು ದಕಾರವು ಛಾಂದಸ.

ಸುಪರ್ಣ ಋಷಿಃ ಪಿತರಃ ಪಿತಾಮಹಾಃ ಪರೇಽವರೇ ತೇ ನಃ ಪಾಂತು ತೇ ನೋಽವನ್ತ್ವಸ್ಮಿನ್ಬ್ರಹ್ಮನ್ನಸ್ಮಿನ್ಕ್ಷತ್ರೇಽಸ್ಯಾ-

---

ಸುಪರ್ಣ ಇತಿ ಸು-ಪರ್ಣಃ । ಋಷಿಃ । ಪಿತರಃ । ಪಿತಾಮಹಾಃ । ಪರೇ । ಅವರೇ । ತೇ । ನಃ । ಪಾಂತು । ತೇ । ನಃ । ಅವನ್ತು । ಅಸ್ಮಿನ್ । ಬ್ರಹ್ಮನ್ । ಅಸ್ಮಿನ್ । ಕ್ಷತ್ರೇ । ಅಸ್ಯಾಮ್ ।

---

| ಮಂತ್ರ | ವಿನಿಯೋಗ |
|---|---|
| ಪಿತರಃ...ದೇವಹೂತ್ಯಾಮ್ ॥ | ಐದು ಮಂತ್ರಗಳಲ್ಲಿಯೂ ಅನುಷಂಗ ಮಾಡುವ ಮಂತ್ರಭಾಗ |

---

**ಸುಪರ್ಣಃ ಋಷಿಃ**=[ಋಷಿಗಳಲ್ಲಿ] ಸುಪರ್ಣನೆಂಬ ಮುನಿಯ ರೂಪದವಳು ನೀನು [ಇಂತಹ ನಿನ್ನನ್ನು ಉಪಧಾನ ಮಾಡುತ್ತೇನೆ]. 🔔 ಯೇ=ಯಾವ; **ಪಿತರಃ**=ತಂದೆಗಳೂ; **ಪಿತಾಮಹಾಃ**=ಅಜ್ಜಂದಿರೂ; **ಪರೇ**=ಅವರಿಗಿಂತಲೂ[ಮೇಲಿನ] ಮುತ್ತಜ್ಜನೇ ಮೊದಲಾದವರೂ; **ಅವರೇ**=ಈಚಿನವರೂ [ಯಾರು ಇದ್ದಾರೆಯೋ] **ತೇ**=ಅವರು; **ನಃ ಪಾಂತು**=ನಮ್ಮನ್ನು ಕಾಪಾಡಲಿ; **ತೇ** ಭವಂತಃ=ಆ [ಪೂಜ್ಯರಾದ ನೀವು] **ನಃ**=ನಮ್ಮನ್ನು; **ಅವಂತು**=[ಫಲಸಿದ್ಧಿಗಾಗಿ] ಕಾಪಾಡಿರಿ. **ಅಸ್ಮಿನ್ ಬ್ರಹ್ಮನ್**=ಈ ಬ್ರಾಹ್ಮಣ್ಯ ನಿಮಿತ್ತವಾಗಿಯೂ; **ಅಸ್ಮಿನ್ ಕ್ಷತ್ರೇ**=ಈ ಕ್ಷತ್ರಿಯತ್ವದ ನಿಮಿತ್ತವಾಗಿಯೂ;

---

ಮುಂತಾದ ರೂಪದಲ್ಲಿ ಸ್ತುತಿಸಿ ಉಪಧಾನ ಮಾಡಬೇಕು.

ಉತ್ತರದಿಕ್ಕಿನಲ್ಲಿ ಉಪಧಾನ ಮಾಡುವ ಹತ್ತು ಇಷ್ಟಕೆಗಳನ್ನು ಉತ್ತರದಿಕ್ಕು ಮುಂತಾದ ರೂಪದಲ್ಲಿ ಸ್ತುತಿಸಿ ಉಪಧಾನ ಮಾಡಬೇಕು.

ಊರ್ಧ್ವ ದಿಕ್ಕಿನಲ್ಲಿ [ಮೇಲೆ-ಮಧ್ಯೆ] ಉಪಧಾನ ಮಾಡುವ ಹತ್ತು ಇಷ್ಟಕೆಗಳನ್ನು ಊರ್ಧ್ವ ಮುಂತಾದ ರೂಪದಲ್ಲಿ ಸ್ತುತಿಸಿ ಉಪಧಾನ ಮಾಡಬೇಕು.

ಹಿಂದಿನ ಐದು ಮಂತ್ರಗಳಲ್ಲಿಯೂ **'ಪಿತರಃ'** ಎಂದು ಆರಂಭಗೊಂಡು **'ದೇವಹೂತ್ಯಾಮ್'** ಎಂದು ಮುಕ್ತಾಯಗೊಳ್ಳುವ ಈ ಮಂತ್ರದ ಅನುಷಂಗವಿದೆ.

ಈ ಇಷ್ಟಕೋಪಧಾನ ಮಾಡುವ ಕರ್ಮಕ್ಕಾಗಿಯೂ, ಬ್ರಾಹ್ಮಣ್ಯದ, ಕ್ಷತ್ರಿಯತ್ವದ, ಕಾಮನೆಗಳ, ಈ ಪೌರೋಹಿತ್ಯದ ನಿಮಿತ್ತವಾಗಿಯೂ, ನಮ್ಮನ್ನು ಪಿತೃಗಳೇ ಮೊದಲಾದವರು ರಕ್ಷಿಸಲಿ.

–ಮಾಶಿಷ್ಯಸ್ಯಾಂ ಪುರೋಧಾಯಾಮಸ್ಮಿನ್ಕರ್ಮನ್ನಸ್ಯಾಂ

ದೇವಹೂತ್ಯಾಮ್ ॥ ೬–3 ॥

[ವಿಟ್ಪಷ್ಠವಾದ್ವಯೋಽಷ್ಟಾವಿಗ್‍ಂಶತಿಶ್ಚ ॥]

---

ಆಶಿಷೀತ್ಯಾ–ಶಿಷಿ । ಅಸ್ಯಾಮ್ । ಪುರೋಧಾಯಾಮಿತಿ ಪುರಃ–ಧಾಯಾಮ್ । ಅಸ್ಮಿನ್ನ್ ।

ಕರ್ಮನ್ನ್ । ಅಸ್ಯಾಮ್ । ದೇವಹೂತ್ಯಾಮಿತಿ ದೇವ–ಹೂತ್ಯಾಮ್ ॥ (೬) ॥

---

**ಅಸ್ಯಾಮ್**=ಈ; **ಆಶಿಷಿ**=ಕಾಮನಾನಿಮಿತ್ತವಾಗಿಯೂ; **ಅಸ್ಯಾಮ್ ಪುರೋಧಾಯಾಮ್**=ಈ ಪೌರೋಹಿತ್ಯನಿಮಿತ್ತವಾಗಿಯೂ; **ಅಸ್ಮಿನ್ ಕರ್ಮನ್**=ಈ ಚಯನರೂಪ ಕರ್ಮನಿಮಿತ್ತವಾಗಿಯೂ; **ಅಸ್ಯಾಮ್ ದೇವಹೂತ್ಯಾಮ್**=ಈ ದೇವತಾಹ್ವಾನ ನಿಮಿತ್ತವಾಗಿಯೂ [ಹೇ! ಇಷ್ಟಕೆಯೇ! ನಿನ್ನನ್ನು ಉಪಧಾನ ಮಾಡುವೆನು] **ತೇ ನಃ ಅವಂತು**= ಅವರು ನಮ್ಮನ್ನು ಕಾಪಾಡಲಿ.

---

## ವಿನಿಯೋಗಸಂಗ್ರಹ

ಪ್ರಾಚೀತ್ಯಪಾನಭೃತ್ ಸಂಯದಿತಿ ನಾಮದ್ವಯಾನ್ವಿತಾಃ ।
5-(50) ಪಂಚಾಶತ್ ಪೂರ್ವವದ್ದಿಕ್ಷು ಮಧ್ಯೇ ಚೋಪದಧಾತಿ ತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–5/50

## ॥ ಚತುರ್ಥೋಽನುವಾಕಃ ॥

ಧ್ರುವಕ್ಷಿತಿರ್ಧ್ರುವಯೋನಿರ್ಧ್ರುವಾಽಸಿ ಧ್ರುವಾಂ ಯೋನಿ-

ಮಾ ಸೀದ ಸಾಧ್ಯಾ । ಉಖ್ಯಸ್ಯ ಕೇತುಂ ಪ್ರಥಮಂ

---

ಧ್ರುವಕ್ಷಿತಿರಿತಿ ಧ್ರುವ-ಕ್ಷಿತಿಃ । ಧ್ರುವಯೋನಿರಿತಿ ಧ್ರುವ-ಯೋನಿಃ । ಧ್ರುವಾ । ಅಸಿ ।

ಧ್ರುವಾಮ್ । ಯೋನಿಮ್ । ಏತಿ । ಸೀದ । ಸಾಧ್ಯಾ ॥ ಉಖ್ಯಸ್ಯ । ಕೇತುಮ್ ।

ಪ್ರಥಮಮ್ ।

---

ಹಿಂದಿನ ಅನುವಾಕದಲ್ಲಿ ಅಪಾನಭೃದಿಷ್ಟಕೆಗಳು ಉಕ್ತವಾದವು. ಅದರಿಂದ ಪ್ರಥಮಚಿತಿಯು ಪೂರ್ಣವಾಯಿತು. ಈ ನಾಲ್ಕನೆಯ ಅನುವಾಕದಲ್ಲಿ ದ್ವಿತೀಯ ಚಿತಿಗೆ ಸಂಬಂಧಿಸಿದಂತೆ ಆಶ್ವಿನೀಷ್ಟಕೆಗಳು ಹೇಳಲ್ಪಟ್ಟಿವೆ.

---

| ಮಂತ್ರ | ವಿನಿಯೋಗ |
|---|---|
| ಧ್ರುವಕ್ಷಿತಿಃ...ಇಹ ತ್ವಾ ॥ | ಐದು ಆಶ್ವಿನೀಷ್ಟಕೆಗಳಲ್ಲಿ ಮೊದಲನೆಯ ಇಷ್ಟಕೋಪಧಾನದ ಮಂತ್ರ. |

---

🔔 [ಇಷ್ಟಕೆಯೇ!] [ನೀನು] **ಧ್ರುವಕ್ಷಿತಿಃ**=ಸ್ಥಿರವಾದ ವಾಸಸ್ಥಾನವುಳ್ಳವಳು; **ಧ್ರುವಯೋನಿಃ**=ನಾಶರಹಿತವಾದ ಮೃದ್ರೂಪವಾದ ಉತ್ಪತ್ತಿಕಾರಣವುಳ್ಳವಳು; **ಧ್ರುವಾ ಅಸಿ**=ಸ್ವತಃ ಅರ್ಮಕಪಾಲಾದಿಯೋಗದಿಂದ ಗಟ್ಟಿಯಾಗಿರುವೆ; **ಸಾಧ್ಯಾ**=ನಮ್ಮಿಂದ ಇಡಲ್ಪಟ್ಟವಳಾಗಿ; **ಧ್ರುವಾಮ್ ಯೋನಿಮ್**=ಧ್ರುವವಾಗಿರುವ ಅಗ್ನಿಕ್ಷೇತ್ರವನ್ನು; **ಆ ಸೀದ**=[ಹೊಂದಿ] ಸ್ಥಿರವಾಗಿರು; **ಉಖ್ಯಸ್ಯ ಕೇತುಮ್**=ಉಖೆಯಲ್ಲಿರುವ ಅಗ್ನಿಗೆ ಜ್ಞಾಪಕವಾಗಿರುವ; **ಪ್ರಥಮಮ್**=[ಇಷ್ಟಕೋಪಧಾನಕ್ಕಿಂತಲೂ] ಮೊದಲೇ ನಿಷ್ಪನ್ನವಾಗಿರುವ [ಸ್ಥಾನವನ್ನು ಹೊಂದು]

ಪುರಸ್ತಾದಶ್ವಿನಾಽಧ್ವರ್ಯೂ ಸಾದಯತಾಮಿಹ ತ್ವಾ ॥

ಸ್ವೇ ದಕ್ಷೇ ದಕ್ಷಪಿತೇಹ ಸೀದ ದೇವತ್ರಾ ಪೃಥಿವೀ

ಬೃಹತೀ ರರಾಣಾ । ಸ್ವಾಸಸ್ಥಾ ತನುವಾ ಸಂ ವಿಶಸ್ವ

---

ಪುರಸ್ತಾತ್ । ಅಶ್ವಿನಾ । ಅಧ್ವರ್ಯೂ ಇತಿ । ಸಾದಯತಾಮ್ । ಇಹ । ತ್ವಾ ॥ ಸ್ವೇ । ದಕ್ಷೇ । ದಕ್ಷಪಿತೇತಿ ದಕ್ಷ–ಪಿತಾ । ಇಹ । ಸೀದ । ದೇವತ್ರೇತಿ ದೇವ–ತ್ರಾ । ಪೃಥಿವೀ । ಬೃಹತೀ । ರರಾಣಾ ॥ ಸ್ವಾಸಸ್ಥೇತಿ ಸು–ಆಸಸ್ಥಾ । ತನುವಾ । ಸಮಿತಿ । ವಿಶಸ್ವ ।

---

| ಮಂತ್ರ | ವಿನಿಯೋಗ |
| --- | --- |
| ಸ್ವೇ ದಕ್ಷೇ...ಇಹ ತ್ವಾ ॥ | ಎರಡನೆಯ ಆಶ್ವಿನೀಷ್ಟಕೆಯನ್ನು ಉಪಧಾನ ಮಾಡಲು. |

---

ಅಧ್ವರ್ಯೂ=[ದೇವತೆಗಳ] ಅಧ್ವರ್ಯುಗಳಾದ; ಅಶ್ವಿನಾ=ಅಶ್ವಿನೀದೇವತೆಗಳು; ಇಹ=ಈ ಚಯನಕ್ಷೇತ್ರದಲ್ಲಿ; ಪುರಸ್ತಾತ್=ಪೂರ್ವದಿಕ್ಕಿನಲ್ಲಿ; ತ್ವಾ=ನಿನ್ನನ್ನು; ಸಾದಯತಾಮ್=ಉಪಧಾನ ಮಾಡಲಿ; ▲ [ಇಷ್ಟಕೆಯೇ!] ದಕ್ಷಪಿತಾ [ಇವ]= ವ್ಯವಹಾರಕುಶಲರಾಗಿರುವ ಮಕ್ಕಳ ತಂದೆಯಂತೆ; ಸ್ವೇ=ತನ್ನದಾದ; ದಕ್ಷೇ ಇಹ= ಯೋಗ್ಯವಾದ ಈ ಸ್ಥಾನದಲ್ಲಿ; ಸೀದ=ಕುಳಿತುಕೋ; ದೇವತ್ರಾ=ದೇವತೆಗಳಲ್ಲಿ; ತನುವಾ=ಸ್ವಶರೀರದಿಂದ ಯುಕ್ತಳಾಗಿ; ಸಂವಿಶಸ್ವ=ಚೆನ್ನಾಗಿ ಉಪಸ್ಥಿತಳಾಗಿರು; [ನೀನು] ಪೃಥಿವೀ=ಮೃದ್ರೂಪಳಾಗಿ ಭೂರೂಪಳಾಗಿರುವೆ; ಬೃಹತೀ=ಪ್ರೌಢಳಾಗಿ ರುವವಳು; ರರಾಣಾ=ಉಪದ್ರವರಹಿತಳಾಗಿ ವಿನೋದವಾಗಿ ಇರುವವಳು; ಸ್ವಾಸಸ್ಥಾ =ಸುಖವಾಗಿ ಇರುವವಳು.

---

ಹೇ! ಇಷ್ಟಕೆಯೇ! ನಿನ್ನ ವಾಸಸ್ಥಾನವೂ ಸ್ಥಿರವಾಗಿದೆ. ನಿನ್ನ ಉತ್ಪತ್ತಿಸ್ಥಾನವಾದ ಮೃತ್ತಿಕೆಯೂ ಶಾಶ್ವತವಾಗಿದೆ. ನೀನು ಅರ್ಮಕಪಾಲಾದಿಗಳಿಂದ [ಮಡಕೆಯ ಒಡೆದ ಚೂರು] ಯುಕ್ತಳಾಗಿ ಗಟ್ಟಿಯಾಗಿರುವೆ. ಸ್ಥಿರವಾದ ಚಯನಕ್ಷೇತ್ರದಲ್ಲಿ ನಿನ್ನನ್ನು

ಪಿತೇವೈಧಿ ಸೂನವ ಆ ಸುಶೇವಾಽಶ್ವಿನಾಧ್ವರ್ಯೂ ಸಾದಯತಾ ಮಿಹ ತ್ವಾ ॥ ಕುಲಾಯಿನೀ ವಸುಮತೀ ವಯೋಧಾ ರಯಿಂ ನೋ ವರ್ಧ ಬಹುಲಗ್ಂ ಸುವೀರಮ್ ॥ [(೭)] ॥

---

ಪಿತಾ । ಇವ । ಏಧಿ । ಸೂನವೇ । ಐತಿ । ಸುಶೇವೇತಿ ಸು-ಶೇವಾ । ಅಶ್ವಿನಾ । ಅಧ್ವರ್ಯೂ ಇತಿ । ಸಾದಯತಾಮ್ । ಇಹ । ತ್ವಾ ॥ ಕುಲಾಯಿನೀ । ವಸುಮತೀತಿ ವಸು-ಮತೀ । ವಯೋಧಾ ಇತಿ ವಯಃ-ಧಾಃ । ರಯಿಮ್ । ನಃ । ವರ್ಧ । ಬಹುಲಮ್ । ಸುವೀರಮಿತಿ ಸು-ವೀರಮ್ । (೭) ।

---

| ಮಂತ್ರ | ವಿನಿಯೋಗ |
|---|---|
| ಕುಲಾಯಿನೀ...ಇಹ ತ್ವಾ ॥ | ಮೂರನೆಯ ಆಶ್ವಿನೀಷ್ಟಕೆಯನ್ನು ಉಪಧಾನ ಮಾಡಲು. |

---

**ಸೂನವೇ**=ಮಗನಿಗೆ; **ಪಿತಾ ಇವ**=ತಂದೆಯು [ಸುಖವಾಗಿ ಸೇವ್ಯನಾಗಿ] ಇರುವಂತೆ; **ಆ ಸುಶೇವಾ**=ಸುಖಸೇವ್ಯಳಾಗಿ [ನೀನು] **ಏಧಿ**=ಆಗು; **ಅಧ್ವರ್ಯೂ ಅಶ್ವಿನಾ**=ದೇವತೆಗಳ ಅಧ್ವರ್ಯುಗಳಾದ ಅಶ್ವಿನೀದೇವತೆಗಳು; **ಇಹ**=ಈ ಚಯನಕ್ಷೇತ್ರದಲ್ಲಿ; **ತ್ವಾ ಸಾದಯತಾಮ್**=ನಿನ್ನನ್ನು ಉಪಧಾನ ಮಾಡಲಿ. 🔔 [ಹೇ! ಇಷ್ಟಕೆಯೇ!] [ನೀನು] **ಕುಲಾಯಿನೀ**=ಒಳ್ಳೆಯ ವಾಸಸ್ಥಾನವುಳ್ಳವಳು; **ವಸುಮತೀ**=ಐಶ್ವರ್ಯವನ್ನು ಕೊಡುವವಳು; **ವಯೋಧಾಃ**=ದೀರ್ಘಾಯುಸ್ಸನ್ನು ಉಂಟುಮಾಡುವವಳು; [ನೀನು] **ನಃ**=ನಮಗೆ; **ಬಹುಲಮ್**=ಹೆಚ್ಚಿನ; **ರಯಿಮ್**=ಧನವನ್ನೂ; **ಸುವೀರಮ್**=ಸತ್ಪುತ್ರನನ್ನೂ; **ವರ್ಧ** =ವೃದ್ಧಿಗೊಳ್ಳುವಂತೆ ಮಾಡು;

---

ಇಡುತ್ತೇನೆ. ನೀನು ಸ್ಥಿರವಾಗಿರು. ಉಖ್ಯಾಗ್ನಿಗೆ ಜ್ಞಾಪಕವಾಗಿರುವ, ಇಷ್ಟಕೆಗಳಿಗಿಂತಲೂ ಮೊದಲೇ ಉತ್ಪನ್ನವಾಗಿರುವ ಚಯನಭೂಮಿಯಲ್ಲಿ ದೇವತೆಗಳ ಅಧ್ವರ್ಯುಗಳಾದ

ಅಪಾಮತಿಂ ದುರ್ಮತಿಂ ಬಾಧಮಾನಾ ರಾಯಸ್ಪೋಷೇ ಯಜ್ಞಪತಿಮಾಭಜಂತೀ ಸುವರ್ಧೇಹಿ ಯಜಮಾನಾಯ ಪೋಷಮಶ್ವಿನಾಽಧ್ವರ್ಯೂ ಸಾದಯತಾಮಿಹ ತ್ವಾ ॥

---

ಅಪೇತಿ । ಅಮತಿಮ್ । ದುರ್ಮತಿಮಿತಿ ದುಃ-ಮತಿಮ್ । ಬಾಧಮಾನಾ । ರಾಯಃ । ಪೋಷೇ । ಯಜ್ಞಪತಿಮಿತಿ ಯಜ್ಞ-ಪತಿಮ್ । ಆಭಜಂತೀತ್ಯಾ-ಭಜಂತೀ । ಸುವಃ । ಧೇಹಿ । ಯಜಮಾನಾಯ । ಪೋಷಮ್ । ಅಶ್ವಿನಾ । ಅಧ್ವರ್ಯೂ ಇತಿ । ಸಾದಯತಾಮ್ । ಇಹ । ತ್ವಾ ॥

---

**ಅಮತಿಮ್**=ಬುದ್ಧಿಮಾಂದ್ಯವನ್ನೂ; **ದುರ್ಮತಿಮ್**=ದುಷ್ಟಬುದ್ಧಿಯನ್ನೂ; **ಅಪ ಬಾಧಮಾನಾ**=ಸಂಪೂರ್ಣವಾಗಿ ನಾಶಪಡಿಸುವವಳಾಗಿ; **ರಾಯಃ ಪೋಷೇ**=ಧನ ಪುಷ್ಟಿಯ ವಿಷಯದಲ್ಲಿ; **ಯಜ್ಞಪತಿಮ್**=ಯಜಮಾನನನ್ನು; **ಆಭಜಂತೀ**= ಆಶ್ರಯ ನಾಗುವಂತೆ ಮಾಡುತ್ತಾ; **ಸುವಃ**=ಸ್ವರ್ಗಲೋಕದಲ್ಲಿ; **ಯಜಮಾನಾಯ**=ಯಜಮಾನನಿಗೆ; **ಪೋಷಮ್**=ಸರ್ವವಿಧವಾದ ಪುಷ್ಟಿಯನ್ನೂ; **ಧೇಹಿ**=ಉಂಟುಮಾಡು. **ಅಧ್ವರ್ಯೂ ಅಶ್ವಿನಾ**=ದೇವಾಧ್ವರ್ಯುಗಳಾದ ಅಶ್ವಿನೀದೇವತೆಗಳು; **ತ್ವಾ**= ನಿನ್ನನ್ನು; **ಇಹ ಸಾದಯತಾಮ್**=ಇಲ್ಲಿ ಉಪಧಾನ ಮಾಡಲಿ.

---

ಅಶ್ವಿನೀದೇವತೆಗಳು ನಿನ್ನನ್ನು ಇಲ್ಲಿ ಸ್ಥಾಪಿಸಲಿ.

ಹೇ! ಇಷ್ಟಕೆಯೇ! ವ್ಯವಹಾರದಕ್ಷರಾದ ಮಕ್ಕಳ ತಂದೆಯು ಮನೆಯಲ್ಲಿ ಕುಳಿತು ಕೊಳ್ಳುವಂತೆ ನೀನು ಈ ಯೋಗ್ಯವಾದ ಸ್ಥಾನದಲ್ಲಿ ಇರು. ನೀನು ನಿನ್ನ ಶರೀರದಿಂದ ಕೂಡಿ ಭೂರೂಪಳಾಗಿದ್ದು, ದೊಡ್ಡವಳಾಗಿದ್ದು, ಉಪದ್ರವರಹಿತಳಾಗಿರುವವಳು. ತಂದೆಯು ಮಗನಿಗೆ ಹೇಗೆ ಸೇವ್ಯನೋ ಹಾಗೆ ನೀನು ನಮ್ಮಿಂದ ಸುಖಸೇವ್ಯಳಾಗಿ ಇರು.

ಅಗ್ನೇಃ ಪುರೀಷಮಸಿ ದೇವಯಾನೀ ತಾಂ ತ್ವಾ ವಿಶ್ವೇ ಅಭಿ ಗೃಣಂತು ದೇವಾಃ । ಸ್ತೋಮಪೃಷ್ಠಾ ಘೃತವತೀಹ ಸೀದ ಪ್ರಜಾವದಸ್ಮೇ ದ್ರವಿಣಾಽಽಯಜಸ್ವಾಶ್ವಿನಾಽಧ್ವರ್ಯೂ ಸಾದಯತಾಮಿಹ ತ್ವಾ ।

---

ಅಗ್ನೇಃ । ಪುರೀಷಮ್ । ಅಸಿ । ದೇವಯಾನೀತಿ ದೇವ-ಯಾನೀ । ತಾಮ್ । ತ್ವಾ । ವಿಶ್ವೇ । ಅಭೀತಿ । ಗೃಣಂತು । ದೇವಾಃ ॥ ಸ್ತೋಮಪೃಷ್ಠೇತಿ ಸ್ತೋಮ-ಪೃಷ್ಠಾ । ಘೃತವತೀತಿ ಘೃತ-ವತೀ । ಇಹ । ಸೀದ । ಪ್ರಜಾವದಿತಿ ಪ್ರಜಾ-ವತ್ । ಅಸ್ಮೇ ಇತಿ । ದ್ರವಿಣಾ । ಏತಿ । ಯಜಸ್ವ । ಅಶ್ವಿನಾ । ಅಧ್ವರ್ಯೂ ಇತಿ । ಸಾದಯತಾಮ್ । ಇಹ । ತ್ವಾ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇಃ...ಇಹ ತ್ವಾ ॥ | ನಾಲ್ಕನೆಯ ಆಶ್ವಿನೀಷ್ಟಕೋಪಧಾನವನ್ನು ಮಾಡಲು. |

---

🔔 [ಇಷ್ಟಕೆಯೇ!] [ನೀನು] **ದೇವಯಾನೀ**=ದೇವತೆಗಳನ್ನು ಹೊಂದುವವಳಾಗಿದ್ದೀಯೆ; **ಅಗ್ನೇಃ ಪುರೀಷಮ್**=ಅಗ್ನಿಚಯನವನ್ನು ಪೂರ್ಣಗೊಳಿಸುವವಳಾಗಿ; **ಅಸಿ**=ಇರುವೆ; **ತಾಮ್ ತ್ವಾ**=ಅಂತಹ ನಿನ್ನನ್ನು; **ವಿಶ್ವೇ ದೇವಾಃ**=ಸಮಸ್ತದೇವತೆಗಳೂ; **ಅಭಿ ಗೃಣಂತು**=ಸರ್ವತ್ರ ಕೀರ್ತಿಸಲಿ; **ಸ್ತೋಮಪೃಷ್ಠಾ**=ಸರ್ವಸ್ತೋಮಗಳಿಂದ ಕೂಡಿದ ಪೃಷ್ಠಸ್ತೋತ್ರಗಳಿಂದ ಸ್ತುತಿಸಲ್ಪಡುತ್ತಾ; **ಘೃತವತೀ**=ಹೋಮ ಮಾಡುವ ಆಜ್ಯಾದಿಗಳಿಂದ ಕೂಡಿದವಳಾಗಿ; **ಇಹ ಸೀದ**=ಇಲ್ಲಿ ಇರು; **ಅಸ್ಮೇ**=ನಮಗೆ; **ಪ್ರಜಾವತ್**=ಪುತ್ರಪೌತ್ರಯುಕ್ತವಾದ; **ದ್ರವಿಣಾ**=ಸರ್ವವಿಧವಾದ ಧನವನ್ನೂ; **ಆ ಯಜಸ್ವ**=ಪೂರ್ಣವಾಗಿ ಕೊಡು; **ಅಧ್ವರ್ಯೂ ಅಶ್ವಿನಾ**=ದೇವಾಧ್ವರ್ಯುಗಳಾದ ಅಶ್ವಿನೀ ದೇವತೆಗಳು; **ತ್ವಾ**=ನಿನ್ನನ್ನು; **ಇಹ ಸಾದಯತಾಮ್**=ಇಲ್ಲಿ ಉಪಧಾನ ಮಾಡಲಿ.

ದಿವೋ ಮೂರ್ಧಾಽಸಿ ಪೃಥಿವ್ಯಾ ನಾಭಿರ್ವಿಷ್ಟಂಭನೀ

ದಿಶಾಮಧಿಪತ್ನೀ ಭುವನಾನಾಮ್ ॥ (೮) ॥

ಊರ್ಮಿರ್ದ್ರಪ್ಸೋ ಅಪಾಮಸಿ

---

ದಿವಃ । ಮೂರ್ಧಾ । ಅಸಿ । ಪೃಥಿವ್ಯಾಃ । ನಾಭಿಃ । ವಿಷ್ಟಂಭನೀತಿ ವಿ-ಸ್ತಂಭನೀ । ದಿಶಾಮ್ । ಅಧಿಪತ್ನೀತ್ಯಧಿ-ಪತ್ನೀ । ಭುವನಾನಾಮ್ ॥ (೮) । ಊರ್ಮಿಃ । ದ್ರಪ್ಸಃ । ಅಪಾಮ್ । ಅಸಿ ।

---

| ಮಂತ್ರ | ವಿನಿಯೋಗ |
|---|---|
| **ದಿವೋ ಮೂರ್ಧಾ...ಇಹ ತ್ವಾ ॥** | ಐದನೆಯ ಆಶ್ವಿನೀಷ್ಟಕೆಯ ಉಪಧಾನ ಮಾಡಲು. |

---

▲ [ಹೇ! ಇಷ್ಟಕೆಯೇ!] [ನೀನು] **ದಿವಃ**=ದ್ಯುಲೋಕಕ್ಕೆ; **ಮೂರ್ಧಾ ಅಸಿ**=ಶಿರಸ್ಸಿನಂತಿರುವ ಸೂರ್ಯರೂಪಳು; **ಪೃಥಿವ್ಯಾಃ**=ಭೂಮಿಗೆ; **ನಾಭಿಃ**=ನಾಭಿರೂಪವಾದ ಮೇರುವಿನಂತಿರುವೆ; **ದಿಶಾಮ್ ವಿಷ್ಟಂಭನೀ**=ದಿಕ್ಕುಗಳನ್ನು ವಿವಿಧಸಾಂಕರ್ಯಗಳಿಂದ ರಕ್ಷಿಸಿ ವ್ಯವಸ್ಥಿತವಾಗಿರಿಸುವೆ; **ಭುವನಾನಾಮ್ ಅಧಿಪತ್ನೀ**=ಲೋಕಗಳನ್ನು ಅಧಿಕವಾಗಿ ಪಾಲಿಸುವವವಳು; **ಅಪಾಮ್**=ನೀರುಗಳ; **ಊರ್ಮಿಃ**=ಅಲೆಯೂ; **ದ್ರಪ್ಸಃ ಅಸಿ**=ಬಿಂದುವೂ [ನೀನೇ] ಆಗಿರುವೆ.

---

**ಹೇ! ಇಷ್ಟಕೆಯೇ! ನೀನು ಒಳ್ಳೆಯ ವಾಸಸ್ಥಾನವುಳ್ಳವಳಾಗಿ ಐಶ್ವರ್ಯವಂತಳಾಗಿರುವೆ. ದೀರ್ಘಾಯುಸ್ಸನ್ನು ಉಂಟುಮಾಡುವವಳು. ನಮಗೆ ಹೆಚ್ಚಿನ ಸಂಪತ್ತನ್ನೂ ಸತ್ಪುತ್ರರನ್ನೂ ಕೊಡು. ದುರ್ಬುದ್ಧಿಯನ್ನು ದೂರಮಾಡು. ಯಜಮಾನನಿಗೆ ಭೂಲೋಕದಲ್ಲಿಯೂ, ಸ್ವರ್ಗಲೋಕದಲ್ಲಿಯೂ ಸರ್ವವಿಧವಾದ ಪುಷ್ಟಿಯನ್ನು ನೀಡು. ಅಶ್ವಿನೀ ದೇವತೆಗಳು ನಿನ್ನ ಉಪಧಾನವನ್ನು ಮಾಡಲಿ.**

**ಇಷ್ಟಕೆಯೇ! ನೀನು ದೇವಲೋಕಕ್ಕೆ ಒಯ್ಯುವವಳು. ಚಯನಪ್ರದೇಶವನ್ನು ತುಂಬುವವಳು. ನಿನ್ನನ್ನು ಸರ್ವದೇವತೆಗಳೂ ಸ್ತುತಿಸಲಿ.**

**ವಿಶ್ವಕರ್ಮಾ ತ ಋಷಿರಶ್ವಿನಾಽಧ್ವರ್ಯೂ ಸಾದಯತಾಮಿಹ ತ್ವಾ ॥ ಸಜೂರ್ ಋತುಭಿಃ ಸಜೂರ್ವಿಧಾಭಿಃ ಸಜೂರ್ವಸುಭಿಃ**

---

ವಿಶ್ವಕರ್ಮೇತಿ ವಿಶ್ವ-ಕರ್ಮಾ । ತೇ । ಋಷಿಃ । ಅಶ್ವಿನಾ । ಅಧ್ವರ್ಯೂ ಇತಿ । ಸಾದಯತಾಮ್ । ಇಹ । ತ್ವಾ ॥ ಸಜೂರಿತಿ ಸ-ಜೂಃ । ಋತುಭಿರಿತ್ಯೃತು-ಭಿಃ । ಸಜೂರಿತಿ ಸ-ಜೂಃ । ವಿಧಾಭಿರಿತಿ ವಿ-ಧಾಭಿಃ । ಸಜೂರಿತಿ ಸ-ಜೂಃ । ವಸುಭಿರಿತಿ ವಸು-ಭಿಃ ।

---

| ಮಂತ್ರ | ವಿನಿಯೋಗ |
|---|---|
| **ಸಜೂರ್ ಋತುಭಿಃ...ಇಹ ತ್ವಾ ॥** | ಅಶ್ವಿನೀಷ್ಟಕೋಪಧಾನದ ಬಳಿಕ *ಐದು ಋತವ್ಯೋಪಧಾನವನ್ನು ಮಾಡಲು. |

---

**ತೇ ವಿಶ್ವಕರ್ಮಾ ಋಷಿಃ**=ಪ್ರಜಾಪತಿಯೇ ನಿನ್ನ ದ್ರಷ್ಟಾರನು; **ಅಧ್ವರ್ಯೂ ಅಶ್ವಿನಾ**=ದೇವಾಧ್ವರ್ಯುಗಳಾದ ಅಶ್ವಿನೀದೇವತೆಗಳು; **ತ್ವಾ**=[ಸರ್ವಾತ್ಮಕಳಾದ] ನಿನ್ನನ್ನು; **ಇಹ ಸಾದಯತಾಮ್**=ಇಲ್ಲಿ ಸ್ಥಾಪಿಸಲಿ. 🔔 [ಎಲೈ! ಇಷ್ಟಕೆಯೇ!] [ನೀನು] **ಋತುಭಿಃ**=ವಸಂತಾದಿ ಋತುಗಳೊಡನೆ; **ಸಜೂಃ**=ಸಮಾನಪ್ರೀತಿಯುಳ್ಳವಳು; **ವಿಧಾಭಿಃ**=ವಿವಿಧ ಜಗತ್ತನ್ನು ಪೋಷಿಸುವ ಬ್ರಹ್ಮಾದಿಗಳೊಡನೆ; **ಸಜೂಃ**=ಸಮಾನಪ್ರೀತಿಯುಳ್ಳವಳು; **ವಸುಭಿಃ**=ವಸುದೇವತೆಗಳೊಡನೆಯೂ; **ಸಜೂಃ**=ಸಮಾನಪ್ರೀತಿವಂತಳು;

---

* ಋತವ್ಯೇಷ್ಟಕೆಗಳು ಐದು. ಇಲ್ಲಿ ಅನುಷಂಗವನ್ನು ಸೇರಿಸಿ ಐದು ಮಂತ್ರಗಳನ್ನು ಹೇಳಬೇಕು. ಅನುಷಂಗದ ರೀತಿಯು ಹೀಗೆ:-

೧) **ಸಜೂರ್ ಋತುಭಿಃ ಸಜೂರ್ವಿಧಾಭಿಃ ಸಜೂರ್ವಸುಭಿಃ ಸಜೂರ್ದೇವೈರ್ವಯೋನಾಧೈ... ತ್ವಾ ॥**
೨) **ಸಜೂರ್——— " ———ಸಜೂ ರುದ್ರೈಃ ——— " ——— ತ್ವಾ ॥**
೩) **ಸಜೂರ್——— " ———ಸಜೂರಾದಿತ್ಯೈಃ ——— " ——— ತ್ವಾ ॥**
೪) **ಸಜೂರ್——— " ———ಸಜೂರ್ವಿಶ್ವೈರ್ದೇವೈಃ ——— " ——— ತ್ವಾ ॥**
೫) **ಸಜೂರ್——— " ———ಸಜೂರ್ದೇವೈಃ ——— " ——— ತ್ವಾ ॥**

**ಸಜೂ ರುದ್ರೈಃ ಸಜೂರಾದಿತ್ಯೈಃ ಸಜೂರ್ವಿಶ್ವೈರ್ದೇವೈಃ ಸಜೂರ್ದೇವೈಃ ಸಜೂರ್ದೇವೈರ್ವಯೋನಾಧೈರಗ್ನಯೇ ತ್ವಾ ವೈಶ್ವಾನರಾಯಾಶ್ವಿನಾಽಧ್ವರ್ಯೂ ಸಾದಯತಾಮಿಹ ತ್ವಾ ॥**

---

ಸಜೂರಿತಿ ಸ–ಜೂಃ । ರುದ್ರೈಃ । ಸಜೂರಿತಿ ಸ–ಜೂಃ । ಆದಿತ್ಯೈಃ । ಸಜೂರಿತಿ ಸ–ಜೂಃ । ವಿಶ್ವೈಃ । ದೇವೈಃ । ಸಜೂರಿತಿ ಸ–ಜೂಃ । ದೇವೈಃ । ಸಜೂರಿತಿ ಸ–ಜೂಃ । ದೇವೈಃ । ವಯೋನಾಧೈರಿತಿ ವಯಃ–ನಾಧೈಃ । ಅಗ್ನಯೇ । ತ್ವಾ । ವೈಶ್ವಾನರಾಯ । ಅಶ್ವಿನಾ । ಅಧ್ವರ್ಯೂ ಇತಿ । ಸಾದಯತಾಮ್ । ಇಹ । ತ್ವಾ ॥

---

ರುದ್ರೈಃ=ರುದ್ರದೇವತೆಗಳೊಡನೆಯೂ; ಸಜೂಃ=ಸಮಾನಪ್ರೀತಿವಂತಳು; ಆದಿತ್ಯೈಃ ಸಜೂಃ=ಆದಿತ್ಯರೊಡನೆಯೂ ಸಮಾನಪ್ರೀತಿವಂತಳು; ವಿಶ್ವೈಃ ದೇವೈಃ ಸಜೂಃ= ವಿಶ್ವೇದೇವರೊಡನೆಯೂ ಸಮಾನಪ್ರೀತಿಯುಳ್ಳವಳಾಗಿರುವೆ; ದೇವೈಃ ಸಜೂಃ= ಎಲ್ಲಾ ದೇವತೆಗಳೊಡನೆಯೂ ನಿನ್ನ ಪ್ರೀತಿಯು ಸಮಾನವಾಗಿದೆ; ವಯೋನಾಧೈಃ ದೇವೈಃ=ಆಯುಸ್ಸನ್ನು ಕೊಡುವ ಎಲ್ಲ ದೇವತೆಗಳೊಡನೆಯೂ; ಸಜೂಃ=ಸಮಾನ ಪ್ರೀತಿಯುಳ್ಳವಳು; ತ್ವಾ=ನಿನ್ನನ್ನು; ವೈಶ್ವಾನರಾಯ=ವಿಶ್ವಮಾನವಹಿತನಾದ; ಅಗ್ನಯೇ =ವೈಶ್ವಾನರಾಗ್ನಿಗಾಗಿ [ಉಪಧಾನ ಮಾಡುತ್ತೇನೆ] ಅಧ್ವರ್ಯೂ ಅಶ್ವಿನಾ ಇಹ ತ್ವಾ ಸಾದಯತಾಮ್=ದೇವಾಧ್ವರ್ಯುಗಳಾದ ಅಶ್ವಿನಿಗಳು ನಿನ್ನನ್ನು ಇಲ್ಲಿ ಸ್ಥಾಪಿಸಲಿ.

---

ತ್ರಿವೃತ್, ಪಂಚದಶ, ಸಪ್ತದಶ, ಏಕವಿಂಶ, ತ್ರಿಣವ, ತ್ರಯಸ್ತ್ರಿಂಶ–ಎಂಬ ಆರು ಸ್ತೋತ್ರಗಳಿಂದಲೂ ರಥಂತರ, ಬೃಹತ್, ವೈರೂಪ, ವೈರಾಜ, ಶಾಕ್ವರ, ರೈವತ–ಈ ಪೃಷ್ಠ ಸ್ತೋತ್ರಗಳಿಂದಲೂ ನಿನ್ನ ಉಪಸ್ಥಾನವನ್ನು ಮಾಡುತ್ತಾರೆ. ಆಜ್ಯಾದಿಗಳಿಂದ ನಿನ್ನಲ್ಲಿ ಹೋಮ ಮಾಡುತ್ತಾರೆ. ನೀನು ಇಲ್ಲಿರು. ನಮಗೆ ಸತ್ಪ್ರಜೆಗಳನ್ನೂ, ಸರ್ವಧನಗಳನ್ನೂ ಕರುಣಿಸು. ನಿನ್ನನ್ನು ದೇವಾಧ್ವರ್ಯುಗಳಾದ ಅಶ್ವಿನೀದೇವತೆಗಳು ಉಪಧಾನ ಮಾಡಲಿ.

ಪ್ರಾಣಂ ಮೇ ಪಾಹ್ಯಪಾನಂ ಮೇ ಪಾಹಿ ವ್ಯಾನಂ ಮೇ

ಪಾಹಿ ಚಕ್ಷುರ್ಮ ಉರ್ವ್ಯಾ ವಿ ಭಾಹಿ

---

ಪ್ರಾಣಮಿತಿ ಪ್ರ-ಅನಮ್ । ಮೇ । ಪಾಹಿ । ಅಪಾನಮಿತ್ಯಪ-ಅನಮ್ । ಮೇ । ಪಾಹಿ ।

ವ್ಯಾನಮಿತಿ ವಿ-ಅನಮ್ । ಮೇ । ಪಾಹಿ । ಚಕ್ಷುಃ । ಮೇ । ಉರ್ವ್ಯಾ । ವೀತಿ । ಭಾಹಿ ।

---

| ಮಂತ್ರ | ವಿನಿಯೋಗ |
|---|---|
| **ಪ್ರಾಣಂ ಮೇ...ಶ್ಲೋಕಯ ॥** | ಐದು ಪ್ರಾಣಭೃದಿಷ್ಟಕೋಪಧಾನವನ್ನು ಮಾಡಲು. |

---

♠ [ಎಲೈ! ಇಷ್ಟಕೆಯೇ!] **ಮೇ**=ನನ್ನ; **ಪ್ರಾಣಮ್ ಪಾಹಿ**=ಪ್ರಾಣವಾಯುವನ್ನು ರಕ್ಷಿಸು; **ಮೇ**=ನನ್ನ; **ಅಪಾನಮ್ ಪಾಹಿ**=ಅಪಾನವಾಯುವನ್ನೂ ರಕ್ಷಿಸು; **ಮೇ**=ನನ್ನ; **ವ್ಯಾನಮ್ ಪಾಹಿ**=ವ್ಯಾನವಾಯುವನ್ನು ಪೊರೆ; **ಮೇ**=ನನ್ನ; **ಚಕ್ಷುಃ**=ಕಣ್ಣನ್ನು; **ಉರ್ವ್ಯಾ**=ವಿಶಾಲವಾದ ದೃಷ್ಟಿಯಿಂದ; **ವಿ ಭಾಹಿ**=ಪ್ರಕಾಶಿಸುವಂತೆ ಮಾಡು; **ಮೇ**=ನನ್ನ; **ಶ್ರೋತ್ರಮ್**=ಕಿವಿಯನ್ನು; **ಶ್ಲೋಕಯ**=ಶ್ರವಣಸಮರ್ಥವಾಗುವಂತೆ ಮಾಡು; [ಇದಕ್ಕಾಗಿ ಇಷ್ಟಕೋಪಧಾನವನ್ನು ಮಾಡುತ್ತೇನೆ.]

---

ಇಷ್ಟಕೆಯು ಸೂರ್ಯಸ್ವರೂಪಳು, ಭೂಮಿಯ ನಾಭಿರೂಪಳು. ದಿಕ್ಕುಗಳನ್ನು ವ್ಯವಸ್ಥೆಗೊಳಿಸುವವಳು. ಲೋಕಗಳನ್ನು ಅಧಿಕವಾಗಿ ಪಾಲಿಸುವವಳು. ನೀರಿನ ಅಲೆಗಳೂ ಹನಿಗಳೂ ಈ ಇಷ್ಟಕೆಯೇ. ಪ್ರಜಾಪತಿಯು ಇದರ ದ್ರಷ್ಟಾರನು. ಇಂತಹ ಇಷ್ಟಕೆಯನ್ನು ಅಶ್ವಿನೀದೇವತೆಗಳು ಉಪಧಾನ ಮಾಡಲಿ.

ಹೇ! ಇಷ್ಟಕೆಯೇ! ನೀನು ಋತುಗಳು, ಜಗದ್ರಕ್ಷಕರಾದ ಬ್ರಹ್ಮಾದಿಗಳು, ವಸು-ರುದ್ರ-ಆದಿತ್ಯದೇವತೆಗಳು, ವಿಶ್ವೇದೇವರು-ಈ ಆಯುಷ್ಪ್ರದರಾದ ಎಲ್ಲ ದೇವತೆಗಳನ್ನೂ ಸಮಾನವಾಗಿ ಪ್ರೀತಿಸುತ್ತೀಯೆ. ಆ ದೇವತೆಗಳೂ ಸಹ ನಿನ್ನನ್ನು ಪ್ರೀತಿಸುತ್ತಾರೆ. ಈ ವಸು-ರುದ್ರ-ಆದಿತ್ಯ, ವಿಶ್ವೇದೇವರು ಮತ್ತು ಆಯುಷ್ಪ್ರದದೇವರು ಇವರ ಪ್ರೀತಿಗಾಗಿ ನಿನ್ನನ್ನು ಉಪಧಾನ ಮಾಡುತ್ತೇನೆ. ವೈಶ್ವಾನರಾಗ್ನಿಯ ಪ್ರೀತಿಗಾಗಿ ನಿನ್ನನ್ನು ಉಪಧಾನ ಮಾಡುತ್ತೇನೆ. ಇದನ್ನು ಅಶ್ವಿನೀದೇವತೆಗಳು ಸ್ಥಿರಗೊಳಿಸಲಿ.

ಶ್ರೋತ್ರಂ ಮೇ ಶ್ಲೋಕಯಾಪಸ್ಪಿನ್ವೌಷಧೀರ್ಜಿನ್ವ ದ್ವಿಪಾತ್ಪಾಹಿ

ಚತುಷ್ಪಾದವ ದಿವೋ ವೃಷ್ಟಿಮೇರಯ ॥ ೯-4 ॥

[ಸುವೀರಂ ಭುವನಾನಾಮುರ್ವ್ಯಾ ಸಪ್ತದಶ ಚ ॥]

---

ಶ್ರೋತ್ರಮ್ । ಮೇ । ಶ್ಲೋಕಯ । ಅಪಃ । ಪಿನ್ವ । ಓಷಧೀಃ । ಜಿನ್ವ । ದ್ವಿಪಾದಿತಿ ದ್ವಿ-ಪಾತ್ । ಪಾಹಿ । ಚತುಷ್ಪಾದಿತಿ ಚತುಃ-ಪಾತ್ । ಅವ । ದಿವಃ । ವೃಷ್ಟಿಮ್ । ಏತಿ । ಈರಯ ॥ (೯) ॥

---

| ಮಂತ್ರ | ವಿನಿಯೋಗ |
|---|---|
| ಅಪಸ್ಪಿನ್ವ...ಏರಯ ॥ | ಐದು *ವೃಷ್ಟಿಸನೀಷ್ಟಕೆಗಳ [ಅಪಸ್ಯೇಷ್ಟಕೆಗಳು] ಉಪಧಾನವನ್ನು ಮಾಡಲು. |

---

▲ [ಹೇ! ಇಷ್ಟಕೆಯೇ!] ಅಪಃ=ಜಲದೇವತೆಗಳನ್ನು; ಪಿನ್ವ=ಸಂತೋಷಗೊಳಿಸು; ಓಷಧೀಃ=ಸಸ್ಯಾದಿಗಳನ್ನು [ವೃಷ್ಟಿಯಿಂದ] ಜಿನ್ವ=ಸಂತುಷ್ಟಿಗೊಳಿಸು; ದ್ವಿಪಾತ್ ಪಾಹಿ=ಮಾನವಶರೀರವನ್ನೂ ರಕ್ಷಿಸು; ಚತುಷ್ಪಾತ್ ಅವ=ಪ್ರಾಣಿಶರೀರವನ್ನೂ ಕಾಪಾಡು; ದಿವಃ=ಅಂತರಿಕ್ಷದಿಂದ; ವೃಷ್ಟಿಮ್=ಮಳೆಯನ್ನು; ಏರಯ=ಸರ್ವತ್ರ ಸುರಿಯುವಂತೆ ಮಾಡು.

---

ಹೇ! ಇಷ್ಟಕೆಯೇ! ನೀನು ನನ್ನ ಪ್ರಾಣ-ಅಪಾನ-ವ್ಯಾನವಾಯುಗಳನ್ನು ಕಾಪಾಡು. ನನ್ನ ನೇತ್ರವು ಪ್ರಕಾಶಿಸುವಂತೆ ಮಾಡು. ನನ್ನ ಕಿವಿಯು ಅನೇಕ ವೇದಶಾಸ್ತ್ರಾದಿಗಳನ್ನು ಕೇಳಲು ಸಮರ್ಥವಾಗಲಿ. ಇದಕ್ಕಾಗಿ ಇಷ್ಟಕೋಪಧಾನವನ್ನು ಮಾಡುತ್ತೇನೆ.

---

* ಇಷ್ಟಕೋಪಧಾನದಿಂದ ವೃಷ್ಟಿಯನ್ನು ಕೊಡುವುದರಿಂದ 'ವೃಷ್ಟಿಸನಿ'ಗಳೂ, ಮಂತ್ರದಲ್ಲಿ 'ಅಪ್' ಶಬ್ದವಿರುವುದರಿಂದ ಅಪಸ್ಯೇಷ್ಟಕಗಳೂ ಆಗಿವೆ.

ಹೇ! ಇಷ್ಟಕೆಯೇ! ನೀನು ಜಲದೇವತೆಗಳನ್ನು ಸಂತೋಷಗೊಳಿಸು. ಸಸ್ಯಾದಿಗಳಿಗೆ ವೃಷ್ಟಿಯು ಬರುವಂತೆ ಮಾಡು. ಮನುಷ್ಯರನ್ನೂ, ಪ್ರಾಣಿಗಳನ್ನೂ ರಕ್ಷಿಸು. ಆಕಾಶ ದಿಂದ ಮಳೆಯು ಎಲ್ಲೆಡೆ ಸುರಿಯುವಂತೆ ಮಾಡು. ಇವು ಐದು ವೃಷ್ಟಿಸನೀಷ್ಟಕೆಗಳು ಅಥವಾ ಅಪಸ್ಯೇಷ್ಟಕೆಗಳು.

---

## ವಿನಿಯೋಗಸಂಗ್ರಹ

ದ್ವಿತೀಯಸ್ಯಾಂ ಚಿತೌ ಪಂಚ 1-5ಧ್ರುವೇತ್ಯಾದ್ಯಾಶ್ವಿನೀಸ್ತಥಾ ।

ಪಂಚರ್ತವ್ಯಾಃ 6-10ಸಜೂರ್ಮಂತ್ರೈರಾದ್ಯಂತಾವನುಷಂಗಕೌ ॥

ವಸುರುದ್ರಾದಿತ್ಯವಿಶ್ವೈರ್ದೇವೈರ್ಮಂತ್ರಭಿದಾ ಭವೇತ್ ।

11-15 ಪ್ರಾಣಂ ಪ್ರಾಣಭೃತಃ ಪಂಚ 16-20ಹ್ಯಪ್ಸೋಽಪಸ್ಯಾಶ್ಚ ಪಂಚ ಹಿ ॥

ತಾ ಏವ ವೃಷ್ಟಿಸನ್ಯಾಖ್ಯಾಃ ಪ್ರೋಕ್ತಾ ಮಂತ್ರಾಸ್ತು ವಿಂಶತಿಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–20



## ॥ ಪಂಚಮೋಽನುವಾಕಃ ॥

# ತ್ರ್ಯವಿರ್ವಯಸ್ತ್ರಿಷ್ಟುಪ್ಛಂದೋ ದಿತ್ಯವಾಡ್ವಯೋ

---

ತ್ರ್ಯವಿರಿತಿ ತ್ರಿ-ಅವಿಃ । ವಯಃ । ತ್ರಿಷ್ಟುಪ್ । ಛಂದಃ । ದಿತ್ಯವಾಡಿತಿ ದಿತ್ಯ-ವಾಟ್ ।

ವಯಃ ।

---

ನಾಲ್ಕನೆಯ ಅನುವಾಕದಲ್ಲಿ ಅಶ್ವಿನ್ಯಾದಿ ಇಷ್ಟಕೋಪಧಾನಮಂತ್ರಗಳು ಹೇಳಲ್ಪಟ್ಟಿವೆ. ಈ ಐದನೆಯ ಅನುವಾಕದಲ್ಲಿ ವಯಸ್ಯೇಷ್ಟಕೋಪಧಾನವು ಹೇಳಲ್ಪಟ್ಟಿದೆ. ಇವುಗಳಿಗೆ ಸಂಬಂಧಿಸಿದ ವಿಶೇಷವಿಧಿಗಳು ಐದನೆಯ ಕಾಂಡದಲ್ಲಿ ಇವೆ. ಈ ಅನುವಾಕದಲ್ಲಿ ಹೇಳಿರುವ ಛಂದಸ್ಸುಗಳಲ್ಲಿ ಪ್ರಸಿದ್ಧವಾದ ಛಂದಸ್ಸುಗಳೂ ಇವೆ. ವಿವಲ-ವಿಶಾಲ ಮುಂತಾದವು ಲೋಕಪ್ರಸಿದ್ಧವಾದ ಛಂದಸ್ಸುಗಳಲ್ಲ. ಅವು ಶತಪಥಬ್ರಾಹ್ಮಣದಿಂದ ತಿಳಿಯುತ್ತವೆ. ಅವಿ-ದಿತ್ಯವಾಟ್-ತುರ್ಯವಾಟ್-ಪಂಚಾವಿ-ಮುಂತಾದ ಶಬ್ದಗಳಿಂದ ಅವುಗಳ ಪ್ರಸಿದ್ಧವಾದ ಅರ್ಥದ ಮೂಲಕ ಆ ಅರ್ಥದ ಪ್ರಾಣಿಯ ವಯಸ್ಸನ್ನೂ ಅದರ ತಾರತಮ್ಯವನ್ನೂ ಊಹಿಸಿ ತಿಳಿಯಬೇಕು.

---

| ಮಂತ್ರ | ವಿನಿಯೋಗ |
|---|---|
| **ತ್ರ್ಯವಿರ್ವಯಃ...ಪ್ರಜಾಪತಿಶ್ಛಂದಃ ॥** | ವಯಸ್ಯೇಷ್ಟಕೋಪಧಾನವನ್ನು ಮಾಡಲು. |

---

▲ [ಹೇ! ಇಷ್ಟಕೆಯೇ!] [ನೀನು] **ತ್ರ್ಯವಿಃ ವಯಃ**=ಒಂದೂವರೆ ವರ್ಷದ ವಯಃಸ್ವರೂಪಳು; **ತ್ರಿಷ್ಟುಪ್ ಛಂದಃ**=ನಲವತ್ತುನಾಲ್ಕು ಅಕ್ಷರಗಳುಳ್ಳ ತ್ರಿಷ್ಟುಪ್‌ಛಂದೋರೂಪಳು; [ನಿನ್ನನ್ನು ಉಪಧಾನ ಮಾಡುತ್ತೇನೆ][ನೀನು] **ದಿತ್ಯವಾಟ್ ವಯಃ**=ಎರಡು ವರ್ಷವಯಸ್ಸಿನ ರೂಪದವಳು;

ವಿರಾಟ್ಛಂದಃ ಪಂಚಾವಿರ್ವಯೋ ಗಾಯತ್ರೀ ಛಂದ

ಸ್ತ್ರಿವತ್ಸೋ ವಯ ಉಷ್ಣಿಹಾ ಛಂದಸ್ತುರ್ಯವಾ

ಡ್ವಯೋಽನುಷ್ಟುಪ್ಛಂದಃ ಪಷ್ಠವಾದ್ವಯೋ ಬೃಹತೀ ಛಂದ

ಉಕ್ಷಾ ವಯಃ ಸತೋಬೃಹತೀ ಛಂದ

---

ವಿರಾಡಿತಿ ವಿ-ರಾಟ್ । ಛಂದಃ । ಪಂಚಾವಿರಿತಿ ಪಂಚ-ಅವಿಃ । ವಯಃ । ಗಾಯತ್ರೀ । ಛಂದಃ । ತ್ರಿವತ್ಸ ಇತಿ ತ್ರಿ-ವತ್ಸಃ । ವಯಃ । ಉಷ್ಣಿಹಾ । ಛಂದಃ । ತುರ್ಯವಾಡಿತಿ ತುರ್ಯ-ವಾಟ್ । ವಯಃ । ಅನುಷ್ಟುಬಿತ್ಯನು-ಸ್ತುಪ್ । ಛಂದಃ । ಪಷ್ಠವಾದಿತಿ ಪಷ್ಠ-ವಾತ್ । ವಯಃ । ಬೃಹತೀ । ಛಂದಃ । ಉಕ್ಷಾ । ವಯಃ । ಸತೋಬೃಹತೀತಿ ಸತಃ-ಬೃಹತೀ । ಛಂದಃ ।

---

**ವಿರಾಟ್ ಛಂದಃ**=ದಶಾಕ್ಷರರೂಪಳಾದ ವಿರಾಟ್ ಛಂದಸ್ಸು ನೀನು; **ಪಂಚಾವಿಃ ವಯಃ**=ಎರಡೂವರೆ ವರ್ಷರೂಪದವಳು; **ಗಾಯತ್ರೀ ಛಂದಃ**=ಗಾಯತ್ರೀ ರೂಪಳು; **ತ್ರಿವತ್ಸಃ ವಯಃ**=ತ್ರಿವರ್ಷರೂಪದವಳು; **ಉಷ್ಣಿಹಾ ಛಂದಃ**=ಉಷ್ಣಿಕ್ ಛಂದೋರೂಪದವಳಾಗಿದ್ದೀಯೆ; **ತುರ್ಯವಾಟ್ ವಯಃ**=ಮೂರೂವರೆ ವರ್ಷದ ವಯೋರೂಪಳು; **ಅನುಷ್ಟುಪ್ ಛಂದಃ**=ಅನುಷ್ಟುಪ್ ಛಂದೋರೂಪಳು; **ಪಷ್ಠವಾತ್ ವಯಃ**=ನಾಲ್ಕು ವರ್ಷ ವಯಸ್ಸಿನ ರೂಪದವಳಾಗಿದ್ದೀಯೆ. **ಬೃಹತೀ ಛಂದಃ**=ಬೃಹತೀ ಛಂದಸ್ಸಿನ ರೂಪದವಳಾಗಿರುವೆ. **ಉಕ್ಷಾ ವಯಃ**=[ಸೇಚನ ಸಮರ್ಥ] ಹೋರಿಯಂತೆ ನಾಲ್ಕೂವರೆ ವರ್ಷ ವಯಸ್ಸಿನ ರೂಪದವಳು; **ಸತೋ ಬೃಹತೀ ಛಂದಃ**=ಸತೋಬೃಹತಿಯೆಂಬ ಛಂದೋರೂಪದವಳಾಗಿರುವೆ;

---

**ಈ ಅನುವಾಕದಲ್ಲಿ ಶಬ್ದಗಳಿಗೆ ನೀಡುವ ಪ್ರತಿಪದಾರ್ಥದಲ್ಲಿಯೇ ತಾತ್ಪರ್ಯವೂ**

ಋಷಭೋ ವಯಃ ಕಕುಚ್ಛಂದೋ ಧೇನುರ್ವಯೋ
ಜಗತೀ ಛಂದೋಽನಡ್ವಾನ್ ವಯಃ ಪಂಕ್ತಿಶ್ಛಂದೋ
ಬಸ್ತೋ ವಯೋ ವಿವಲಂ ಛಂದೋ ವೃಷ್ಣಿರ್ವಯೋ
ವಿಶಾಲಂ ಛಂದಃ ಪುರುಷೋ ವಯಸ್ತಂದ್ರಂ ಛಂದೋ

---

ಋಷಭಃ । ವಯಃ । ಕಕುತ್ । ಛಂದಃ । ಧೇನುಃ । ವಯಃ । ಜಗತೀ । ಛಂದಃ । ಅನಡ್ವಾನ್ । ವಯಃ । ಪಂಕ್ತಿಃ । ಛಂದಃ । ಬಸ್ತಃ । ವಯಃ । ವಿವಲಮಿತಿ ವಿ–ವಲಮ್ । ಛಂದಃ । ವೃಷ್ಣಿಃ । ವಯಃ । ವಿಶಾಲಮಿತಿ ವಿ–ಶಾಲಮ್ । ಛಂದಃ । ಪುರುಷಃ । ವಯಃ । ತಂದ್ರಮ್ । ಛಂದಃ ।

---

**ಋಷಭಃ ವಯಃ**=ಸಮರ್ಥವಾದ ಹೋರಿಯ ವಯಸ್ಸಿನವಳು; **ಕಕುತ್ ಛಂದಃ**= ಕಕುಪ್ ಎಂಬ ಛಂದಸ್ಸಿನ ರೂಪದವಳಾಗಿದ್ದೀಯೆ; **ಧೇನುಃ ವಯಃ**=ಚೆನ್ನಾಗಿ ಹಾಲು ಕೊಡುವ ಹಸುವಿನ ವಯಸ್ಸಿನವಳು ನೀನು; **ಜಗತೀ ಛಂದಃ**=ಜಗತೀ ಛಂದಸ್ಸು ನೀನು; **ಅನಡ್ವಾನ್ ವಯಃ**=ಗಾಡಿಯನ್ನು ಎಳೆಯಬಲ್ಲ ಎತ್ತಿನ ವಯಸ್ಸಿನವಳು; **ಪಂಕ್ತಿಃ ಛಂದಃ**=ಪಂಕ್ತಿಛಂದೋರೂಪಳು; **ಬಸ್ತಃ ವಯಃ**=ಹೋತದ ವಯೋರೂಪಳು ನೀನು; **ವಿವಲಮ್ ಛಂದಃ**=ವಿವಲವೆಂಬ ಛಂದೋವಿಶೇಷರೂಪಳು ನೀನು; **ವೃಷ್ಣಿಃ ವಯಃ**=ಸಮರ್ಥವಾದ ಗಂಡುಹೋತದ ವಯೋರೂಪಳು; **ವಿಶಾಲಂ ಛಂದಃ**= ವಿಶಾಲವೆಂಬ ಛಂದೋರೂಪಳು; **ಪುರುಷಃ ವಯಃ**=ಮಾನವ ವಯಸ್ಸಿನ ರೂಪವು ನೀನು; **ತಂದ್ರಂ ಛಂದಃ**=ತಂದ್ರವೆಂಬ ಹೆಸರಿನ ಛಂದೋವಿಶೇಷಸ್ವರೂಪಳಾಗಿರುವೆ;

---

ಬಂದಿದೆ. ಕೆಲವು ಶಬ್ದಗಳು ಪರೋಕ್ಷವಾಗಿ ವಯೋವಾಚಕಗಳಾಗಿವೆ. ಅವುಗಳನ್ನು ಭಾಷ್ಯಾನುಸಾರವಾಗಿ ವಿವರಿಸಲಾಗಿದೆ. ಕೆಲವು ಛಂದೋವಿಶೇಷಗಳನ್ನು ಭಾಷ್ಯಕಾರರು

ವ್ಯಾಘ್ರೋ ವಯೋಽನಾಧೃಷ್ಟಂ ಛಂದಸ್ಸಿಗ್ಂಹೋ
ವಯಶ್ಛದಿಶ್ಛಂದೋ ವಿಷ್ಟಂಭೋ ವಯೋಽಧಿಪತಿಶ್ಛಂದಃ,
ಕ್ಷತ್ರಂ ವಯೋ ಮಯಂದಂ ಛಂದೋ ವಿಶ್ವಕರ್ಮಾ
ವಯಃ ಪರಮೇಷ್ಠೀ ಛಂದೋ ಮೂರ್ಧಾ ವಯಃ

---

ವ್ಯಾಘ್ರಃ । ವಯಃ । ಅನಾಧೃಷ್ಟಮಿತ್ಯನಾ-ಧೃಷ್ಟಮ್ । ಛಂದಃ । ಸಿಗ್ಂಹಃ । ವಯಃ । ಛದಿಃ । ಛಂದಃ । ವಿಷ್ಟಂಭ ಇತಿ ವಿ-ಸ್ತಂಭಃ । ವಯಃ । ಅಧಿಪತಿರಿತ್ಯಧಿ-ಪತಿಃ । ಛಂದಃ । ಕ್ಷತ್ರಮ್ । ವಯಃ । ಮಯಂದಮ್ । ಛಂದಃ । ವಿಶ್ವಕರ್ಮೇತಿ ವಿಶ್ವ-ಕರ್ಮಾ । ವಯಃ । ಪರಮೇಷ್ಠೀ । ಛಂದಃ । ಮೂರ್ಧಾ । ವಯಃ ।

---

**ವ್ಯಾಘ್ರಃ ವಯಃ**=ಹುಲಿಯ ವಯಸ್ಸಿನ ರೂಪವು ನೀನು; **ಅನಾಧೃಷ್ಟಂ ಛಂದಃ**= ಅನಾಧೃಷ್ಟವೆಂಬ ಛಂದೋವಿಶೇಷರೂಪಳು ನೀನು; **ಸಿಗ್ಂಹಃ ವಯಃ**=ಸಿಂಹದ ವಯಸ್ಸಿನ ಸ್ವರೂಪಳು ನೀನು; **ಛದಿಃ ಛಂದಃ**=ಛದಿಯೆಂಬ ಛಂದೋರೂಪಳು ನೀನು; **ವಿಷ್ಟಂಭಃ ವಯಃ**=ವಿಷ್ಟಂಭರೂಪನಾದ ಪ್ರಜಾಪತಿಯ ವಯಃಸ್ವರೂಪದವಳು ನೀನು; **ಅಧಿಪತಿಃ ಛಂದಃ**=ಅಧಿಪತಿಯೆಂಬ ಛಂದೋವಿಶೇಷರೂಪದವಳು ನೀನು; **ಕ್ಷತ್ರಮ್ ವಯಃ**=ಬ್ರಾಹ್ಮಣ್ಯಾದಿಗಳು ಬಲವನ್ನು ಹೊಂದುವ ವಯಸ್ಸಿನ ರೂಪದವಳು ನೀನು; **ಮಯಂದಮ್ ಛಂದಃ**=ಮಯಂದವೆಂಬ ಛಂದೋವಿಶೇಷ ರೂಪದವಳು; **ವಿಶ್ವಕರ್ಮಾ ವಯಃ**=ವಿಶ್ವವನ್ನು ಸೃಷ್ಟಿಸುವ ಪ್ರಜಾಪತಿಯ ವಯಸ್ಸಿನ ಸ್ವರೂಪವು ನೀನು; **ಪರಮೇಷ್ಠೀ ಛಂದಃ**=ಪರಮೇಷ್ಠಿಯೆಂಬ ಛಂದೋವಿಶೇಷ ರೂಪಳು; [ಹೇ! ಇಷ್ಟಕೆಯೇ!] [ನೀನು] **ಮೂರ್ಧಾ ವಯಃ**=ವಿರಾಟ್ ಪುರುಷನ ಮೂರ್ಧರೂಪವಾದ ದ್ಯುಲೋಕದ ಕಾಲರೂಪವಾಗಿರುವೆ.

---

**ವಿವರಿಸಿರುವಂತೆ ವಿವರಣೆ ಮಾಡಲಾಗಿದೆ. ಛಂದಃಶಾಸ್ತ್ರದಲ್ಲಿ ಇನ್ನೂ ಹೆಚ್ಚಿನ ವಿವರಣೆ ಇದೆ.**

# ಪ್ರಜಾಪತಿಶ್ಛಂದಃ ॥ ೧೦–5 ॥

[ಪುರುಷೋ ವಯಃ ಷಡ್ವಿಗ್ಂಶತಿಶ್ಚ ॥]

---

ಪ್ರಜಾಪತಿರಿತಿ ಪ್ರಜಾ–ಪತಿಃ । ಛಂದಃ ॥ ೧೦ ॥

---

ಪ್ರಜಾಪತಿಃ ಛಂದಃ=ಪ್ರಜಾಪತಿಯೆಂಬ ಛಂದೋವಿಶೇಷದ ಸ್ವರೂಪದವಳು ನೀನು. [ನಿನ್ನನ್ನು ಉಪಧಾನ ಮಾಡುತ್ತೇನೆ]

---

## ವಿನಿಯೋಗಸಂಗ್ರಹ

1-19 ತ್ರ್ಯವಿರ್ವಯೋ ವಯಸ್ಯಾಖ್ಯಾ ದಧ್ಯಾದೇಕೋನವಿಂಶತಿಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–19

## ॥ ಷಷ್ಠೋಽನುವಾಕಃ ॥

ಇಂದ್ರಾಗ್ನೀ ಅವ್ಯಥಮಾನಾಮಿಷ್ಟಕಾಂ ದೃಗ್ಂಹತಂ

ಯುವಮ್ । ಪೃಷ್ಠೇನ ದ್ಯಾವಾಪೃಥಿವೀ

ಅಂತರಿಕ್ಷಂ ಚ ವಿ ಬಾಧತಾಮ್ ॥

---

ಇಂದ್ರಾಗ್ನೀ ಇತೀಂದ್ರ–ಅಗ್ನೀ । ಅವ್ಯಥಮಾನಾಮ್ । ಇಷ್ಟಕಾಮ್ । ದೃಗ್ಂಹತಮ್ । ಯುವಮ್ ॥ ಪೃಷ್ಠೇನ । ದ್ಯಾವಾಪೃಥಿವೀ ಇತಿ ದ್ಯಾವಾ–ಪೃಥಿವೀ । ಅಂತರಿಕ್ಷಮ್ । ಚ । ವೀತಿ । ಬಾಧತಾಮ್ ॥

---

ಐದನೆಯ ಅನುವಾಕದಲ್ಲಿ ವಯಸ್ಯೆಗಳೆಂಬ ಇಷ್ಟಕೆಗಳ ಉಪಧಾನವು ಹೇಳಲ್ಪಟ್ಟಿತು. ಇಲ್ಲಿಗೆ ದ್ವಿತೀಯಚಿತಿಯ ಉಪಧಾನವು ಮುಕ್ತಾಯವಾಯಿತು. ಈ ಆರನೆಯ ಅನುವಾಕದಲ್ಲಿ ತೃತೀಯಚಿತಿಗೆ ಸಂಬಂಧಿಸಿದಂತೆ ಸ್ವಯಮಾತೃಣ್ಣಾದಿ ಇಷ್ಟಕೆಗಳು ಹೇಳಲ್ಪಡುತ್ತವೆ. ಆ ಉಪಧಾನದ ಮಂತ್ರಗಳು ಇಲ್ಲಿವೆ.

---

| ಮಂತ್ರ | ವಿನಿಯೋಗ |
|---|---|
| ಇಂದ್ರಾಗ್ನೀ...ವಿಬಾಧತಾಮ್ ॥ | ಸ್ವಯಮಾತೃಣ್ಣೇಷ್ಟಕೆಯನ್ನು ಅಭಿಮರ್ಶನ ಮಾಡಿ ಅಶ್ವದಿಂದ ಆಘ್ರಾಣ ಮಾಡಿಸಲು. |

---

▲ ಇಂದ್ರಾಗ್ನೀ=ಇಂದ್ರಾಗ್ನಿದೇವತೆಗಳೇ! ಯುವಮ್=ನೀವಿಬ್ಬರೂ; ಅವ್ಯಥಮಾನಾಮ್ =ಒಡೆಯದೇ ಇರುವ; ಇಷ್ಟಕಾಮ್=ಸ್ವಯಮಾತೃಣ್ಣೇಷ್ಟಕೆಯನ್ನು; ದೃಗ್ಂಹತಮ್ =ದೃಢಪಡಿಸಿರಿ; [ಈ ಇಷ್ಟಕೆಯು] ಪೃಷ್ಠೇನ=ತನ್ನ ಮೇಲ್ಭಾಗದಿಂದ; ದ್ಯಾವಾ ಪೃಥಿವೀ=ದ್ಯುಲೋಕ–ಭೂಲೋಕಗಳನ್ನೂ; ಚ=ಮತ್ತು; ಅಂತರಿಕ್ಷಮ್=ಅಂತರಿಕ್ಷ ವನ್ನೂ; ವಿಬಾಧತಾಮ್=ಬಾಧಿಸುವಂತೆ ವ್ಯಾಪಿಸಲಿ.

ವಿಶ್ವಕರ್ಮಾ ತ್ವಾ ಸಾದಯತ್ವಂತರಿಕ್ಷಸ್ಯ ಪೃಷ್ಠೇ

ವ್ಯಚಸ್ವತೀಂ ಪ್ರಥಸ್ವತೀಂ ಭಾಸ್ವತೀಗ್‌ಂ

ಸೂರಿಮತೀಮಾ ಯಾ ದ್ಯಾಂ ಭಾಸ್ಯಾ

---

ವಿಶ್ವಕರ್ಮೇತಿ ವಿಶ್ವ-ಕರ್ಮಾ । ತ್ವಾ । ಸಾದಯತು । ಅಂತರಿಕ್ಷಸ್ಯ । ಪೃಷ್ಠೇ । ವ್ಯಚಸ್ವತೀಮ್ । ಪ್ರಥಸ್ವತೀಮ್ । ಭಾಸ್ವತೀಮ್ । ಸೂರಿಮತೀಮಿತಿ ಸೂರಿ-ಮತೀಮ್ । ಆ । ಯಾ । ದ್ಯಾಮ್ । ಭಾಸಿ । ಆ ।

---

| ಮಂತ್ರ | ವಿನಿಯೋಗ |
|---|---|
| ವಿಶ್ವಕರ್ಮಾ...ಸೀದ ॥ | ಸ್ವಯಮಾತೃಣ್ಣೇಷ್ಟಕೆಯನ್ನು ಉಪಧಾನ ಮಾಡಲು. |

---

▲ [ಸ್ವಯಮಾತೃಣ್ಣೇಷ್ಟಕೆಯೇ!] **ವಿಶ್ವಕರ್ಮಾ**=ಸೃಷ್ಟ್ಯಾದಿಸರ್ವಕರ್ಮಗಳನ್ನೂ ಮಾಡುವ ಪ್ರಜಾಪತಿಯು; **ಅಂತರಿಕ್ಷಸ್ಯ ಪೃಷ್ಠೇ**=ಅಂತರಿಕ್ಷದ ಮೇಲ್ಭಾಗದಲ್ಲಿ; **ವ್ಯಚಸ್ವತೀಮ್**=ಸುವ್ಯಕ್ತರಾಗಿರುವ; **ಪ್ರಥಸ್ವತೀಮ್**=ವಿಸ್ತಾರಯುಕ್ತವಾಗಿರುವ; **ಭಾಸ್ವತೀಮ್**=ಪ್ರಕಾಶಮಾನಳಾದ; **ಸೂರಿಮತೀಮ್**=ವಿದ್ವಾಂಸರಾದ ಋತ್ವಿಜರುಳ್ಳ; **ತ್ವಾ**=[ಸ್ವಯಮಾತೃಣ್ಣೆಯಾದ] ನಿನ್ನನ್ನು; **ಸಾದಯತು**=ಉಪಧಾನ ಮಾಡಲಿ; **ಯಾ**=ಯಾವ ನೀನು; **ದ್ಯಾಮ್**=ದ್ಯುಲೋಕವನ್ನು; **ಆ ಭಾಸಿ**=ಬೆಳಗುತ್ತೀಯೋ;

---

ಹೇ! ಇಂದ್ರಾಗ್ನಿ ದೇವತೆಗಳೇ! ನೀವಿಬ್ಬರು ಸ್ವಯಮಾತೃಣ್ಣೇಷ್ಟಕೆಯನ್ನು ಗಟ್ಟಿಗೊಳಿಸಿರಿ. ಆ ಇಷ್ಟಕೆಯು ದೃಢವಾಗಿದ್ದು ತನ್ನ ಮೇಲ್ಭಾಗದಲ್ಲಿ ಲೋಕಗಳೆಲ್ಲವನ್ನೂ ಬಾಧಿಸುವಂತೆ/ವ್ಯಾಪಿಸುವಂತೆ ವಿಸ್ತಾರವಾಗಿ ಬೆಳೆಯಲಿ.

ತೃತೀಯಚಯನದ ಮಧ್ಯದಲ್ಲಿ ವಿದ್ವಾಂಸನಲ್ಲದ ಬ್ರಾಹ್ಮಣನೊಡಗೂಡಿ ಸ್ವಯಮಾತೃಣ್ಣೇಷ್ಟಕೆಯನ್ನು ಉಪಧಾನ ಮಾಡಬೇಕು.

ಪೃಥಿವೀಮೋರ್ವಂತರಿಕ್ಷಮಂತರಿಕ್ಷಂ ಯಚ್ಛಾಂತರಿಕ್ಷಂ

ದೃಗ್ಂಹಾಂತರಿಕ್ಷಂ ಮಾ ಹಿಗ್ಂಸೀರ್ವಿಶ್ವಸ್ಮೈ

ಪ್ರಾಣಾಯಾಪಾನಾಯ ವ್ಯಾನಾಯೋದಾನಾಯ ಪ್ರತಿಷ್ಠಾಯೈ

ಚರಿತ್ರಾಯ ವಾಯುಸ್ತ್ವಾಽಭಿ ಪಾತು ಮಹ್ಯಾ ಸ್ವಸ್ತ್ಯಾ

---

ಪೃಥಿವೀಮ್ । ಏತಿ । ಉರು । ಅಂತರಿಕ್ಷಮ್ । ಅಂತರಿಕ್ಷಮ್ । ಯಚ್ಛ ।

ಅಂತರಿಕ್ಷಮ್ । ದೃಗ್ಂಹ । ಅಂತರಿಕ್ಷಮ್ । ಮಾ । ಹಿಗ್ಂಸೀಃ । ವಿಶ್ವಸ್ಮೈ ।

ಪ್ರಾಣಾಯೇತಿ ಪ್ರ-ಅನಾಯ । ಅಪಾನಾಯೇತ್ಯಪ-ಅನಾಯ । ವ್ಯಾನಾಯೇತಿ ವಿ-

ಅನಾಯ । ಉದಾನಾಯೇತ್ಯುತ್-ಅನಾಯ । ಪ್ರತಿಷ್ಠಾಯಾ ಇತಿ ಪ್ರತಿ-ಸ್ಥಾಯೈ ।

ಚರಿತ್ರಾಯ । ವಾಯುಃ । ತ್ವಾ । ಅಭೀತಿ । ಪಾತು । ಮಹ್ಯಾ । ಸ್ವಸ್ತ್ಯಾ ।

---

**ಪೃಥಿವೀಮ್**=ಭೂಲೋಕವನ್ನು; **ಆ** ಭಾಸಿ=ಪ್ರಕಾಶಪಡಿಸುತ್ತೀಯೋ; **ಉರು ಅಂತರಿಕ್ಷಮ್**=ವಿಶಾಲವಾದ ಅಂತರಿಕ್ಷವನ್ನು; **ಆ** ಭಾಸಿ=ಪ್ರಕಾಶಿಸುವಂತೆ ಮಾಡುತ್ತೀಯೋ [ಆ ನೀನು] **ಅಂತರಿಕ್ಷಮ್**=ಅಂತರಿಕ್ಷಲೋಕವನ್ನು; **ಯಚ್ಛ**=[ಗಂಧರ್ವಗಣ-ಅಪ್ಸರೋಗಣಗಳ ಧಾರಕನಾಗಿ] ನಿಯಂತ್ರಿಸು. **ಅಂತರಿಕ್ಷಮ್**=ಅಂತರಿಕ್ಷಲೋಕವನ್ನು; **ದೃಗ್ಂಹ**=ದೃಢಪಡಿಸು; **ಅಂತರಿಕ್ಷಮ್**=ಅಂತರಿಕ್ಷವನ್ನು; **ಮಾ ಹಿಗ್ಂಸೀಃ**=ಹಿಂಸಿಸಬೇಡ; **ವಿಶ್ವಸ್ಮೈ**=ಸಮಸ್ತವಾದ; **ಪ್ರಾಣಾಯ**=ಪ್ರಾಣವಾಯುವೃತ್ತಿಲಾಭಕ್ಕೂ; **ಅಪಾನಾಯ**=ಅಪಾನವಾಯುವೃತ್ತಿಲಾಭಕ್ಕೂ; **ವ್ಯಾನಾಯ**=ವ್ಯಾನವಾಯುವೃತ್ತಿಲಾಭಕ್ಕೂ; **ಉದಾನಾಯ**=ಉದಾನವಾಯುವೃತ್ತಿಲಾಭಕ್ಕೂ; **ಪ್ರತಿಷ್ಠಾಯೈ**=[ನಮ್ಮ ಮನೆಯಲ್ಲಿ] ಸ್ಥಿರವಾಗಿ ಇರುವುದಕ್ಕೂ; **ಚರಿತ್ರಾಯ**=ಶಾಸ್ತ್ರೋಕ್ತವಾದ ಆಚರಣೆಗಳಿಗಾಗಿಯೂ; **ವಾಯುಃ**=ವಾಯುದೇವನು; **ತ್ವಾ**=ನಿನ್ನನ್ನು; **ಮಹ್ಯಾ ಸ್ವಸ್ತ್ಯಾ**=ಮಹತ್ತಾದ ಯೋಗಕ್ಷೇಮಗಳ ಲಾಭದಿಂದಲೂ;

ಭರ್ದಿಷಾ [ಭರ್ದಿಷಾ(೧೧)] ಶಂತಮೇನ ತಯಾ ದೇವತಯಾಂಗಿರಸ್ವದ್ಧ್ರುವಾ ಸೀದ ॥ ರಾಜ್ಞ್ಯಸಿ ಪ್ರಾಚೀ ದಿಗ್ವಿರಾಡಸಿ ದಕ್ಷಿಣಾ

---

ಭರ್ದಿಷಾ । (೧೧) । ಶಂತಮೇನೇತಿ ಶಮ್-ತಮೇನ । ತಯಾ । ದೇವತಯಾ । ಅಂಗಿರಸ್ವತ್ । ಧ್ರುವಾ । ಸೀದ ॥ ರಾಜ್ಞೀ । ಅಸಿ । ಪ್ರಾಚೀ । ದಿಕ್ । ವಿರಾಡಿತಿ ವಿ-ರಾಟ್ । ಅಸಿ । ದಕ್ಷಿಣಾ ।

---

| ಮಂತ್ರ | ವಿನಿಯೋಗ |
|---|---|
| ರಾಜ್ಞ್ಯಸಿ...ಬೃಹತೀ ದಿಕ್ ॥ | ಐದು ದಿಶ್ಯೇಷ್ಟಕೆಗಳನ್ನು ಉಪಧಾನ ಮಾಡಲು. |

---

ಶಂತಮೇನ=ಮಂಗಳಕರವಾದ; ಭರ್ದಿಷಾ=ದೀಪ್ತಿಯಿಂದಲೂ; ಅಭಿ ಪಾತು=ಸುತ್ತಲೂ ಕಾಪಾಡಲಿ. [ಹೇ! ಇಷ್ಟಕೆಯೇ!] ತಯಾ ದೇವತಯಾ=ಆ ನಿನ್ನ ದೇವತೆಯಿಂದ [ಅನುಗೃಹೀತಳಾಗಿ]; ಅಂಗಿರಸ್ವತ್=ಅಂಗಿರೋಮುನಿಗಳ ಚಯನದಲ್ಲಿ ಹೇಗೋ ಹಾಗೆ; ಧ್ರುವಾ ಸೀದ=ನೀನು ಸ್ಥಿರವಾಗಿರು. 🔔 ರಾಜ್ಞೀ=[ಹೇ! ಇಷ್ಟಕೆಯೇ!] ನೀನು ಪ್ರಕಾಶಮಾನಳಾಗಿ; ಪ್ರಾಚೀ ದಿಕ್ ಅಸಿ=ಪೂರ್ವದಿಗ್ರೂಪಳಾಗಿರುವೆ; ವಿರಾಟ್=ವಿಶೇಷವಾಗಿ ಪ್ರಕಾಶಿಸುವ; ದಕ್ಷಿಣಾ ದಿಕ್ ಅಸಿ=ದಕ್ಷಿಣದಿಗ್ರೂಪಳಾಗಿದ್ದೀಯೆ.

---

ಹೇ! ಇಷ್ಟಕೆಯೇ! ವಿಶ್ವಕರ್ಮಪ್ರಜಾಪತಿದೇವನು ಅಂತರಿಕ್ಷದಲ್ಲಿ ಸುವ್ಯಕ್ತಳಾಗಿಯೂ, ವಿಸ್ತೃತಳಾಗಿಯೂ, ಪ್ರಕಾಶಯುಕ್ತಳಾಗಿಯೂ, ವಿದ್ವಾಂಸರಾದ ಋತ್ವಿಜರಿಂದ ಯುಕ್ತಳಾಗಿಯೂ ಇರುವ ನಿನ್ನನ್ನು ಸ್ಥಾಪಿಸಲಿ.

ನೀನು ಲೋಕತ್ರಯವನ್ನೂ ಪ್ರಕಾಶಗೊಳಿಸುತ್ತೀಯೆ. ಅಂತರಿಕ್ಷವನ್ನು ನಿಯಮಿಸು, ದೃಢಪಡಿಸು, ಹಿಂಸಿಸಬೇಡ. ಸಮಸ್ತಪ್ರಾಣಾದಿವಾಯುವೃತ್ತಿಲಾಭಕ್ಕೂ, ಪ್ರತಿಷ್ಠೆಗೂ,

ದಿಕ್ಸಮ್ರಾಡಸಿ ಪ್ರತೀಚೀ ದಿಕ್ಸ್ವರಾಡಸ್ಯುದೀಚೀ

ದಿಗಧಿಪತ್ನ್ಯಸಿ ಬೃಹತೀ ದಿಗಾಯುರ್ಮೇ ಪಾಹಿ ಪ್ರಾಣಂ

ಮೇ ಪಾಹ್ಯಪಾನಂ ಮೇ ಪಾಹಿ

---

ದಿಕ್ । ಸಮ್ರಾಡಿತಿ ಸಮ್-ರಾಟ್ । ಅಸಿ । ಪ್ರತೀಚೀ । ದಿಕ್ । ಸ್ವರಾಡಿತಿ ಸ್ವ-ರಾಟ್ । ಅಸಿ । ಉದೀಚೀ । ದಿಕ್ । ಅಧಿಪತ್ನೀತ್ಯಧಿ-ಪತ್ನೀ । ಅಸಿ । ಬೃಹತೀ । ದಿಕ್ । ಆಯುಃ । ಮೇ । ಪಾಹಿ । ಪ್ರಾಣಮಿತಿ ಪ್ರ-ಅನಮ್ । ಮೇ । ಪಾಹಿ । ಅಪಾನಮಿತ್ಯಪ-ಅನಮ್ । ಮೇ । ಪಾಹಿ ।

---

| ಮಂತ್ರ | ವಿನಿಯೋಗ |
|---|---|
| ಆಯುರ್ಮೇ...ಮೇ ಯಚ್ಛ ॥ | ಪೂರ್ವದಿಕ್ಕಿನಲ್ಲಿ ಹತ್ತು ಪ್ರಾಣಭೃದಿಷ್ಟಕೆಗಳ ಉಪಧಾನಕ್ಕಾಗಿ. |

---

ಸಮ್ರಾಟ್=ಚೆನ್ನಾಗಿ ಶೋಭಿಸುವ; ಪ್ರತೀಚೀ ದಿಕ್ ಅಸಿ=ಪಶ್ಚಿಮದಿಗ್ರೂಪಳಾಗಿ ರುವೆ; ಸ್ವರಾಟ್=ಸ್ವತಃ ಪ್ರಕಾಶಿಸುವ; ಉದೀಚೀ ದಿಕ್ ಅಸಿ=ಉತ್ತರದಿಕ್ಕಿನ ಸ್ವರೂಪ ದವಳಾಗಿರುತ್ತೀಯೆ; ಅಧಿಪತ್ನೀ=ಅಧಿಕವಾಗಿ ಪಾಲಿಸುವ; ಬೃಹತೀ ದಿಕ್ ಅಸಿ= ಪ್ರೌಢವಾದ ಊರ್ಧ್ವದಿಕ್ಕು ನೀನು; [ನಿಮ್ಮನ್ನು ಉಪಧಾನ ಮಾಡುತ್ತೇನೆ] ▲ [ಎಲೈ! ಇಷ್ಟಕೆಯೇ!] ಮೇ ಆಯುಃ=ನನ್ನ ಆಯುಸ್ಸನ್ನು; ಪಾಹಿ=ರಕ್ಷಿಸು; ಮೇ ಪ್ರಾಣಮ್ ಪಾಹಿ=ನನ್ನ ಪ್ರಾಣವಾಯುವನ್ನು ಕಾಪಾಡು; ಮೇ ಅಪಾನಮ್ ಪಾಹಿ=ನನ್ನ ಅಪಾನವಾಯುವನ್ನೂ ರಕ್ಷಿಸು.

---

ಶಾಸ್ತ್ರಾನುಷ್ಠಾನಪ್ರಾಪ್ತಿಗೂ ವಾಯುವು ಯೋಗಕ್ಷೇಮವನ್ನು ಕೊಟ್ಟು, ಮಂಗಳಕರ ವಾದ ದೀಪ್ತಿಯನ್ನು ಕೊಟ್ಟು ಕಾಪಾಡಲಿ.

ನೀನು ದೇವತಾನುಗ್ರಹದಿಂದ ಅಂಗಿರಸರ ಚಯನದಲ್ಲಿ ಹೇಗೋ ಹಾಗೆ ಸ್ಥಿರವಾಗಿರು.

ವ್ಯಾನಂ ಮೇ ಪಾಹಿ ಚಕ್ಷುರ್ಮೇ ಪಾಹಿ ಶ್ರೋತ್ರಂ ಮೇ ಪಾಹಿ ಮನೋ ಮೇ ಜಿನ್ವ ವಾಚಂ ಮೇ ಪಿನ್ವಾಽಽತ್ಮಾನಂ ಮೇ ಪಾಹಿ ಜ್ಯೋತಿರ್ಮೇ ಯಚ್ಛ ॥ ೧೨-6 ॥

[ಛರ್ದಿಷಾ ಪಿನ್ವ ಷಟ್ಚ ॥]

---

ವ್ಯಾನಮಿತಿ ವಿ-ಅನಮ್ । ಮೇ । ಪಾಹಿ । ಚಕ್ಷುಃ । ಮೇ । ಪಾಹಿ । ಶ್ರೋತ್ರಮ್ । ಮೇ । ಪಾಹಿ । ಮನಃ । ಮೇ । ಜಿನ್ವ । ವಾಚಮ್ । ಮೇ । ಪಿನ್ವ । ಆತ್ಮಾನಮ್ । ಮೇ । ಪಾಹಿ । ಜ್ಯೋತಿಃ । ಮೇ । ಯಚ್ಛ ॥ (೧೨) ॥

---

ಮೇ ವ್ಯಾನಮ್ ಪಾಹಿ=ನನ್ನ ವ್ಯಾನವಾಯುವನ್ನು ಪೊರೆ; ಮೇ ಚಕ್ಷುಃ ಪಾಹಿ=ನನ್ನ ಕಣ್ಣನ್ನು ಕಾಪಾಡು; ಮೇ ಶ್ರೋತ್ರಮ್ ಪಾಹಿ=ನನ್ನ ಕಿವಿಯನ್ನು ರಕ್ಷಿಸು; ಮೇ ಮನಃ ಜಿನ್ವ=ನನ್ನ ಮನಸ್ಸನ್ನು ಸಂತೋಷಪಡಿಸು; ಮೇ ವಾಚಮ್ ಪಿನ್ವ=ನನ್ನ ವಾಕ್ ಅನ್ನು ತೃಪ್ತಿಪಡಿಸು; ಮೇ ಆತ್ಮಾನಮ್ ಪಾಹಿ=ನನ್ನ ಜೀವಾತ್ಮನನ್ನು/ದೇಹವನ್ನು ರಕ್ಷಿಸು; ಮೇ=ನನಗೆ; ಜ್ಯೋತಿಃ=ಬೆಳಕನ್ನು; ಯಚ್ಛ=ನೀಡು.

---

ರಾಜ್ಞ್ಯಸಿ ಎಂದು ಆರಂಭಿಸಿ ಐದು ದಿಶ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು. ನಾಲ್ಕು ಮಂತ್ರಗಳಿಂದ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿಯೂ, ಐದನೆಯ ಮಂತ್ರ ದಿಂದ ಮಧ್ಯದಲ್ಲಿಯೂ ಉಪಧಾನವನ್ನು ಮಾಡಬೇಕು.

ಹೇ! ಇಷ್ಟಕೆಗಳೇ! ನೀವು ಬಗೆಬಗೆಯಾಗಿ ಪ್ರಕಾಶಿಸುವವರಾಗಿ ಪೂರ್ವ-ದಕ್ಷಿಣ-ಪಶ್ಚಿಮ-ಉತ್ತರದಿಕ್ಕಿನ ರೂಪದವರಾಗಿರುತ್ತೀರಿ. ನಿಮ್ಮನ್ನು ಉಪಧಾನ ಮಾಡುವೆನು.

ಪೂರ್ವದಿಕ್ಕಿನಲ್ಲಿ ಉಪಧಾನ ಮಾಡಬೇಕಾದ ಹತ್ತು ಪ್ರಾಣಭೃದಿಷ್ಟಕೆಗಳು ಇವು.

ಹೇ! ಇಷ್ಟಕೆಯೇ! ನೀನು ನನ್ನ ಆಯುಸ್ಸನ್ನು ಕಾಪಾಡುತ್ತಾ, ನನ್ನ ಪ್ರಾಣ-ಅಪಾನ-ವ್ಯಾನವಾಯುಗಳನ್ನೂ, ಕಣ್ಣು-ಕಿವಿಗಳನ್ನೂ ರಕ್ಷಿಸು. ಮನಸ್ಸು ಮತ್ತು

ವಾಕ್ಕನ್ನು ಸಂತೋಷಪಡಿಸು. ನನ್ನ ಜೀವಾತ್ಮನನ್ನು/ದೇಹವನ್ನು ರಕ್ಷಿಸಿ, ನನಗೆ ಪ್ರಕಾಶವನ್ನು ಅನುಗ್ರಹಿಸು.

---

## ವಿನಿಯೋಗಸಂಗ್ರಹ

ತೃತೀಯಸ್ಯಾಂ ಚಿತಾವಿಂದ್ರಾ[1] ಸ್ವಯಮಾತೃಣ್ಣಕಾಂ ಸ್ಪೃಶೇತ್ ।
[2] ವಿಶ್ವೇತ್ಯುಪದಧಾತ್ಯೇನಾಂ [3-7]ರಾಜ್ಞೀ ದಿಶ್ಯಾಸ್ತು ಪಂಚಭಿಃ ॥
[8-17] ಆಯುರ್ದಶ ಪ್ರಾಣಭೃತೋ ಮಂತ್ರಾಃ ಸಪ್ತದಶೇರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–17

ಊ❀ಊಊ❀ಊ

# ॥ ಸಪ್ತಮೋಽನುವಾಕಃ ॥

## ಮಾ ಛಂದಃ ಪ್ರಮಾ ಛಂದಃ

ಮಾ । ಛಂದಃ । ಪ್ರಮೇತಿ ಪ್ರ–ಮಾ । ಛಂದಃ ।

ಹಿಂದಿನ ಆರನೆಯ ಅನುವಾಕದಲ್ಲಿ ಸ್ವಯಮಾತೃಣ್ಣೆಯೇ ಮೊದಲಾದ ಇಷ್ಟಕೆಗಳ ಉಪಧಾನಮಂತ್ರಗಳು ಹೇಳಲ್ಪಟ್ಟವು. ಈ ಏಳನೆಯ ಅನುವಾಕದಲ್ಲಿ ಬೃಹತೀ ಮುಂತಾದ ಇಷ್ಟಕೆಗಳ ಉಪಧಾನಮಂತ್ರಗಳು ಹೇಳಲ್ಪಡುತ್ತವೆ. ಪ್ರಾರಂಭದಲ್ಲಿ ಬೃಹತೀಷ್ಟಕೋಪಧಾನಮಂತ್ರಗಳು ಉಕ್ತವಾಗಿವೆ.

| ಮಂತ್ರ | ವಿನಿಯೋಗ |
|---|---|
| **ಮಾ ಛಂದಃ...ವರುಣೋ ದೇವತಾ ॥** | **ಮೂವತ್ತಾರು ಬೃಹತೀಷ್ಟಕೆಗಳ ಉಪಧಾನಕ್ಕಾಗಿ** |
| ೧) ಮಾ ಛಂದಃ...ಜಗತೀ ಛಂದಃ ॥ | ದಕ್ಷಿಣದಿಕ್ಕಿನಲ್ಲಿ ಉಪಧಾನಕ್ಕಾಗಿ (೧೨) |
| ೨) ಪೃಥಿವೀ ಛಂದಃ...ಅಶ್ವಶ್ಛಂದಃ ॥ | ಪಶ್ಚಿಮದಿಕ್ಕಿನಲ್ಲಿ ಉಪಧಾನಕ್ಕಾಗಿ (೧೨) |
| ೩) ಅಗ್ನಿರ್ದೇವತಾ...ವರುಣೋ ದೇವತಾ ॥ | ಉತ್ತರದಿಕ್ಕಿನಲ್ಲಿ ಉಪಧಾನಕ್ಕಾಗಿ (೧೨) |

[ಹೇ! ಇಷ್ಟಕೆಯೇ!] [ನೀನು] ***ಮಾ ಛಂದಃ**=ಮಾಛಂದೋರೂಪಳಾಗಿರುವೆ; [ನೀನು] **ಪ್ರಮಾ ಛಂದಃ**=ಪ್ರಮಾ ಛಂದಃಸ್ವರೂಪದವಳಾಗಿದ್ದೀಯೆ;

ಈ ಅನುವಾಕದಲ್ಲಿರುವ **'ಮಾ'** ಮುಂತಾದ ಛಂದಸ್ಸುಗಳು ವೇದದಲ್ಲಿ ಪ್ರಸಿದ್ಧವಾಗಿವೆ. ಗಾಯತ್ರೀ ಮುಂತಾದವುಗಳು ಲೋಕದಲ್ಲಿಯೂ ಪ್ರಸಿದ್ಧವಾಗಿವೆ.

* 'ಮಾ ಛಂದಃ' ಎಂಬ ಮಂತ್ರದ ಬಳಿಕ **'ತ್ವಾ ಉಪದಧಾಮಿ'**=[ನಿನ್ನನ್ನು ಉಪಧಾನ ಮಾಡುತ್ತೇನೆ] ಎಂಬುದಾಗಿ ಅಧ್ಯಾಹಾರ ಮಾಡಿ ಅನ್ವಯಿಸಿಕೊಳ್ಳಬೇಕು. ಈ ರೀತಿ ಎಲ್ಲ 36 ಮಂತ್ರಗಳಲ್ಲಿಯೂ ಅನ್ವಯ.

ಪ್ರತಿಮಾ ಛಂದೋಽಸ್ರೀವಿಶ್ಛಂದಃ ಪಂಕ್ತಿಶ್ಛಂದ ಉಷ್ಣಿಹಾ ಛಂದೋ ಬೃಹತೀ ಛಂದೋಽನುಷ್ಟುಪ್ಛಂದೋ ವಿರಾ- ಟ್ಛಂದೋ ಗಾಯತ್ರೀ ಛಂದಸ್ತ್ರಿಷ್ಟುಪ್ಛಂದೋ ಜಗತೀ ಛಂದಃ

---

ಪ್ರತಿಮೇತಿ ಪ್ರತಿ-ಮಾ । ಛಂದಃ । ಅಸ್ರೀವಿಃ । ಛಂದಃ । ಪಂಕ್ತಿಃ । ಛಂದಃ । ಉಷ್ಣಿಹಾ । ಛಂದಃ । ಬೃಹತೀ । ಛಂದಃ । ಅನುಷ್ಟುಬಿತ್ಯನು-ಸ್ತುಪ್ । ಛಂದಃ । ವಿರಾಡಿತಿ ವಿ- ರಾಟ್ । ಛಂದಃ । ಗಾಯತ್ರೀ । ಛಂದಃ । ತ್ರಿಷ್ಟುಪ್ । ಛಂದಃ । ಜಗತೀ । ಛಂದಃ ।

---

[ನೀನು] **ಪ್ರತಿಮಾ ಛಂದಃ**=ಪ್ರತಿಮಾಛಂದೋರೂಪದವಳಾಗಿರುವೆ; [ನೀನು] **ಅಸ್ರೀವಿಃ ಛಂದಃ**=ಅಸ್ರೀವಿಛಂದೋರೂಪದವಳು; [ನೀನು] **ಪಂಕ್ತಿಃ ಛಂದಃ**= ಪಂಕ್ತಿಛಂದಸ್ಸಿನ ಸ್ವರೂಪದವಳಾಗಿರುವೆ. [ನೀನು] **ಉಷ್ಣಿಹಾ ಛಂದಃ**=ಉಷ್ಣಿಕ್ ಛಂದೋರೂಪಳು; [ನೀನು] **ಬೃಹತೀ ಛಂದಃ**=ಬೃಹತೀಛಂದಸ್ಸಾಗಿರುವೆ; [ನೀನು] **ಅನುಷ್ಟುಪ್ ಛಂದಃ**=ಅನುಷ್ಟುಪ್‌ಛಂದೋರೂಪಳು; [ನೀನು] **ವಿರಾಟ್ ಛಂದಃ**= ವಿರಾಟ್ ಛಂದಸ್ಸಾಗಿರುವೆ; [ನೀನು] **ಗಾಯತ್ರೀ ಛಂದಃ**=ಗಾಯತ್ರೀಛಂದಸ್ಸಾಗಿ ರುವೆ; [ನೀನು] **ತ್ರಿಷ್ಟುಪ್ ಛಂದಃ**=ತ್ರಿಷ್ಟುಪ್‌ಛಂದೋರೂಪಳಾಗಿರುವೆ; [ನೀನು] **ಜಗತೀ ಛಂದಃ**=ಜಗತೀಛಂದೋರೂಪಳಾಗಿರುವೆ; [ಇವು ಮೊದಲಿನ ೧೨ ಇಷ್ಟಕೆಗಳ ಮಂತ್ರಗಳು]

---

**ಬೃಹತೀಷ್ಟಕೆಗಳನ್ನು ಉಪಧಾನ ಮಾಡುವಾಗ ಕ್ರಮವಾಗಿ ದಕ್ಷಿಣ, ಪಶ್ಚಿಮ ಹಾಗೂ ಉತ್ತರದಿಕ್ಕಿನಲ್ಲಿ ಉಪಧಾನ ಮಾಡಬೇಕು. ಒಂದೊಂದು ದಿಕ್ಕಿನಲ್ಲಿ ಹನ್ನೆರಡು ಇಷ್ಟಕೆ ಗಳನ್ನು ಉಪಧಾನ ಮಾಡಬೇಕು. ಇಷ್ಟಕೆಗಳನ್ನು ಎರಡು ಖಂಡದಲ್ಲಿ ಛಂದೋರೂಪ ವಾಗಿಯೂ, ದೇವತಾರೂಪವಾಗಿಯೂ ಸ್ತುತಿಸಿ ಉಪಧಾನವನ್ನು ಮಾಡಬೇಕು. ಇವು ೩೬ ಬೃಹತೀಷ್ಟಕೆಗಳು.**

**ಪೃಥಿವೀ ಛಂದೋಽಂತರಿಕ್ಷಂ ಛಂದೋ ದ್ಯೌಶ್ಛಂದಃ ಸಮಾಶ್ಛಂದೋ ನಕ್ಷತ್ರಾಣಿ ಛಂದೋ ಮನಶ್ಛಂದೋ ವಾಕ್ಛಂದಃ ಕೃಷಿಶ್ಛಂದೋ ಹಿರಣ್ಯಂ ಛಂದೋ ಗೌಶ್ಛಂದೋಽಜಾ ಛಂದೋಽಶ್ವಶ್ಛಂದಃ ।**

---

**ಪೃಥಿವೀ । ಛಂದಃ । ಅಂತರಿಕ್ಷಮ್ । ಛಂದಃ । ದ್ಯೌಃ । ಛಂದಃ । ಸಮಾಃ । ಛಂದಃ । ನಕ್ಷತ್ರಾಣಿ । ಛಂದಃ । ಮನಃ । ಛಂದಃ । ವಾಕ್ । ಛಂದಃ । ಕೃಷಿಃ । ಛಂದಃ । ಹಿರಣ್ಯಮ್ । ಛಂದಃ । ಗೌಃ । ಛಂದಃ । ಅಜಾ । ಛಂದಃ । ಅಶ್ವಃ । ಛಂದಃ ॥**

---

[ಮುಂದಿನ ಹನ್ನೆರಡು ಇಷ್ಟಕೆಗಳ ಮಂತ್ರಗಳು ಇವು] [ಎಲೈ! ಇಷ್ಟಕೆಯೇ! ನೀನು] **ಪೃಥಿವೀ ಛಂದಃ**=ಪೃಥಿವೀಛಂದೋರೂಪಳಾಗಿರುವೆ; [ನೀನು] **ಅಂತರಿಕ್ಷಮ್ ಛಂದಃ**= ಅಂತರಿಕ್ಷಛಂದೋರೂಪಳು; [ನೀನು] **ದ್ಯೌಃ ಛಂದಃ**=ದ್ಯುಛಂದೋರೂಪಳು; [ನೀನು] **ಸಮಾಃ ಛಂದಃ**=ಸಮಾಗಳೆಂಬ ಛಂದೋರೂಪಳು; [ನೀನು] **ನಕ್ಷತ್ರಾಣಿ ಛಂದಃ**= ನಕ್ಷತ್ರಛಂದಸ್ಸ್ವರೂಪಳು; [ನೀನು] **ಮನಃ ಛಂದಃ**=ಮನಶ್ಛಂದೋರೂಪಳು; [ನೀನು] **ವಾಕ್ ಛಂದಃ**=ವಾಕ್‌ಛಂದಸ್ಸ್ವರೂಪಳು; [ನೀನು] **ಕೃಷಿಃ ಛಂದಃ**=ಕೃಷಿಛಂದೋ ರೂಪಳಾಗಿರುವೆ; [ನೀನು] **ಹಿರಣ್ಯಮ್ ಛಂದಃ**=ಹಿರಣ್ಯಛಂದೋರೂಪಳಾಗಿದ್ದೀಯೆ; [ನೀನು] **ಗೌಃ ಛಂದಃ**=ಗೋಛಂದಸ್ಸ್ವರೂಪಳಾಗಿರುವೆ; [ನೀನು] **ಅಜಾ ಛಂದಃ**= ಅಜಾಛಂದೋರೂಪಳು; [ನೀನು] **ಅಶ್ವಃ ಛಂದಃ**=ಅಶ್ವಛಂದೋರೂಪಳು; [ಇವು ಎರಡನೆಯ ೧೨ ಇಷ್ಟಕೆಗಳ ಮಂತ್ರಗಳು]

---

ವಾಲಖಿಲ್ಯೇಷ್ಟಕೆಗಳು ಹದಿನಾಲ್ಕು. ಇವುಗಳನ್ನು ಉಪಧಾನ ಮಾಡುವಾಗ ಏಳು ಇಷ್ಟಕೆಗಳನ್ನು ಪೂರ್ವದಿಕ್ಕಿನಲ್ಲಿಯೂ, ಉಳಿದ ಏಳು ಇಷ್ಟಕೆಗಳನ್ನು ಪಶ್ಚಿಮ ದಿಕ್ಕಿನ ಲ್ಲಿಯೂ ಉಪಧಾನ ಮಾಡಬೇಕು. ಈ ಇಷ್ಟಕೆಗಳನ್ನು ಉಪಧಾನ ಮಾಡುವಾಗ

ಅಗ್ನಿರ್ದೇವತಾ[ದೇವತಾ(೧೩)]ವಾತೋ ದೇವತಾ ಸೂರ್ಯೋ ದೇವತಾ ಚಂದ್ರಮಾ ದೇವತಾ ವಸವೋ ದೇವತಾ ರುದ್ರಾ ದೇವತಾಽಽದಿತ್ಯಾ ದೇವತಾ ವಿಶ್ವೇ ದೇವಾ ದೇವತಾ ಮರುತೋ ದೇವತಾ ಬೃಹಸ್ಪತಿರ್ದೇವತೇಂದ್ರೋ ದೇವತಾ ವರುಣೋ ದೇವತಾ

---

ಅಗ್ನಿಃ । ದೇವತಾ । (೧೩) । ವಾತಃ । ದೇವತಾ । ಸೂರ್ಯಃ । ದೇವತಾ । ಚಂದ್ರಮಾಃ । ದೇವತಾ । ವಸವಃ । ದೇವತಾ । ರುದ್ರಾಃ । ದೇವತಾ । ಆದಿತ್ಯಾಃ । ದೇವತಾ । ವಿಶ್ವೇ । ದೇವಾಃ । ದೇವತಾ । ಮರುತಃ । ದೇವತಾ । ಬೃಹಸ್ಪತಿಃ । ದೇವತಾ । ಇಂದ್ರಃ । ದೇವತಾ । ವರುಣಃ । ದೇವತಾ ।

---

[ಮೂರನೆಯ ೧೨ ಇಷ್ಟಕೆಗಳ ಮಂತ್ರಗಳು ಇವು] [ಎಲೈ! ಇಷ್ಟಕೆಯೇ! ನೀನು] **ಅಗ್ನಿಃ ದೇವತಾ**=ಅಗ್ನಿದೇವತಾರೂಪಳು; [ನೀನು] **ವಾತಃ ದೇವತಾ**=ವಾತದೇವತಾಸ್ವರೂಪದವಳಾಗಿದ್ದೀಯೆ; [ನೀನು] **ಸೂರ್ಯಃ ದೇವತಾ**=ಸೂರ್ಯದೇವತಾಸ್ವರೂಪದವಳು; [ನೀನು] **ಚಂದ್ರಮಾಃ ದೇವತಾ**=ಚಂದ್ರಮಸನೆಂಬ ದೇವತಾಸ್ವರೂಪದವಳು; [ನೀನು] **ವಸವಃ ದೇವತಾ**=ವಸುದೇವತಾಸ್ವರೂಪದವಳಾಗಿರುವೆ; [ನೀನು] **ರುದ್ರಾಃ ದೇವತಾ**=ರುದ್ರದೇವತಾರೂಪದವಳು; [ನೀನು] **ಆದಿತ್ಯಾಃ ದೇವತಾ**=ಆದಿತ್ಯದೇವತಾರೂಪಳು; [ನೀನು] **ವಿಶ್ವೇ ದೇವಾಃ ದೇವತಾ**=ವಿಶ್ವೇದೇವದೇವತಾರೂಪಳು; [ನೀನು] **ಮರುತಃ ದೇವತಾ**=ಮರುದ್ದೇವತಾರೂಪಳು; [ನೀನು] **ಬೃಹಸ್ಪತಿಃ ದೇವತಾ**=ಬೃಹಸ್ಪತಿದೇವತಾಸ್ವರೂಪದವಳಾಗಿರುವೆ; [ನೀನು] **ಇಂದ್ರಃ ದೇವತಾ**=ಇಂದ್ರದೇವತಾರೂಪಳು; [ನೀನು] **ವರುಣಃ ದೇವತಾ**=ವರುಣದೇವತಾಸ್ವರೂಪಳು; [ಇವು ಮೂರನೆಯ ಹನ್ನೆರಡು ಇಷ್ಟಕೆಗಳ ಮಂತ್ರಗಳು]

ಮೂರ್ಧಾಽಸಿ ರಾಡ್ಧ್ರುವಾಽಸಿ ಧರುಣಾ ಯನ್ತ್ರ್ಯಸಿ

ಯಮಿತ್ರೀಷೇ ತ್ವೋರ್ಜೇ ತ್ವಾ ಕೃಷ್ಯೈ ತ್ವಾ ಕ್ಷೇಮಾಯ ತ್ವಾ

---

ಮೂರ್ಧಾ । ಅಸಿ । ರಾಟ್ । ಧ್ರುವಾ । ಅಸಿ । ಧರುಣಾ । ಯಂತ್ರೀ । ಅಸಿ । ಯಮಿತ್ರೀ ।

ಇಷೇ । ತ್ವಾ । ಊರ್ಜೇ । ತ್ವಾ । ಕೃಷ್ಯೈ । ತ್ವಾ । ಕ್ಷೇಮಾಯ । ತ್ವಾ ।

---

| ಮಂತ್ರ | ವಿನಿಯೋಗ |
| --- | --- |
| ಮೂರ್ಧಾಽಸಿ...ಬಲಾಯ ತ್ವಾ ॥ | ಹದಿನಾಲ್ಕು ವಾಲಖಿಲ್ಯೇಷ್ಟಕೆಗಳ ಉಪಧಾನಕ್ಕಾಗಿ. |

---

🔔 [ಹೇ! ಇಷ್ಟಕೆಯೇ! ನೀನು] **ಮೂರ್ಧಾ**=ತಲೆಯಂತೆ ಮುಖ್ಯಳೂ; **ರಾಟ್ ಅಸಿ**=ಪ್ರಕಾಶಮಾನಳೂ ಆಗಿರುವೆ; **ಧ್ರುವಾ ಅಸಿ**=ಸ್ಥಿರವಾದವಳು; **ಧರುಣಾ**= ಧಾರಣಹೇತುವೂ [ಆಗಿರುವೆ] **ಯಂತ್ರೀ ಅಸಿ**=[ನೀನು] ಸ್ವತಃ ಹತೋಟಿಯಲ್ಲಿ ಇರುವೆ; **ಯಮಿತ್ರೀ**=ಬೇರೆಯವರನ್ನು ನಿಯಮದಲ್ಲಿಡುವೆ; **ಇಷೇ ತ್ವಾ**=ಅನ್ನಕ್ಕಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; **ಊರ್ಜೇ ತ್ವಾ**=ಬಲಕ್ಕಾಗಿ ನಿನ್ನನ್ನು [ಇಡುತ್ತೇನೆ]; **ಕೃಷ್ಯೈ ತ್ವಾ**=ಸಸ್ಯಗಳ ಉತ್ಪತ್ತಿಗಾಗಿ ನಿನ್ನನ್ನು [ಸ್ಥಾಪಿಸುತ್ತೇನೆ]; **ಕ್ಷೇಮಾಯ ತ್ವಾ**=[ಸಂಪಾದಿಸಿದ ಧನದ] ರಕ್ಷಣೆಗಾಗಿ ನಿನ್ನನ್ನು ಉಪಧಾನ ಮಾಡುತ್ತೇನೆ; [ಇವು ಏಳು ಪೂರ್ವಭಾಗದ ವಾಲಖಿಲ್ಯ ಇಷ್ಟಕೆಗಳು]

---

ಅದರಿಂದ ಬಯಸುವ ಅನ್ನ, ಬಲ, ಓಜಸ್ಸು, ಕಾಂತಿ, ಆಯುಸ್ಸು-ಮುಂತಾದವುಗಳನ್ನು ಕೋರಲಾಗುತ್ತದೆ.

ಈ ಅನುವಾಕದಲ್ಲಿ ಅನೇಕ ಛಂದಸ್ಸುಗಳ ಹೆಸರುಗಳು ಇವೆ. ಛಂದಃಶಾಸ್ತ್ರದಲ್ಲಿ ಒಂದು ಅಕ್ಷರದ ಪಾದದಿಂದ ಆರಂಭಿಸಿ ಇಪ್ಪತ್ತಾರು ಅಕ್ಷರಗಳ ಪಾದದವರೆಗೂ ಛಂದಸ್ಸುಗಳು ಇವೆ. **'ಶ್ರೀಮ್ಮಾಂ ಸಾಽವ್ಯಾತ್'** ಎಂಬುದಾಗಿ ಒಂದು ಅಕ್ಷರದ ಪಾದದ ಶ್ರೀ ಛಂದಸ್ಸಿದೆ. ಇದನ್ನು 'ಶ್ರೀ' ಎಂದು ಕರೆದಿದ್ದಾರೆ. ಗುರು-ಲಘುಗಳನ್ನು ಬಗೆ ಬಗೆಯಾಗಿ ಜೋಡಿಸುವುದರಿಂದ ಲೆಕ್ಕವಿಲ್ಲದಷ್ಟು ಛಂದಸ್ಸುಗಳಾಗುತ್ತವೆ. ಮಾತ್ರಾ ಛಂದಸ್ಸುಗಳೂ, ವಿಷಮಛಂದಸ್ಸುಗಳೂ ಇವೆ. ಈ ಛಂದಸ್ಸುಗಳಲ್ಲಿ

ಯಂತ್ರೀ ರಾಡ್ಧ್ರುವಾಽಸಿ ಧರಣೀ ಧರ್ತ್ರ್ಯಸಿ

ಧರಿತ್ರ್ಯಾಯುಷೇ ತ್ವಾ ವರ್ಚಸೇ ತ್ವೌಜಸೇ ತ್ವಾ

ಬಲಾಯ ತ್ವಾ ॥ ೧೪-7 ॥

[ದೇವತಾಽಽಯುಷೇ ತ್ವಾ ಷಟ್ಚ ॥]

---

ಯಂತ್ರೀ । ರಾಟ್ । ಧ್ರುವಾ । ಅಸಿ । ಧರಣೀ । ಧರ್ತ್ರೀ । ಅಸಿ । ಧರಿತ್ರೀ । ಆಯುಷೇ ।

ತ್ವಾ । ವರ್ಚಸೇ । ತ್ವಾ । ಓಜಸೇ । ತ್ವಾ । ಬಲಾಯ । ತ್ವಾ ॥ (೧೪) ॥

---

[ಮುಂದಿನ ಏಳು ವಾಲಖಿಲ್ಯ ಇಷ್ಟಕೆಗಳು ಪಶ್ಚಿಮ ದಿಕ್ಕಿನಲ್ಲಿ ಉಪಧಾನ ಮಾಡಬೇಕಾದವುಗಳು] [ಹೇ! ಇಷ್ಟಕೆಯೇ! ನೀನು] **ಯಂತ್ರೀ ರಾಟ್**=ನಿಯಮಾಧೀನಳೂ ಪ್ರಕಾಶಿಸುವವಳೂ ಆಗಿರುವೆ; **ಧ್ರುವಾ ಅಸಿ ಧರಣೀ**=ಸ್ಥಿರವಾದವಳೂ ಧಾರಣಹೇತುವೂ ಆಗಿರುವೆ; **ಧರ್ತ್ರೀ ಅಸಿ ಧರಿತ್ರೀ**=ಧಾರಣ ಮಾಡುವ ಭೂರೂಪದವಳಾಗಿದ್ದೀಯೆ; **ಆಯುಷೇ ತ್ವಾ**=ಆಯುಸ್ಸಿನ ವೃದ್ಧಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; **ವರ್ಚಸೇ ತ್ವಾ**= ಕಾಂತಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; **ಓಜಸೇ ತ್ವಾ**=ದೇಹದ ಅಷ್ಟಮ ಧಾತುವಾದ ಓಜಸ್ಸಿನ ವೃದ್ಧಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; **ಬಲಾಯ ತ್ವಾ**=ತೇಜಸ್ಸಿನ ಕಾರ್ಯವಾದ ಬಲಕ್ಕಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ].

---

**ಕೆಲವು ವೇದದಲ್ಲಿ ಮಾತ್ರ ಬಳಕೆಯಲ್ಲಿವೆ. ತ್ರ್ಯವಿರ್ವಯಃ, ಮಾಛಂದಃ-ಇವು ಆ ರೀತಿಯ ಛಂದಸ್ಸುಗಳಾಗಿವೆ. ಕೆಲವು ಲೋಕ-ವೇದಗಳೆರಡರಲ್ಲಿಯೂ ಇವೆ. ಗಾಯತ್ರೀ, ತ್ರಿಷ್ಟುಪ್-ಇವು ಆ ರೀತಿಯ ಛಂದಸ್ಸುಗಳಾಗಿವೆ.**

---

## ವಿನಿಯೋಗಸಂಗ್ರಹ

**1-12 ಮಾ ದಕ್ಷಿಣಸ್ಯಾಂ ಬೃಹತೀಃ 13-24ಪೃಥಿ ಪಶ್ಚಾದಥೋತ್ತರೇ ।**

25-36ಅಗ್ನಿರಿತ್ಯಾದಿಕಾಃ ಸರ್ವಾ ದ್ವಾದಶ ದ್ವಾದಶೇರಿತಾಃ ॥

37-43 ಮೂರ್ಧಾ 44-50ಯಂತ್ರೀ ವಾಲಖಿಲ್ಯಾಃ ಪುರಃ ಪಶ್ಚಾಚ್ಚ ಸಪ್ತಭಿಃ ।

ಸಪ್ತಮೇ ತ್ವನುವಾಕೇಽಸ್ಮಿನ್ ಮಂತ್ರಾಃ ಪಂಚಾಶದೀರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–50

## ॥ ಅಷ್ಟಮೋಽನುವಾಕಃ ॥

ಆಶುಸ್ತ್ರಿವೃದ್ಭಾಂತಃ ಪಂಚದಶೋ ವ್ಯೋಮ ಸಪ್ತದಶಃ

ಪ್ರತೂರ್ತಿರಷ್ಟಾದಶಸ್ತಪೋ ನವದಶೋಽಭಿವರ್ತಃ

---

ಆಶುಃ । ತ್ರಿವೃದಿತಿ ತ್ರಿ-ವೃತ್ । ಭಾಂತಃ । ಪಂಚದಶ ಇತಿ ಪಂಚ-ದಶಃ । ವ್ಯೋಮೇತಿ ವಿ-ಓಮ । ಸಪ್ತದಶ ಇತಿ ಸಪ್ತ-ದಶಃ । ಪ್ರತೂರ್ತಿರಿತಿ ಪ್ರ-ತೂರ್ತಿಃ । ಅಷ್ಟಾದಶ ಇತ್ಯಷ್ಟಾ-ದಶಃ । ತಪಃ । ನವದಶ ಇತಿ ನವ-ದಶಃ । ಅಭಿವರ್ತ ಇತ್ಯಭಿ-ವರ್ತಃ ।

---

ಏಳನೆಯ ಅನುವಾಕದಲ್ಲಿ ಬೃಹತೀಷ್ಟಕೋಪಧಾನವೂ ವಾಲಖಿಲ್ಯೇಷ್ಟಕೋಪಧಾನವೂ ಹೇಳಲ್ಪಟ್ಟಿತು. ಇಲ್ಲಿಗೆ ಮೂರನೆಯ ಚಿತಿಯು ಸಂಪೂರ್ಣವಾಯಿತು. ಈ ಎಂಟನೆಯ ಅನುವಾಕದಲ್ಲಿ ಅಕ್ಷ್ಣಯಾಸ್ತೋಮೀಯೇಷ್ಟಕೆಗಳು ಹೇಳಲ್ಪಟ್ಟಿವೆ.

---

| ಮಂತ್ರ | ವಿನಿಯೋಗ |
|---|---|
| ಆಶುಸ್ತ್ರಿವೃತ್...ಚತುಷ್ಟೋಮಃ ॥ | 18 ಅಕ್ಷ್ಣಯಾಸ್ತೋಮೀಯೇಷ್ಟಕೋಪಧಾನವನ್ನು ಮಾಡಲು. |

---

🔔 [ಎಲೈ! ಇಷ್ಟಕೆಯೇ!] [ನೀನು]**ಆಶುಃ**=ಶೀಘ್ರಗಮನವುಳ್ಳ; **ತ್ರಿವೃತ್**=ತ್ರಿವೃತ್ ಸ್ತೋಮವಾಗಿದ್ದೀಯೆ; [ನೀನು] **ಭಾಂತಃ**=ಪ್ರಕಾಶಮಾನವಾದ; **ಪಂಚದಶಃ**=ಪಂಚದಶಸ್ತೋಮವಾಗಿರುವೆ; [ನೀನು] **ವ್ಯೋಮ**=ಅಂತರಿಕ್ಷದಂತೆ ವಿಸ್ತಾರವಾದ; **ಸಪ್ತದಶಃ**=ಸಪ್ತದಶಸ್ತೋಮರೂಪವಾಗಿರುವೆ. [ನೀನು] **ಪ್ರತೂರ್ತಿಃ**=ಅತಿತ್ವರೆಯುಳ್ಳ; **ಅಷ್ಟಾದಶಃ**=ಅಷ್ಟಾದಶಸ್ತೋಮರೂಪಳು; [ನೀನು] **ತಪಃ**=ತಪೋರೂಪಳಾದ/ಕಾಯಕ್ಲೇಶರೂಪಳಾದ; **ನವದಶಃ**=ನವದಶಸ್ತೋಮರೂಪಳು; [ನೀನು] **ಅಭಿವರ್ತಃ**=ಅಭಿವರ್ತಸಾಮಯುಕ್ತಳಾದ;

ಸವಿಗ್ಂಶೋ ಧರುಣ ಏಕವಿಗ್ಂಶೋ ವರ್ಚೋ

ದ್ವಾವಿಗ್ಂಶಃ ಸಂಭರಣಸ್ತ್ರಯೋವಿಗ್ಂಶೋ

ಯೋನಿಶ್ಚತುರ್ವಿಗ್ಂಶೋ ಗರ್ಭಾಃ ಪಂಚವಿಗ್ಂಶ

ಓಜಸ್ತ್ರಿಣವಃ ಕ್ರತುರೇಕತ್ರಿಗ್ಂಶಃ

---

ಸವಿಗ್ಂಶ ಇತಿ ಸ-ವಿಗ್ಂಶಃ। ಧರುಣಃ। ಏಕವಿಗ್ಂಶ ಇತ್ಯೇಕ-ವಿಗ್ಂಶಃ। ವರ್ಚಃ। ದ್ವಾವಿಗ್ಂಶಃ। ಸಂಭರಣ ಇತಿ ಸಮ್-ಭರಣಃ। ತ್ರಯೋವಿಗ್ಂಶ ಇತಿ ತ್ರಯಃ-ವಿಗ್ಂಶಃ। ಯೋನಿಃ। ಚತುರ್ವಿಗ್ಂಶ ಇತಿ ಚತುಃ-ವಿಗ್ಂಶಃ। ಗರ್ಭಾಃ। ಪಂಚವಿಗ್ಂಶ ಇತಿ ಪಂಚ-ವಿಗ್ಂಶಃ। ಓಜಃ। ತ್ರಿಣವ ಇತಿ ತ್ರಿ-ನವಃ। ಕ್ರತುಃ। ಏಕತ್ರಿಗ್ಂಶ ಇತ್ಯೇಕ-ತ್ರಿಗ್ಂಶಃ।

---

**ಸವಿಗ್ಂಶಃ**=ಸವಿಂಶಸ್ತೋಮರೂಪಳು; [ನೀನು] **ಧರುಣಃ**=ಧಾರಕವಾದ; **ಏಕವಿಗ್ಂಶಃ**=ಏಕವಿಂಶಸ್ತೋಮರೂಪಳು; [ನೀನು] **ವರ್ಚಃ**=ಬಲಹೇತುವಾದ; **ದ್ವಾವಿಗ್ಂಶಃ**=ದ್ವಾವಿಂಶಸ್ತೋಮರೂಪಳು; [ನೀನು] **ಸಂಭರಣಃ**=ಚೆನ್ನಾಗಿ ಪೋಷಿಸುವ; **ತ್ರಯೋವಿಗ್ಂಶಃ**=ತ್ರಯೋವಿಂಶಸ್ತೋಮವಾಗಿರುವೆ; [ನೀನು] **ಯೋನಿಃ**=ಪ್ರಜೋತ್ಪಾದಕವಾದ ಯೋನಿಸ್ವರೂಪಳಾದ; **ಚತುರ್ವಿಗ್ಂಶಃ**=ಚತುರ್ವಿಂಶಸ್ತೋಮರೂಪಳಾಗಿರುವೆ; [ನೀನು] **ಗರ್ಭಾಃ**=ಗರ್ಭರೂಪವಾದ; **ಪಂಚವಿಗ್ಂಶಃ**=ಪಂಚವಿಂಶಸ್ತೋಮರೂಪಳಾಗಿರುವೆ; [ನೀನು] **ಓಜಃ**=ಅಷ್ಟಮಧಾತುರೂಪವಾದ; **ತ್ರಿಣವಃ**=ತ್ರಿಣವಸ್ತೋಮರೂಪಳಾಗಿರುವೆ; [ನೀನು] **ಕ್ರತುಃ**=ಅಗ್ನಿಷ್ಟೋಮಾದಿಕ್ರತುರೂಪಳಾಗಿ; **ಏಕತ್ರಿಗ್ಂಶಃ**= ಏಕತ್ರಿಂಶಸ್ತೋಮರೂಪಳಾಗಿರುವೆ;

ಪ್ರತಿಷ್ಠಾ ತ್ರಯಸ್ತ್ರಿಗ್ಂಶೋ ಬ್ರಧ್ನಸ್ಯ ವಿಷ್ಟಪಂ

ಚತುಸ್ತ್ರಿಗ್ಂಶೋ ನಾಕಷ್ಷಟ್ತ್ರಿಗ್ಂಶೋ ವಿವರ್ತೋಽಷ್ಟಾ

ಚತ್ವಾರಿಗ್ಂಶೋ ಧರ್ತ್ರಶ್ಚತುಷ್ಟೋಮಃ ॥ ೧೫-8 ॥

[ಆಶುಸ್ಸಪ್ತತ್ರಿಗ್ಂಶತ್ ॥]

---

ಪ್ರತಿಷ್ಠೇತಿ ಪ್ರತಿ-ಸ್ಥಾ । ತ್ರಯಸ್ತ್ರಿಗ್ಂಶ ಇತಿ ತ್ರಯಃ-ತ್ರಿಗ್ಂಶಃ । ಬ್ರಧ್ನಸ್ಯ । ವಿಷ್ಟಪಮ್ । ಚತುಸ್ತ್ರಿಗ್ಂಶ ಇತಿ ಚತುಃ-ತ್ರಿಗ್ಂಶಃ । ನಾಕಃ । ಷಟ್ತ್ರಿಗ್ಂಶ ಇತಿ ಷಟ್-ತ್ರಿಗ್ಂಶಃ । ವಿವರ್ತ ಇತಿ ವಿ-ವರ್ತಃ । ಅಷ್ಟಾಚತ್ವಾರಿಗ್ಂಶ ಇತ್ಯಷ್ಟಾ-ಚತ್ವಾರಿಗ್ಂಶಃ । ಧರ್ತ್ರಃ । ಚತುಷ್ಟೋಮ ಇತಿ ಚತುಃ-ಸ್ತೋಮಃ ॥ (೧೫) ॥

---

[ನೀನು] **ಪ್ರತಿಷ್ಠಾ**=ಸ್ಥಿತಿಹೇತುವಾದ; **ತ್ರಯಸ್ತ್ರಿಗ್ಂಶಃ**=ತ್ರಯಸ್ತ್ರಿಂಶಸ್ತೋಮರೂಪ ಳಾಗಿರುವೆ; [ನೀನು] **ಬ್ರಧ್ನಸ್ಯ ವಿಷ್ಟಪಮ್**=ಆದಿತ್ಯನ ಸ್ಥಾನವಾಗಿ; **ಚತುಸ್ತ್ರಿಗ್ಂಶಃ**= ಚತುಸ್ತ್ರಿಂಶಸ್ತೋಮವಾಗಿರುವೆ; [ನೀನು] **ನಾಕಃ**=ಸ್ವರ್ಗವೆಂಬ ಹೆಸರಿನ ಭೋಗ ಭೂಮಿಯಾಗಿ; **ಷಟ್ತ್ರಿಗ್ಂಶಃ**=ಷಟ್ತ್ರಿಂಶಸ್ತೋಮವಾಗಿರುವೆ; [ನೀನು] **ವಿವರ್ತಃ**= ವಿಪರೀತವರ್ತನೆಯಿಂದ ವಿವರ್ತವೆನಿಸಿದ; **ಅಷ್ಟಾಚತ್ವಾರಿಗ್ಂಶಃ**=ಅಷ್ಟಾಚತ್ವಾರಿಂಶ ಸ್ತೋಮರೂಪವಾಗಿರುವೆ; [ನೀನು] **ಧರ್ತ್ರಃ**=ಧಾರಕವಾಗಿ; **ಚತುಷ್ಟೋಮಃ**= [ತ್ರಿವೃತ್-ಪಂಚದಶ-ಸಪ್ತದಶ-ಏಕವಿಂಶಗಳೆಂಬ] ನಾಲ್ಕು ಸ್ತೋಮಗಳ ಸ್ವರೂಪ ಳಾಗಿರುವೆ. [ನಿನ್ನನ್ನು ಉಪಧಾನ ಮಾಡುತ್ತೇನೆ].

---

ಈ ಅನುವಾಕದಲ್ಲಿ ಹೇಳಲ್ಪಡುವ ಅಕ್ಷ್ಣಯಾಸ್ತೋಮೀಯಗಳು-ಸಾಮಗಳ ಆವೃತ್ತಿಯಿಂದ ಉಂಟಾಗುವ ತ್ರಿವೃತ್ ಮುಂತಾದ ಸ್ತೋಮಗಳ ಅಭೇದವನ್ನು ಇಷ್ಟಕೆಗಳಲ್ಲಿ ಕಲ್ಪಿಸಿ, ಆ ರೂಪದಿಂದ ಸ್ತುತಿಸಿ-ಉಪಧಾನ ಮಾಡಲ್ಪಡುತ್ತವೆ.

ಶ್ರುತಿಯಲ್ಲಿ ಪಾಠ ಮಾಡಿರುವ ಕ್ರಮವನ್ನು ಅನುಸರಿಸದೆ ಆಮ್ನಾತಕ್ರಮವೂ,

ಉಪಧಾನಕ್ರಮವೂ ಬೇರೆ ಬೇರೆಯಾಗಿರುವುದರಿಂದ ಇವು 'ಅಕ್ಷ್ಣಯಾಸ್ತೋಮೀಯ' ಗಳೆನಿಸಿಕೊಂಡಿವೆ.

'ತ್ರಿವೃತ್' ಎಂಬ ಸಂಜ್ಞೆಯು ಉಂಟಾಗುವುದು ಆವೃತ್ತಿಯಿಂದ. ಸಾಮದ ಗಾನ ವನ್ನು ಮೂರು ಋಕ್ಕುಗಳಲ್ಲಿ ಮಾಡುತ್ತಾರೆ. 'ತ್ರಿವೃತ್' ಎಂದರೆ ಒಂಬತ್ತು. ಈ ಸ್ತೋಮದಲ್ಲಿ ಮೂರು ಋಕ್‌ಗಳಲ್ಲಿ ಮೂರು ಬಾರಿ ಸಾಮಗಾನವನ್ನು ಮಾಡಬೇಕು. ಇನ್ನುಳಿದ ಸ್ತೋಮಗಾನದ ಸ್ವರೂಪವು ಸಾಮಸೂತ್ರಗಳಲ್ಲಿ ಇದೆ.

---

## ವಿನಿಯೋಗಸಂಗ್ರಹ

1-18 ಆಶುರಷ್ಟಾದಶಾದಧ್ಯಾತ್ ಅಕ್ಷ್ಣಯಾಸ್ತೋಮಸಂಯುತಾಃ ||

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-18

## ॥ ನವಮೋಽನುವಾಕಃ ॥

### ಅಗ್ನೇರ್ಭಾಗೋಽಸಿ ದೀಕ್ಷಾಯಾ ಆಧಿಪತ್ಯಂ ಬ್ರಹ್ಮ ಸ್ಪೃತಂ ತ್ರಿವೃತ್ಸ್ತೋಮ

ಅಗ್ನೇಃ । ಭಾಗಃ । ಅಸಿ । ದೀಕ್ಷಾಯಾಃ । ಆಧಿಪತ್ಯಮಿತ್ಯಾಧಿ-ಪತ್ಯಮ್ । ಬ್ರಹ್ಮ । ಸ್ಪೃತಮ್ । ತ್ರಿವೃದಿತಿ ತ್ರಿ-ವೃತ್ । ಸ್ತೋಮಃ ।

ಹಿಂದಿನ ಎಂಟನೆಯ ಅನುವಾಕದಲ್ಲಿ ಹಲವು ಅಕ್ಷ್ಣಯಾಸ್ತೋಮೀಯೇಷ್ಟಕೆಗಳ ಮಂತ್ರಗಳು ಹೇಳಲ್ಪಟ್ಟಿವೆ. ಈ ಒಂಬತ್ತನೆಯ ಅನುವಾಕದಲ್ಲಿ ಉಳಿದ ಮತ್ತೆ ಕೆಲವು ಅಕ್ಷ್ಣಯಾಸ್ತೋಮೀಯೇಷ್ಟಕೆಗಳ ಮಂತ್ರಗಳು ಹೇಳಲ್ಪಡುತ್ತವೆ.

| ಮಂತ್ರ | ವಿನಿಯೋಗ |
|---|---|
| ಅಗ್ನೇರ್ಭಾಗಃ...ತ್ರಿವೃತ್ಸ್ತೋಮಃ ॥ | ಈ ಅನುವಾಕದಲ್ಲಿ ಹೇಳಿರುವ ಉಳಿದ ಹತ್ತು ಅಕ್ಷ್ಣಯಾಸ್ತೋಮೀಯೇಷ್ಟಕೆಗಳ ಮಂತ್ರಗಳಲ್ಲಿ ಪ್ರಥಮಮಂತ್ರ. |

[ಎಲೈ! ಇಷ್ಟಕೆಯೇ! ನೀನು] **ಅಗ್ನೇಃ**=ಅಗ್ನಿದೇವನ; **ಭಾಗಃ ಅಸಿ**=ಭಾಗವಾದ ಹವಿಸ್ಸಿನ ರೂಪವಾಗಿರುವೆ; **ದೀಕ್ಷಾಯಾಃ**=ದೀಕ್ಷಾದೇವತೆಯ; **ಆಧಿಪತ್ಯಮ್**= ಸ್ವಾಮಿತ್ವರೂಪಳಾಗಿರುವೆ; **ಸ್ಪೃತಮ್**=ದೇವತೆಗಳಿಗೆ ಪ್ರಿಯವಾದ; **ಬ್ರಹ್ಮ**=ಬ್ರಾಹ್ಮಣ್ಯ ರೂಪವಾಗಿ/ಮಂತ್ರಸಮೂಹರೂಪವಾಗಿ ಇರುವೆ; **ತ್ರಿವೃತ್ ಸ್ತೋಮಃ**=[ನೀನು] ತ್ರಿವೃತ್‌ಸ್ತೋಮರೂಪಳು. [ನಿನ್ನನ್ನು ಉಪಧಾನ ಮಾಡುತ್ತೇನೆ]

**ಇಂದ್ರಸ್ಯ ಭಾಗೋಽಸಿ ವಿಷ್ಣೋರಾಧಿಪತ್ಯಂ ಕ್ಷತ್ರಗ್ಗ್ಂ ಸ್ಪೃತಂ ಪಂಚದಶಃ ಸ್ತೋಮೋ ನೃಚಕ್ಷಸಾಂ ಭಾಗೋಽಸಿ ಧಾತು-ರಾಧಿಪತ್ಯಂ ಜನಿತ್ರಗ್ಗ್ಂ ಸ್ಪೃತಗ್ಂ ಸಪ್ತದಶಃ ಸ್ತೋಮೋ**

---

ಇಂದ್ರಸ್ಯ । ಭಾಗಃ । ಅಸಿ । ವಿಷ್ಣೋಃ । ಆಧಿಪತ್ಯಮಿತ್ಯಾಧಿ-ಪತ್ಯಮ್ । ಕ್ಷತ್ರಮ್ । ಸ್ಪೃತಮ್ । ಪಂಚದಶ ಇತಿ ಪಂಚ-ದಶಃ । ಸ್ತೋಮಃ । ನೃಚಕ್ಷಸಾಮಿತಿ ನೃ-ಚಕ್ಷಸಾಮ್ । ಭಾಗಃ । ಅಸಿ । ಧಾತುಃ । ಆಧಿಪತ್ಯಮಿತ್ಯಾಧಿ-ಪತ್ಯಮ್ । ಜನಿತ್ರಮ್ । ಸ್ಪೃತಮ್ । ಸಪ್ತದಶ ಇತಿ ಸಪ್ತ-ದಶಃ । ಸ್ತೋಮಃ ।

---

| ಮಂತ್ರ | ವಿನಿಯೋಗ |
|---|---|
| **ಇಂದ್ರಸ್ಯ...ಪಂಚದಶಃ ಸ್ತೋಮಃ ॥** | ಇಷ್ಟಕೋಪಧಾನದ ಎರಡನೆಯ ಮಂತ್ರ. |
| **ನೃಚಕ್ಷಸಾಂ...ಸಪ್ತದಶಃ ಸ್ತೋಮಃ ॥** | ಇಷ್ಟಕೋಪಧಾನದ ಮೂರನೆಯ ಮಂತ್ರ. |

---

▲ [ಇಷ್ಟಕೆಯೇ!] [ನೀನು] **ಇಂದ್ರಸ್ಯ ಭಾಗಃ ಅಸಿ**=ಇಂದ್ರದೇವನ ಹವಿರ್ಭಾಗ ರೂಪಳು; **ವಿಷ್ಣೋಃ**=ವ್ಯಾಪಕನಾದ ಪರಮೇಶ್ವರನ; **ಆಧಿಪತ್ಯಮ್**=ಆಧಿಪತ್ಯ ರೂಪಳಾಗಿರುವೆ; **ಸ್ಪೃತಮ್**=ದೇವಪ್ರಿಯವಾದ; **ಕ್ಷತ್ರಮ್**=ಕ್ಷತ್ರಿಯಜಾತಿ/ಬಲ ರೂಪಳು; **ಪಂಚದಶಃ ಸ್ತೋಮಃ**=[ಸ್ತೋಮಗಳಲ್ಲಿ] ಪಂಚದಶಸ್ತೋಮರೂಪ ಳಾಗಿರುವೆ; [ನಿನ್ನ ಉಪಧಾನವನ್ನು ಮಾಡುವೆ] ▲ [ಹೇ! ಇಷ್ಟಕೆಯೇ! ನೀನು] **ನೃಚಕ್ಷಸಾಮ್**=ಮಂತ್ರಗಳನ್ನು ಸ್ಪಷ್ಟವಾಗಿ ಉಚ್ಚರಿಸುವ ಋತ್ವಿಜರ; **ಭಾಗಃ ಅಸಿ**= ಗವಾದಿರೂಪವಾದ ದಕ್ಷಿಣಾರೂಪವಾಗಿರುವೆ; **ಧಾತುಃ**=ಪ್ರಜಾಪತಿಯ; **ಆಧಿಪತ್ಯಮ್** =ಸ್ವಾಮಿತ್ವರೂಪಳಾಗಿರುವೆ; **ಸ್ಪೃತಮ್**=ಪ್ರೀತಿಕರವಾದ; **ಜನಿತ್ರಮ್**=ಜನನಹೇತು ವಾದ ಅನ್ನಸ್ವರೂಪಳಾಗಿರುವೆ; **ಸಪ್ತದಶಃ ಸ್ತೋಮಃ**=ಸಪ್ತದಶಸ್ತೋಮಸ್ವರೂಪ ಳಾಗಿರುವೆ.

ಮಿತ್ರಸ್ಯ ಭಾಗೋಽಸಿ ವರುಣಸ್ಯಾಽಽಧಿಪತ್ಯಂ ದಿವೋ ವೃಷ್ಟಿರ್ವಾತಾಸ್ಸ್ಪೃತಾ ಏಕವಿಗ್ಂಶಸ್ಸ್ತೋಮೋಽದಿತ್ಯೈ ಭಾಗೋಽಸಿ ಪೂಷ್ಣ ಆಧಿಪತ್ಯಮೋಜಸ್ಸ್ಪೃತಂ ತ್ರಿಣವಸ್ಸ್ತೋಮೋ

---

ಮಿತ್ರಸ್ಯ । ಭಾಗಃ । ಅಸಿ । ವರುಣಸ್ಯ । ಆಧಿಪತ್ಯಮಿತ್ಯಾಧಿ-ಪತ್ಯಮ್ । ದಿವಃ । ವೃಷ್ಟಿಃ । ವಾತಾಃ । ಸ್ಪೃತಾಃ । ಏಕವಿಗ್ಂಶ ಇತ್ಯೇಕ-ವಿಗ್ಂಶಃ । ಸ್ತೋಮಃ । ಅದಿತ್ಯೈ । ಭಾಗಃ । ಅಸಿ । ಪೂಷ್ಣಃ । ಆಧಿಪತ್ಯಮಿತ್ಯಾಧಿ-ಪತ್ಯಮ್ । ಓಜಃ । ಸ್ಪೃತಮ್ । ತ್ರಿಣವ ಇತಿ ತ್ರಿ-ನವಃ । ಸ್ತೋಮಃ ।

---

| ಮಂತ್ರ | ವಿನಿಯೋಗ |
|---|---|
| **ಮಿತ್ರಸ್ಯ...ಏಕವಿಗ್ಂಶಃ ಸ್ತೋಮಃ ॥** | ಇಷ್ಟಕೋಪಧಾನದ ನಾಲ್ಕನೆಯ ಮಂತ್ರ. |
| **ಅದಿತ್ಯೈ...ತ್ರಿಣವಃ ಸ್ತೋಮಃ ॥** | ಇಷ್ಟಕೋಪಧಾನದ ಐದನೆಯ ಮಂತ್ರ. |

---

▲ [ಇಷ್ಟಕೆಯೇ! ನೀನು] **ಮಿತ್ರಸ್ಯ**=ಮಿತ್ರದೇವನ; **ಭಾಗಃ ಅಸಿ**=ಹವಿರ್ಭಾಗರೂಪಳು. **ವರುಣಸ್ಯ**=ವರುಣದೇವನ; **ಆಧಿಪತ್ಯಮ್**=ಸ್ವಾಮಿತ್ವರೂಪಳಾಗಿರುವೆ; **ದಿವಃ**= ಅಂತರಿಕ್ಷದಿಂದ [ಭೂಮಿಗೆ ಬಿದ್ದಿರುವ] **ವೃಷ್ಟಿಃ**=ವೃಷ್ಟಿಸ್ವರೂಪಳು. **ಸ್ಪೃತಾಃ**=ಪ್ರೀತಿ ಕಾರಣಗಳಾದ; **ವಾತಾಃ**=ವಾಯುಗಳ ರೂಪಳಾಗಿರುವೆ; **ಏಕವಿಗ್ಂಶಃ ಸ್ತೋಮಃ**= ಏಕವಿಂಶಸ್ತೋಮರೂಪಳಾಗಿರುವೆ. [ನಿನ್ನನ್ನು ಉಪಧಾನ ಮಾಡುತ್ತೇನೆ] ▲ [ಹೇ! ಇಷ್ಟಕೆಯೇ! ನೀನು] **ಅದಿತ್ಯೈ**=ಅದಿತಿದೇವತೆಯ; **ಭಾಗಃ ಅಸಿ**=ಹವಿರ್ಭಾಗರೂಪ ಳಾಗಿರುವೆ; **ಪೂಷ್ಣಃ**=ಪೂಷದೇವತೆಯ; **ಆಧಿಪತ್ಯಮ್**=ಸ್ವಾಮಿತ್ವರೂಪಳಾಗಿರುವೆ; **ಸ್ಪೃತಮ್**=ಪ್ರೀತಿಕರವಾದ; **ಓಜಃ**=ಬಲ/ಅಷ್ಟಮಧಾತುವಿನ ರೂಪಳಾಗಿರುವೆ; **ತ್ರಿಣವಃ ಸ್ತೋಮಃ**=ತ್ರಿಣವಸ್ತೋಮವೆಂಬ ಸ್ತೋಮದ ರೂಪಳಾಗಿರುವೆ; [ನಿನ್ನನ್ನು ಉಪಧಾನ ಮಾಡುತ್ತೇನೆ].

**ವಸೂನಾಂ ಭಾಗೋಽಸಿ (೧೬) ರುದ್ರಾಣಾಮಾಧಿಪತ್ಯಂ ಚತುಷ್ಪಾತ್ಸ್ಪೃತಂ ಚತುರ್ವಿಗ್ಂಶಃ ಸ್ತೋಮ ಆದಿತ್ಯಾನಾಂ ಭಾಗೋಽಸಿ ಮರುತಾಮಾಧಿಪತ್ಯಂ ಗರ್ಭಾಃ ಸ್ಪೃತಾಃ**

---

ವಸೂನಾಮ್ । ಭಾಗಃ । ಅಸಿ ।(೧೬)। ರುದ್ರಾಣಾಮ್ । ಆಧಿಪತ್ಯಮಿತ್ಯಾಧಿ–ಪತ್ಯಮ್ । ಚತುಷ್ಪಾದಿತಿ ಚತುಃ–ಪಾತ್ । ಸ್ಪೃತಮ್ । ಚತುರ್ವಿಗ್ಂಶ ಇತಿ ಚತುಃ–ವಿಗ್ಂಶಃ । ಸ್ತೋಮಃ । ಆದಿತ್ಯಾನಾಮ್ । ಭಾಗಃ । ಅಸಿ । ಮರುತಾಮ್ । ಆಧಿಪತ್ಯಮಿತ್ಯಾಧಿ–ಪತ್ಯಮ್ । ಗರ್ಭಾಃ । ಸ್ಪೃತಾಃ ।

---

| ಮಂತ್ರ | ವಿನಿಯೋಗ |
|---|---|
| **ವಸೂನಾಂ...ಚತುರ್ವಿಗ್ಂಶಸ್ತೋಮಃ ॥** | ಇಷ್ಟಕೋಪಧಾನದ ಆರನೆಯ ಮಂತ್ರ. |
| **ಆದಿತ್ಯಾನಾಂ...ಪಂಚವಿಗ್ಂಶಸ್ತೋಮಃ ॥** | ಇಷ್ಟಕೋಪಧಾನದ ಏಳನೆಯ ಮಂತ್ರ. |

---

▲ [ಇಷ್ಟಕೆಯೇ! ನೀನು] **ವಸೂನಾಮ್ ಭಾಗಃ ಅಸಿ**=ವಸುದೇವತೆಗಳ ಹವಿರ್ಭಾಗ ರೂಪಳಾಗಿ ಇರುವೆ; **ರುದ್ರಾಣಾಮ್**=ರುದ್ರರ; **ಆಧಿಪತ್ಯಮ್**=ಸ್ವಾಮಿತ್ವರೂಪ ಳಾಗಿರುವೆ; **ಸ್ಪೃತಮ್**=ಪ್ರೀತಿಕರವಾದ; **ಚತುಷ್ಪಾತ್**=ಗವಾಶ್ವಾದಿರೂಪಳಾಗಿರುವೆ; **ಚತುರ್ವಿಗ್ಂಶಃ ಸ್ತೋಮಃ**=[ಸ್ತೋಮಗಳಲ್ಲಿ]ಚತುರ್ವಿಂಶಸ್ತೋಮರೂಪಳು; [ನಿನ್ನನ್ನು ಉಪಧಾನ ಮಾಡುತ್ತೇನೆ]. ▲ [ಇಷ್ಟಕೆಯೇ! ನೀನು] **ಆದಿತ್ಯಾನಾಮ್ ಭಾಗಃ ಅಸಿ**=ಆದಿತ್ಯದೇವತೆಗಳ ಹವಿರ್ಭಾಗರೂಪಳು; **ಮರುತಾಮ್ ಆಧಿಪತ್ಯಮ್**=ಮರುದ್ದೇವತೆಗಳ ಒಡೆತನದ ರೂಪಳು; **ಸ್ಪೃತಾಃ**=ಪ್ರೀತಿನಿಮಿತ್ತವಾದ; **ಗರ್ಭಾಃ**=ಪ್ರಾಣಿಗಳ ಗರ್ಭರೂಪಳು;

---

ಹಿಂದಿನ ಅನುವಾಕದಲ್ಲಿ ಅಕ್ಷ್ಣಯಾಸ್ತೋಮೀಯೇಷ್ಟಕೆಗಳು ಉಕ್ತವಾಗಿವೆ. ಉಳಿದ

# ಪಂಚವಿಗ್ಂಶಃ ಸ್ತೋಮೋ ದೇವಸ್ಯ
# ಸವಿತುರ್ಭಾಗೋಽಸಿ ಬೃಹಸ್ಪತೇರಾಧಿಪತ್ಯಗ್ಂ
# ಸಮೀಚೀರ್ದಿಶಃ ಸ್ಪೃತಾಶ್ಚತುಷ್ಟೋಮಃ ಸ್ತೋಮೋ

---

ಪಂಚವಿಗ್ಂಶ ಇತಿ ಪಂಚ-ವಿಗ್ಂಶಃ । ಸ್ತೋಮಃ । ದೇವಸ್ಯ । ಸವಿತುಃ । ಭಾಗಃ । ಅಸಿ । ಬೃಹಸ್ಪತೇಃ । ಆಧಿಪತ್ಯಮಿತ್ಯಾಧಿ-ಪತ್ಯಮ್ । ಸಮೀಚೀಃ । ದಿಶಃ । ಸ್ಪೃತಾಃ । ಚತುಷ್ಟೋಮ ಇತಿ ಚತುಃ-ಸ್ತೋಮಃ । ಸ್ತೋಮಃ ।

---

| ಮಂತ್ರ | ವಿನಿಯೋಗ |
|---|---|
| ದೇವಸ್ಯ...ಚತುಷ್ಟೋಮಃ ಸ್ತೋಮಃ ॥ | ಇಷ್ಟಕೋಪಧಾನದ ಎಂಟನೆಯ ಮಂತ್ರ. |

---

**ಪಂಚವಿಗ್ಂಶಃ ಸ್ತೋಮಃ**=ಪಂಚವಿಂಶಸ್ತೋಮರೂಪಳು; [ನಿನ್ನನ್ನು ಇಲ್ಲಿ ಉಪಧಾನ ಮಾಡುತ್ತೇನೆ]. ▲ [ಇಷ್ಟಕೆಯೇ! ನೀನು] **ಸವಿತುಃ ದೇವಸ್ಯ**=ಸರ್ವ ಪ್ರೇರಕನಾದ ಸವಿತೃದೇವನ; **ಭಾಗಃ ಅಸಿ**=ಹವಿರ್ಭಾಗವೆನಿಸಿರುವೆ; **ಬೃಹಸ್ಪತೇಃ ಆಧಿಪತ್ಯಮ್**=ಬೃಹಸ್ಪತಿದೇವನ ಆಧಿಪತ್ಯರೂಪವು ನೀನಾಗಿರುವೆ; **ಸ್ಪೃತಾಃ**= ಪ್ರೀತಿಕರವಾದ; **ಸಮೀಚೀಃ ದಿಶಃ**=ಪ್ರಾಣಿಗಳು ಅನುಕೂಲವಾಗಿರುವ ದಿಕ್ಸ್ವರೂಪಳು; **ಚತುಷ್ಟೋಮಃ ಸ್ತೋಮಃ**=[ತ್ರಿವೃತ್-ಪಂಚದಶ-ಸಪ್ತದಶ-ಏಕವಿಂಗ್ಂಶ ಗಳೆಂಬ] ಚತುಷ್ಟೋಮರೂಪಳು ನೀನು. ನಿನ್ನನ್ನು ಉಪಧಾನ ಮಾಡುತ್ತೇನೆ.

---

**ಹತ್ತು ಅಕ್ಷ್ಣಯಾಸ್ತೋಮೀಯೇಷ್ಟಕೆಗಳ ಉಪಧಾನಮಂತ್ರಗಳು ಇಲ್ಲಿ ಉಕ್ತವಾಗಿವೆ. ಒಂದೊಂದು ಇಷ್ಟಕೆಯನ್ನೂ 'ಅಗ್ನೇರ್ಭಾಗೋಽಸೀತಿ ಪುರಸ್ತಾದುಪದಧಾತಿ' ಎಂಬ ವಿಧಿವಾಕ್ಯದಂತೆ ಆಯಾ ದಿಕ್ಕುಗಳಲ್ಲಿ ಉಪಧಾನ ಮಾಡಬೇಕು.**

**ಈ ಅಕ್ಷ್ಣಯಾಸ್ತೋಮೀಯೇಷ್ಟಕೆಗಳನ್ನು ಆಯಾ ದೇವತೆಯ ಹವಿರ್ಭಾಗವನ್ನಾಗಿಯೂ,**

**ಯಾವಾನಾಂ ಭಾಗೋಽಸ್ಯಯಾವಾನಾಮಾಧಿಪತ್ಯಂ ಪ್ರಜಾಃ ಸ್ಪೃತಾಶ್ಚತುಶ್ಚತ್ವಾರಿಗ್‌ಂಶಃ ಸ್ತೋಮ ಋಭೂಣಾಂ ಭಾಗೋಽಸಿ ವಿಶ್ವೇಷಾಂ ದೇವಾನಾಮಾಧಿಪತ್ಯಂ**

ಯಾವಾನಾಮ್ । ಭಾಗಃ । ಅಸಿ । ಅಯಾವಾನಾಮ್ । ಆಧಿಪತ್ಯಮಿತ್ಯಾಧಿ–ಪತ್ಯಮ್ । ಪ್ರಜಾ ಇತಿ ಪ್ರ–ಜಾಃ । ಸ್ಪೃತಾಃ । ಚತುಶ್ಚತ್ವಾರಿಗ್‌ಂಶ ಇತಿ ಚತುಃ–ಚತ್ವಾರಿಗ್‌ಂಶಃ । ಸ್ತೋಮಃ । ಋಭೂಣಾಮ್ । ಭಾಗಃ । ಅಸಿ । ವಿಶ್ವೇಷಾಮ್ । ದೇವಾನಾಮ್ । ಆಧಿಪತ್ಯಮಿತ್ಯಾಧಿ–ಪತ್ಯಮ್ ।

| ಮಂತ್ರ | ವಿನಿಯೋಗ |
|---|---|
| **ಯಾವಾನಾಂ...ಚತುಶ್ಚತ್ವಾರಿಗ್‌ಂಶಃ ಸ್ತೋಮಃ ॥** | ಇಷ್ಟಕೋಪಧಾನದ ಒಂಬತ್ತನೆಯ ಮಂತ್ರ. |
| **ಋಭೂಣಾಂ...ತ್ರಯಸ್ತ್ರಿಗ್‌ಂಶಃ ಸ್ತೋಮಃ ॥** | ಇಷ್ಟಕೋಪಧಾನದ ಹತ್ತನೆಯ ಮಂತ್ರ. |

▲ [ಹೇ! ಇಷ್ಟಕೆಯೇ! ನೀನು] **ಯಾವಾನಾಮ್**=ಶುಕ್ಲ–ಕೃಷ್ಣಪಕ್ಷಯುತವಾದ ಮಾಸ ದೇವತೆಗಳ; **ಭಾಗಃ ಅಸಿ**=ಹವಿರ್ಭಾಗರೂಪವಾಗಿರುವೆ; **ಅಯಾವಾನಾಮ್**= ಅರ್ಧಮಾಸದೇವತೆಗಳ; **ಆಧಿಪತ್ಯಮ್**=ಸ್ವಾಮಿತ್ವರೂಪವಾಗಿರುವೆ; **ಸ್ಪೃತಾಃ**= ಪ್ರೀತಿಯುಕ್ತವಾದ; **ಪ್ರಜಾಃ**=ಪ್ರಜಾರೂಪಳು; **ಚತುಶ್ಚತ್ವಾರಿಗ್‌ಂಶಃ ಸ್ತೋಮಃ**= ಚತುಶ್ಚತ್ವಾರಿಂಶಸ್ತೋಮಸ್ವರೂಪಳಾಗಿರುವೆ; [ನಿನ್ನನ್ನು ಉಪಧಾನ ಮಾಡುತ್ತೇನೆ]. ▲ [ಇಷ್ಟಕೆಯೇ! ನೀನು] **ಋಭೂಣಾಮ್**=ದೇವತೆಗಳ; **ಭಾಗಃ ಅಸಿ**=ಹವಿರ್ಭಾಗ ರೂಪವಾಗಿರುವೆ; **ವಿಶ್ವೇಷಾಮ್ ದೇವಾನಾಮ್**=ವಿಶ್ವೇದೇವಗಣಗಳ; **ಆಧಿಪತ್ಯಮ್** =ಸ್ವಾಮಿತ್ವರೂಪಳಾಗಿರುವೆ;

**ದೇವತಾಧಿಪತ್ಯರೂಪವನ್ನಾಗಿಯೂ, ಸ್ತೋಮರೂಪವಾಗಿಯೂ ಸ್ತುತಿಸಿ ಉಪಧಾನ ಮಾಡಬೇಕು.**

# ಭೂತಂ ನಿಶಾಂತಗ್ಂ ಸ್ಪೃತಂ ತ್ರಯಸ್ತ್ರಿಗ್ಂಶಃ

## ಸ್ತೋಮಃ ॥ ೧೭-9 ॥

[ವಸೂನಾಂ ಭಾಗೋಽಸಿ ಷಟ್ಚತ್ವಾರಿಗ್ಂಶಚ್ಚ ॥]

ಭೂತಮ್ । ನಿಶಾಂತಮಿತಿ ನಿ-ಶಾಂತಮ್ । ಸ್ಪೃತಮ್ । ತ್ರಯಸ್ತ್ರಿಗ್ಂಶ ಇತಿ ತ್ರಯಃ-ತ್ರಿಗ್ಂಶಃ । ಸ್ತೋಮಃ ॥ (೧೭) ॥

ಭೂತಮ್=ನಿಷ್ಪನ್ನವಾದ; ನಿಶಾಂತಮ್=ಗೃಹವು; ಸ್ಪೃತಮ್=ನಿನ್ನ ಪ್ರೀತಿನಿಮಿತ್ತ ವಾಗಿದೆ; ತ್ರಯಸ್ತ್ರಿಂಶಃ ಸ್ತೋಮಃ=[ನೀನು] ತ್ರಯಸ್ತ್ರಿಂಶಸ್ತೋಮಸ್ವರೂಪಳಾಗಿ ರುವೆ; [ನಿನ್ನನ್ನು ಇಲ್ಲಿ ಉಪಧಾನ ಮಾಡುತ್ತೇನೆ].

## ವಿನಿಯೋಗಸಂಗ್ರಹ

1-10 ಅಗ್ನೇಃ ಶಿಷ್ಟಾ ದಶಾದಧ್ಯಾದಕ್ಷ್ಣಯಾಸ್ತೋಮಸಂಜ್ಞಿಕಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-10

## ॥ ದಶಮೋಽನುವಾಕಃ ॥

ಏಕಯಾಽಸ್ತುವತ ಪ್ರಜಾ ಅಧೀಯಂತ ಪ್ರಜಾಪತಿರಧಿಪತಿ

-ರಾಸೀತ್ತಿಸೃಭಿರಸ್ತುವತ

---

ಏಕಯಾ । ಅಸ್ತುವತ । ಪ್ರಜಾ ಇತಿ ಪ್ರ-ಜಾಃ । ಅಧೀಯಂತ । ಪ್ರಜಾಪತಿರಿತಿ ಪ್ರಜಾ-ಪತಿಃ । ಅಧಿಪತಿರಿತ್ಯಧಿ-ಪತಿಃ । ಆಸೀತ್ । ತಿಸೃಭಿರಿತಿ ತಿಸೃ-ಭಿಃ । ಅಸ್ತುವತ ।

---

ಒಂಬತ್ತನೆಯ ಅನುವಾಕದಲ್ಲಿ ಅವಶಿಷ್ಟವಾದ ಅಕ್ಷ್ಣಯಾಸ್ತೋಮೀಯೇಷ್ಟಕೆಗಳು ಉಕ್ತವಾದವು. ಈ ಹತ್ತನೆಯ ಅನುವಾಕದಲ್ಲಿ ಹದಿನೇಳು ಸೃಷ್ಟೀಷ್ಟಕೋಪಧಾನ ಮಂತ್ರಗಳು ಉಕ್ತವಾಗಿವೆ.

---

| ಮಂತ್ರ | ವಿನಿಯೋಗ |
|---|---|
| **ಏಕಯಾ..ಪ್ರಜಾಪತಿಃ..ಆಸೀತ್ ॥** | ಸೃಷ್ಟೀಷ್ಟಕೋಪಧಾನದ ಪ್ರಥಮಮಂತ್ರ. |
| **ತಿಸೃಭಿಃ..ಬ್ರಹ್ಮಣಸ್ಪತಿಃ...ಆಸೀತ್ ॥** | ಎರಡನೆಯ ಇಷ್ಟಕೋಪಧಾನಕ್ಕಾಗಿ. |

---

▲ **ಏಕಯಾ**=ಸ್ತೋತ್ರಕ್ಕೆ ಸಂಬಂಧಿಸಿದ ಒಂದು ಋಕ್ಕಿನಿಂದ [ಮಹರ್ಷಿಗಳು] **ಅಸ್ತುವತ**=ಸ್ತುತಿಯನ್ನು ಮಾಡಿದರು; **ಪ್ರಜಾಃ**=[ಅದರ ಮಹಿಮೆಯಿಂದ ಮಹರ್ಷಿಗಳಿಂದ] ಪ್ರಜೆಗಳು; **ಅಧೀಯಂತ**=ಹೊಂದಲ್ಪಟ್ಟರು; [ಆ ಪ್ರಜೆಗಳಿಗೆ] **ಪ್ರಜಾಪತಿಃ**=ಪ್ರಜಾಪತಿಯು; **ಅಧಿಪತಿಃ ಆಸೀತ್**=ಸ್ವಾಮಿಯಾದನು. ▲ **ತಿಸೃಭಿಃ ಅಸ್ತುವತ**=[ಋಷಿಗಳು] ಮೂರು ಋಕ್‌ಗಳಿಂದ ಸ್ತೋತ್ರ ಮಾಡಿದರು;

ಬ್ರಹ್ಮಾಸೃಜ್ಯತ ಬ್ರಹ್ಮಣಸ್ಪತಿರಧಿಪತಿರಾಸೀತ್ಪಂಚಭಿರಸ್ತುವತ

ಭೂತಾನ್ಯಸೃಜ್ಯಂತ ಭೂತಾನಾಂ ಪತಿರಧಿಪತಿರಾಸೀ

ತ್ಸಪ್ತಭಿರಸ್ತುವತ ಸಪ್ತರ್ಷಯೋಽಸೃಜ್ಯಂತ

---

ಬ್ರಹ್ಮ । ಅಸೃಜ್ಯತ । ಬ್ರಹ್ಮಣಃ । ಪತಿಃ । ಅಧಿಪತಿರಿತ್ಯಧಿ-ಪತಿಃ । ಆಸೀತ್ । ಪಂಚಭಿರಿತಿ ಪಂಚ-ಭಿಃ । ಅಸ್ತುವತ । ಭೂತಾನಿ । ಅಸೃಜ್ಯಂತ । ಭೂತಾನಾಮ್ । ಪತಿಃ । ಅಧಿಪತಿರಿತ್ಯಧಿ-ಪತಿಃ । ಆಸೀತ್ । ಸಪ್ತಭಿರಿತಿ ಸಪ್ತ-ಭಿಃ । ಅಸ್ತುವತ । ಸಪ್ತರ್ಷಯ ಇತಿ ಸಪ್ತ-ಋಷಯಃ । ಅಸೃಜ್ಯಂತ ।

---

| ಮಂತ್ರ | ವಿನಿಯೋಗ |
| --- | --- |
| **ಪಂಚಭಿಃ..ಭೂತಾನಾಂ...ಆಸೀತ್ ॥** | ಮೂರನೆಯ ಇಷ್ಟಕೋಪಧಾನಕ್ಕಾಗಿ. |
| **ಸಪ್ತಭಿಃ..ಧಾತಾ...ಆಸೀತ್ ॥** | ನಾಲ್ಕನೆಯ ಇಷ್ಟಕೋಪಧಾನಕ್ಕಾಗಿ. |

---

ಬ್ರಹ್ಮ ಅಸೃಜ್ಯತ=[ಇದರ ಮಹಿಮೆಯಿಂದ] ಬ್ರಾಹ್ಮಣಜಾತಿಯು ಸೃಷ್ಟಿಸಲ್ಪಟ್ಟಿತು; **ಬ್ರಹ್ಮಣಃ ಪತಿಃ**=[ಆ ಬ್ರಾಹ್ಮಣಜಾತಿಗೆ] ಬ್ರಹ್ಮಣಸ್ಪತಿದೇವನು; **ಅಧಿಪತಿಃ ಆಸೀತ್**=ಒಡೆಯನಾದನು. 🔔 **ಪಂಚಭಿಃ**=[ಆ ಋಷಿಗಳು ಒಮ್ಮೆ] ಐದು ಋಕ್‌ಗಳಿಂದ **ಅಸ್ತುವತ**=ಸ್ತುತಿಸಿದರು; **ಭೂತಾನಿ ಅಸೃಜ್ಯಂತ**=[ಇದರ ಪ್ರಭಾವದಿಂದ] ಪ್ರಾಣಿಗಳು /ಪಂಚಭೂತಗಳು ಸೃಷ್ಟಿಸಲ್ಪಟ್ಟವು; **ಭೂತಾನಾಮ್ ಪತಿಃ**='ಭೂತಾನಾಂ ಪತಿ' ಎಂಬ ದೇವನು; **ಅಧಿಪತಿಃ ಆಸೀತ್**=ಒಡೆಯನಾದನು. 🔔 **ಸಪ್ತಭಿಃ ಅಸ್ತುವತ**=[ಆ ಮುನಿಗಳು] ಏಳು ಋಕ್‌ಗಳಿಂದ ಸ್ತೋತ್ರವನ್ನು ಮಾಡಿದರು; **ಸಪ್ತಋಷಯಃ ಅಸೃಜ್ಯಂತ**=[ಇದರ ಪ್ರಭಾವದಿಂದ] ಸಪ್ತರ್ಷಿಗಳು ಸೃಷ್ಟಿಸಲ್ಪಟ್ಟರು;

ಧಾತಾಽಧಿಪತಿರಾಸೀನ್ನವಭಿರಸ್ತುವತ
ಪಿತರೋಽಸೃಜ್ಯಂತಾದಿತಿರಧಿಪತ್ನ್ಯಾಸೀದೇಕಾದಶಭಿರ
ಸ್ತುವತರ್ತವೋಽಸೃಜ್ಯಂತಾಽಽರ್ತವೋಽಧಿಪತಿರಾಸೀ–

ಧಾತಾ । ಅಧಿಪತಿರಿತ್ಯಧಿ–ಪತಿಃ । ಆಸೀತ್ । ನವಭಿರಿತಿ ನವ–ಭಿಃ । ಅಸ್ತುವತ । ಪಿತರಃ । ಅಸೃಜ್ಯಂತ । ಅದಿತಿಃ । ಅಧಿಪತ್ನೀತ್ಯಧಿ–ಪತ್ನೀ । ಆಸೀತ್ । ಏಕಾದಶಭಿರಿತ್ಯೇಕಾದಶ–ಭಿಃ । ಅಸ್ತುವತ । ಋತವಃ । ಅಸೃಜ್ಯಂತ । ಆರ್ತವಃ । ಅಧಿಪತಿರಿತ್ಯಧಿ–ಪತಿಃ । ಆಸೀತ್ ।

| ಮಂತ್ರ | ವಿನಿಯೋಗ |
|---|---|
| ನವಭಿಃ..ಅದಿತಿಃ...ಅಧಿಪತ್ನ್ಯಾಸೀತ್ ॥ | ಐದನೆಯ ಇಷ್ಟಕೋಪಧಾನಕ್ಕಾಗಿ. |
| ಏಕಾದಶಭಿಃ..ಆರ್ತವಃ...ಆಸೀತ್ ॥ | ಆರನೆಯ ಇಷ್ಟಕೋಪಧಾನಕ್ಕಾಗಿ. |

**ಧಾತಾ ಅಧಿಪತಿಃ ಆಸೀತ್**=ಜಗತ್ಸ್ರಷ್ಟನಾದ ಧಾತೃದೇವನು ಒಡೆಯನಾದನು; ▲ **ನವಭಿಃ ಅಸ್ತುವತ**=[ಆ ಋಷಿಗಳು ಒಮ್ಮೆ] ಒಂಬತ್ತು ಋಕ್‌ಗಳಿಂದ ಸ್ತುತಿಸಿದರು; **ಪಿತರಃ ಅಸೃಜ್ಯಂತ**=[ಇದರ ಪ್ರಭಾವದಿಂದ] ಪಿತೃದೇವತೆಗಳು ಸೃಷ್ಟರಾದರು; **ಅದಿತಿಃ**=ಅದಿತಿದೇವಿಯು/ಭೂಮಿಯು; **ಅಧಿಪತ್ನೀ ಆಸೀತ್**=ಒಡತಿಯಾಗಿದ್ದಳು; ▲ **ಏಕಾದಶಭಿಃ ಅಸ್ತುವತ**=[ಆ ಋಷಿಗಳು ಒಮ್ಮೆ] ಹನ್ನೊಂದು ಋಕ್‌ಗಳಿಂದ ಸ್ತುತಿಸಿದರು; **ಋತವಃ ಅಸೃಜ್ಯಂತ**=ವಸಂತಾದಿ ಋತುಗಳು ಸೃಷ್ಟಿಸಲ್ಪಟ್ಟವು. **ಆರ್ತವಃ ಅಧಿಪತಿಃ ಆಸೀತ್**=ಋತುಪಾಲಕನಾದ ದೇವನು ಅವುಗಳಿಗೆ ಒಡೆಯನಾಗಿದ್ದನು;

ಈ ಅನುವಾಕದಲ್ಲಿ ಸೃಷ್ಟೀಷ್ಟಕೆಗಳ ಉಪಧಾನಮಂತ್ರಗಳು ಹೇಳಲ್ಪಟ್ಟಿವೆ.

ತ್ರಯೋದಶಭಿರಸ್ತುವತ ಮಾಸಾ ಅಸೃಜ್ಯಂತ ಸಂವತ್ಸ

ರೋಽಧಿಪತಿ[ರೋಽಧಿಪತಿಃ(೧೮)ಆಸೀತ್ಪಂಚದ]ರಾಸೀತ್ಪಂ

ಚದಶಭಿರಸ್ತುವತ ಕ್ಷತ್ರಮಸೃಜ್ಯತೇಂದ್ರೋಽಧಿಪತಿರಾಸೀ-

---

ತ್ರಯೋದಶಭಿರಿತಿ ತ್ರಯೋದಶ-ಭಿಃ । ಅಸ್ತುವತ । ಮಾಸಾಃ । ಅಸೃಜ್ಯಂತ ।

ಸಂವತ್ಸರ ಇತಿ ಸಮ್-ವತ್ಸರಃ । ಅಧಿಪತಿರಿತ್ಯಧಿ-ಪತಿಃ ॥ (೧೮) ॥ ಆಸೀತ್ ।

ಪಂಚದಶಭಿರಿತಿ ಪಂಚದಶ-ಭಿಃ । ಅಸ್ತುವತ । ಕ್ಷತ್ರಮ್ । ಅಸೃಜ್ಯತ । ಇಂದ್ರಃ ।

ಅಧಿಪತಿರಿತ್ಯಧಿ-ಪತಿಃ । ಆಸೀತ್ ।

---

| ಮಂತ್ರ | ವಿನಿಯೋಗ |
| --- | --- |
| **ತ್ರಯೋದಶಭಿಃ..ಸಂವತ್ಸರಃ...ಆಸೀತ್ ॥** | ಏಳನೆಯ ಇಷ್ಟಕೋಪಧಾನಕ್ಕಾಗಿ. |
| **ಪಂಚದಶಭಿಃ..ಇಂದ್ರಃ...ಆಸೀತ್ ॥** | ಎಂಟನೆಯ ಇಷ್ಟಕೋಪಧಾನಕ್ಕಾಗಿ. |

---

▲ **ತ್ರಯೋದಶಭಿಃ ಅಸ್ತುವತ**=[ಆ ಋಷಿಗಳು] ಹದಿಮೂರು ಋಕ್‌ಗಳಿಂದ ಸ್ತುತಿಸಿದರು; **ಮಾಸಾಃ ಅಸೃಜ್ಯಂತ**=ಚೈತ್ರಾದಿಮಾಸಗಳು ಸೃಷ್ಟಿಸಲ್ಪಟ್ಟವು; [ಅವುಗಳಿಗೆ] **ಸಂವತ್ಸರಃ ಅಧಿಪತಿಃ ಆಸೀತ್**=ಸಂವತ್ಸರದೇವನು ಒಡೆಯನಾದನು. ▲ **ಪಂಚದಶಭಿಃ ಅಸ್ತುವತ**=[ಆ ಋಷಿಗಳು] ಹದಿನೈದು ಋಕ್‌ಗಳಿಂದ ಗಾನ ಮಾಡಿ ಸ್ತುತಿಸಿದರು; **ಕ್ಷತ್ರಮ್ ಅಸೃಜ್ಯತ**=[ಅದರಿಂದ] ಕ್ಷತ್ರಿಯಜಾತಿಯು ಉತ್ಪನ್ನವಾಯಿತು; **ಇಂದ್ರಃ ಅಧಿಪತಿಃ ಆಸೀತ್**=[ಅದಕ್ಕೆ] ಇಂದ್ರನು ಸ್ವಾಮಿಯಾದನು.

---

**'ಸೃಷ್ಟೀರುಪದಧಾತಿ'** ಎಂಬುದಾಗಿ ಐದನೆಯ ಕಾಂಡದಲ್ಲಿ ಇವುಗಳ ವಿಧಿವಾಕ್ಯವಿದೆ.

ತ್ಸಪ್ತದಶಭಿರಸ್ತುವತ ಪಶವೋಽಸೃಜ್ಯಂತ ಬೃಹಸ್ಪತಿ

ರಧಿಪತಿರಾಸೀನ್ನವದಶಭಿರಸ್ತುವತ ಶೂದ್ರಾರ್ಯಾ

ವಸೃಜ್ಯೇತಾಮಹೋರಾತ್ರೇ ಅಧಿಪತ್ನೀ ಆಸ್ತಾ-

---

ಸಪ್ತದಶಭಿರಿತಿ ಸಪ್ತದಶ-ಭಿಃ । ಅಸ್ತುವತ । ಪಶವಃ । ಅಸೃಜ್ಯಂತ । ಬೃಹಸ್ಪತಿಃ । ಅಧಿಪತಿರಿತ್ಯಧಿ-ಪತಿಃ । ಆಸೀತ್ । ನವದಶಭಿರಿತಿ ನವದಶ-ಭಿಃ । ಅಸ್ತುವತ । ಶೂದ್ರಾರ್ಯಾವಿತಿ ಶೂದ್ರ-ಅರ್ಯೌ । ಅಸೃಜ್ಯೇತಾಮ್ । ಅಹೋರಾತ್ರೇ ಇತ್ಯಹಃ-ರಾತ್ರೇ । ಅಧಿಪತ್ನೀ ಇತ್ಯಧಿ-ಪತ್ನೀ । ಆಸ್ತಾಮ್ ।

---

| ಮಂತ್ರ | ವಿನಿಯೋಗ |
|---|---|
| ಸಪ್ತದಶಭಿಃ...ಬೃಹಸ್ಪತಿಃ...ಆಸೀತ್ ॥ | ಒಂಬತ್ತನೆಯ ಇಷ್ಟಕೋಪಧಾನಕ್ಕಾಗಿ. |
| ನವದಶಭಿಃ...ಅಹೋರಾತ್ರೇ...ಆಸ್ತಾಮ್ ॥ | ಹತ್ತನೆಯ ಇಷ್ಟಕೋಪಧಾನಕ್ಕಾಗಿ. |

---

▲ ಸಪ್ತದಶಭಿಃ ಅಸ್ತುವತ=[ಆ ಋಷಿಗಳು] ಹದಿನೇಳು ಋಕ್‌ಗಳಿಂದ ಸ್ತುತಿಸಿದರು; ಪಶವಃ ಅಸೃಜ್ಯಂತ=[ಅದರಿಂದ] ಪ್ರಾಣಿಗಳು ಸೃಷ್ಟವಾದವು; [ಅವುಗಳಿಗೆ] ಬೃಹಸ್ಪತಿಃ ಅಧಿಪತಿಃ ಆಸೀತ್=ಬೃಹಸ್ಪತಿದೇವನು ಸ್ವಾಮಿಯಾದನು; ▲ ನವದಶಭಿಃ ಅಸ್ತುವತ=[ಆ ಋಷಿಗಳು] ಹತ್ತೊಂಬತ್ತು ಋಕ್‌ಗಳಿಂದ ಸ್ತುತಿಸಿದರು; ಶೂದ್ರಾರ್ಯೌ ಅಸೃಜ್ಯೇತಾಮ್=[ಅದರಿಂದ] ಶೂದ್ರ, ವೈಶ್ಯಜಾತಿಗಳು ಜನಿಸಿದವು; ಅಹೋರಾತ್ರೇ=[ಅವುಗಳಿಗೆ] ಅಹೋರಾತ್ರದೇವತೆಗಳು; ಅಧಿಪತ್ನೀ ಆಸ್ತಾಮ್=ಒಡೆಯರಾದರು.

ಮೇಕವಿಗ್ಂಶತ್ಯಾಸ್ತುವತೈಕಶಫಾಃ ಪಶವೋಽಸೃಜ್ಯಂತ
ವರುಣೋಽಧಿಪತಿರಾಸೀತ್ತ್ರಯೋವಿಗ್ಂಶತ್ಯಾಽಸ್ತುವತ
ಕ್ಷುದ್ರಾಃ ಪಶವೋಽಸೃಜ್ಯಂತ ಪೂಷಾಽಧಿಪತಿರಾಸೀ

---

ಏಕವಿಗ್ಂಶತ್ಯೇತ್ಯೇಕ-ವಿಗ್ಂಶತ್ಯಾ । ಅಸ್ತುವತ । ಏಕಶಫಾ ಇತ್ಯೇಕ-ಶಫಾಃ ।
ಪಶವಃ । ಅಸೃಜ್ಯಂತ । ವರುಣಃ । ಅಧಿಪತಿರಿತ್ಯಧಿ-ಪತಿಃ । ಆಸೀತ್ ।
ತ್ರಯೋವಿಗ್ಂಶತ್ಯೇತಿ ತ್ರಯಃ-ವಿಗ್ಂಶತ್ಯಾ । ಅಸ್ತುವತ । ಕ್ಷುದ್ರಾಃ । ಪಶವಃ ।
ಅಸೃಜ್ಯಂತ । ಪೂಷಾ । ಅಧಿಪತಿರಿತ್ಯಧಿ-ಪತಿಃ । ಆಸೀತ್ ।

---

| ಮಂತ್ರ | ವಿನಿಯೋಗ |
|---|---|
| **ಏಕವಿಗ್ಂಶತ್ಯಾ..ವರುಣಃ..ಆಸೀತ್ ॥** | ಹನ್ನೊಂದನೆಯ ಇಷ್ಟಕೋಪಧಾನಕ್ಕಾಗಿ. |
| **ತ್ರಯೋವಿಗ್ಂಶತ್ಯಾ..ಪೂಷಾ..ಆಸೀತ್ ॥** | ಹನ್ನೆರಡನೆಯ ಇಷ್ಟಕೋಪಧಾನಕ್ಕಾಗಿ. |

---

▲ **ಏಕವಿಗ್ಂಶತ್ಯಾ ಅಸ್ತುವತ**=[ಆ ಋಷಿಗಳು] ಇಪ್ಪತ್ತೊಂದು ಋಕ್‌ಗಳಿಂದ ಸ್ತುತಿಸಿದರು; **ಏಕಶಫಾಃ ಪಶವಃ**=[ಅದರಿಂದ] ಒಂದು ಗೊರಸಿನ ಅಶ್ವಾದಿ ಪಶುಗಳು; **ಅಸೃಜ್ಯಂತ**=ಸೃಷ್ಟಿಸಲ್ಪಟ್ಟವು; **ವರುಣಃ ಅಧಿಪತಿಃ ಆಸೀತ್**=[ಅವುಗಳಿಗೆ] ವರುಣನು ಒಡೆಯನಾದನು; ▲ **ತ್ರಯೋವಿಗ್ಂಶತ್ಯಾ ಅಸ್ತುವತ**=[ಆ ಋಷಿಗಳು] ಇಪ್ಪತ್ತಮೂರು ಋಕ್‌ಗಳಿಂದ ಸ್ತುತಿಸಿದರು; **ಕ್ಷುದ್ರಾಃ ಪಶವಃ**=[ಅದರಿಂದ] ಆಡು ಕುರಿ ಮುಂತಾದ ಸಣ್ಣ ಪ್ರಾಣಿಗಳು; **ಅಸೃಜ್ಯಂತ**=ಸೃಷ್ಟಿಸಲ್ಪಟ್ಟವು; **ಪೂಷಾ ಅಧಿಪತಿಃ ಆಸೀತ್**=[ಅವುಗಳಿಗೆ] ಪೂಷದೇವನು ಅಧಿಪತಿಯಾದನು.

ತ್ಪಂಚವಿಗ್ಂಶತ್ಯಾಽಸ್ತುವತಾಽಽರಣ್ಯಾಃ ಪಶವೋಽಸೃಜ್ಯಂತ

ವಾಯುರಧಿಪತಿರಾಸೀತ್ಸಪ್ತವಿಗ್ಂಶತ್ಯಾಽಸ್ತುವತ

ದ್ಯಾವಾಪೃಥಿವೀ ವ್ಯೈ[ವಿ(೧೯)ಐತಾಂ]ತಾಂ ವಸವೋ

ರುದ್ರಾ ಆದಿತ್ಯಾ

---

ಪಂಚವಿಗ್ಂಶತ್ಯೇತಿ ಪಂಚ-ವಿಗ್ಂಶತ್ಯಾ । ಅಸ್ತುವತ । ಆರಣ್ಯಾಃ । ಪಶವಃ । ಅಸೃಜ್ಯಂತ । ವಾಯುಃ । ಅಧಿಪತಿರಿತ್ಯಧಿ-ಪತಿಃ । ಆಸೀತ್ । ಸಪ್ತವಿಗ್ಂಶತ್ಯೇತಿ ಸಪ್ತ-ವಿಗ್ಂಶತ್ಯಾ । ಅಸ್ತುವತ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ವೀತಿ । (೧೯) ಐತಾಮ್ । ವಸವಃ । ರುದ್ರಾಃ । ಆದಿತ್ಯಾಃ ।

---

| ಮಂತ್ರ | ವಿನಿಯೋಗ |
|---|---|
| **ಪಂಚವಿಗ್ಂಶತ್ಯಾ..ವಾಯುಃ..ಆಸೀತ್ ॥** | ಹದಿಮೂರನೆಯ ಇಷ್ಟಕೋಪಧಾನಕ್ಕಾಗಿ. |
| **ಸಪ್ತವಿಗ್ಂಶತ್ಯಾ...ಪತ್ಯಮಾಸೀತ್ ॥** | ಹದಿನಾಲ್ಕನೆಯ ಇಷ್ಟಕೋಪಧಾನಕ್ಕಾಗಿ. |

---

▲ **ಪಂಚವಿಗ್ಂಶತ್ಯಾ ಅಸ್ತುವತ**=[ಆ ಋಷಿಗಳು] ಇಪ್ಪತ್ತೈದು ಋಕ್‌ಗಳಿಂದ ಸ್ತುತಿಸಿದರು; **ಆರಣ್ಯಾಃ ಪಶವಃ**=[ಆ ಸ್ತುತಿಯ ಪ್ರಭಾವದಿಂದ] ಹುಲಿ, ಸಿಂಹ ಮುಂತಾದ ಕಾಡುಪ್ರಾಣಿಗಳು; **ಅಸೃಜ್ಯಂತ**=ಜನಿಸಿದವು; **ವಾಯುಃ ಅಧಿಪತಿಃ ಆಸೀತ್**=[ಅವುಗಳಿಗೆ] ವಾಯುವು ಸ್ವಾಮಿಯಾದನು. ▲ **ಸಪ್ತವಿಗ್ಂಶತ್ಯಾ ಅಸ್ತುವತ**=[ಆ ಋಷಿಗಳು] ಇಪ್ಪತ್ತೇಳು ಋಕ್‌ಗಳಿಂದ ಸ್ತುತಿಸಿದರು; **ದ್ಯಾವಾಪೃಥಿವೀ ವ್ಯೈತಾಮ್**=[ಇದರ ಪ್ರಭಾವದಿಂದ] ದ್ಯುಲೋಕ-ಭೂಲೋಕಗಳು ಬೇರೆ ಬೇರೆ ಯಾದವು; **ವಸವಃ**=ವಸುಗಣಗಳು; **ರುದ್ರಾಃ**=ರುದ್ರಗಣಗಳು; **ಆದಿತ್ಯಾಃ**=ಆದಿತ್ಯ ಗಣಗಳು;

ಅನು ವ್ಯಾಯನ್ತೇಷಾಮಾಧಿಪತ್ಯಮಾಸೀನ್ನವ

ವಿಗ್ಂಶತ್ಯಾಽಸ್ತುವತ ವನಸ್ಪತಯೋಽಸೃಜ್ಯಂತ ಸೋಮೋಽಧಿ

ಪತಿರಾಸೀದೇಕತ್ರಿಗ್ಂಶತಾಽಸ್ತುವತ ಪ್ರಜಾ ಅಸೃಜ್ಯಂತ

---

ಅನು । ವೀತಿ । ಆಯನ್ನ್ । ತೇಷಾಮ್ । ಆಧಿಪತ್ಯಮಿತ್ಯಾಧಿ-ಪತ್ಯಮ್ । ಆಸೀತ್ ।

ನವವಿಗ್ಂಶತ್ಯೇತಿ ನವ-ವಿಗ್ಂಶತ್ಯಾ । ಅಸ್ತುವತ । ವನಸ್ಪತಯಃ । ಅಸೃಜ್ಯಂತ ।

ಸೋಮಃ । ಅಧಿಪತಿರಿತ್ಯಧಿ-ಪತಿಃ । ಆಸೀತ್ । ಏಕತ್ರಿಗ್ಂಶತೇತ್ಯೇಕ-ತ್ರಿಗ್ಂಶತಾ ।

ಅಸ್ತುವತ । ಪ್ರಜಾ ಇತಿ ಪ್ರ-ಜಾಃ । ಅಸೃಜ್ಯಂತ ।

---

| ಮಂತ್ರ | ವಿನಿಯೋಗ |
|---|---|
| **ನವವಿಗ್ಂಶತ್ಯಾ...ಸೋಮಃ...ಆಸೀತ್ ॥** | ಹದಿನೈದನೆಯ ಇಷ್ಟಕೋಪಧಾನಕ್ಕಾಗಿ. |
| **ಏಕತ್ರಿಗ್ಂಶತಾ...ಆಧಿಪತ್ಯಮಾಸೀತ್ ॥** | ಹದಿನಾರನೆಯ ಇಷ್ಟಕೋಪಧಾನಕ್ಕಾಗಿ. |

---

**ಅನು ವ್ಯಾಯನ್**=[ಆ ದ್ಯಾವಾಪೃಥಿವಿಗಳನ್ನು] ಅನುಸರಿಸಿ [ಒಟ್ಟಾಗಿದ್ದ ತಾವು] ಬೇರೆ ಬೇರೆಯಾದರು; **ತೇಷಾಮ್ ಆಧಿಪತ್ಯಮ್ ಆಸೀತ್**=ಆ ವಸು-ರುದ್ರ-ಆದಿತ್ಯರಿಗೆ ಭೂಲೋಕ-ಸ್ವರ್ಗಲೋಕಗಳ ಮೇಲೆ ಒಡೆತನವಾಯಿತು. 🔔 **ನವವಿಗ್ಂಶತ್ಯಾ ಅಸ್ತುವತ**=[ಆ ಋಷಿಗಳು] ಇಪ್ಪತ್ತೊಂಬತ್ತು ಋಕ್‌ಗಳಿಂದ ಸ್ತೋತ್ರ ಮಾಡಿದರು. **ವನಸ್ಪತಯಃ ಅಸೃಜ್ಯಂತ**=[ಅದರಿಂದ] ವನಸ್ಪತಿಗಳು ಉತ್ಪನ್ನವಾದವು; **ಸೋಮಃ ಅಧಿಪತಿಃ ಆಸೀತ್**=[ಅವುಗಳಿಗೆ] ಸೋಮದೇವನು ಅಧಿಪತಿಯಾದನು; 🔔 **ಏಕತ್ರಿಗ್ಂಶತಾ ಅಸ್ತುವತ**=[ಮುನಿಗಳು] ಮೂವತ್ತೊಂದು ಋಕ್‌ಗಳಿಂದ ಸ್ತುತಿಸಿದರು; **ಪ್ರಜಾಃ ಅಸೃಜ್ಯಂತ**=[ಅದರ ಪ್ರಭಾವದಿಂದ] ಪ್ರಜೆಗಳು ಸೃಷ್ಟಿಸಲ್ಪಟ್ಟರು.

ಯಾವಾನಾಂ ಚಾಯಾವಾನಾಂ ಚಾಽಽಧಿಪತ್ಯಮಾಸೀ

ತ್ತ್ರಯಸ್ತ್ರಿಗ್ಂಶತಾಽಸ್ತುವತ ಭೂತಾನ್ಯಶಾಮ್ಯನ್ಪ್ರಜಾಪತಿಃ

ಪರಮೇಷ್ಠ್ಯಧಿಪತಿರಾಸೀತ್ ॥ ೨೦–10 ॥

[ಸಂವತ್ಸರೋಽಧಿಪತಿರ್ವಿ ಪಂಚತ್ರಿಗ್ಂಶಚ್ಚ ॥]

---

ಯಾವಾನಾಮ್ । ಚ । ಅಯಾವಾನಾಮ್ । ಚ । ಆಧಿಪತ್ಯಮಿತ್ಯಾಧಿ–ಪತ್ಯಮ್ । ಆಸೀತ್ । ತ್ರಯಸ್ತ್ರಿಗ್ಂಶತೇತಿ ತ್ರಯಃ–ತ್ರಿಗ್ಂಶತಾ । ಅಸ್ತುವತ । ಭೂತಾನಿ । ಅಶಾಮ್ಯನ್ । ಪ್ರಜಾಪತಿರಿತಿ ಪ್ರಜಾ–ಪತಿಃ । ಪರಮೇಷ್ಠೀ । ಅಧಿಪತಿರಿತ್ಯಧಿ–ಪತಿಃ । ಆಸೀತ್ ॥ (೨೦) ॥

---

| ಮಂತ್ರ | ವಿನಿಯೋಗ |
|---|---|
| ತ್ರಯಸ್ತ್ರಿಗ್ಂಶತಾ...ಆಸೀತ್ ॥ | ಹದಿನೇಳನೆಯ ಇಷ್ಟಕೋಪಧಾನಕ್ಕಾಗಿ. |

---

**ಯಾವಾನಾಮ್ ಚ**=[ಆ ಪ್ರಜೆಗಳ ಮೇಲೆ] ಮಾಸದೇವತೆಗಳಿಗೂ; **ಅಯಾವಾನಾಮ್ ಚ**=ಅರ್ಧಮಾಸದೇವತೆಗಳಿಗೂ; **ಆಧಿಪತ್ಯಮ್ ಆಸೀತ್**=ಸ್ವಾಮಿತ್ವವು ಉಂಟಾಯಿತು; 🔔 **ತ್ರಯಸ್ತ್ರಿಗ್ಂಶತಾ ಅಸ್ತುವತ**=[ಆ ಋಷಿಗಳು] ಮೂವತ್ತಮೂರು ಋಕ್‌ಗಳಿಂದ ಸಾಮಗಾನ ಮಾಡಿದರು; **ಭೂತಾನಿ ಅಶಾಮ್ಯನ್**=ಇದು ಪ್ರಾಣಿಗಳನ್ನು ಉಪದ್ರವರಹಿತರನ್ನಾಗಿ/ಶಾಂತರನ್ನಾಗಿ ಮಾಡಿತು. **ಪ್ರಜಾಪತಿಃ ಪರಮೇಷ್ಠೀ**=[ಆ ಭೂತ/ಪ್ರಾಣಿಗಳಿಗೆ] ಶ್ರೇಷ್ಠಸ್ಥಾನವಾದ ಸತ್ಯಲೋಕದಲ್ಲಿರುವ ಪ್ರಜಾಪತಿ ದೇವನು; **ಅಧಿಪತಿಃ ಆಸೀತ್**=ಅಧಿಪತಿಯಾದನು.

---

ಮುನಿಗಳ ಬಗೆಬಗೆಯ ಸ್ತೋತ್ರಗಳಿಂದ ಅನೇಕ ಬಗೆಯ ಸೃಷ್ಟಿಯು ಹೇಳಲ್ಪಟ್ಟಿದೆ. ಅವುಗಳಿಗೆ ಬೇರೆ ಬೇರೆ ದೇವತೆಗಳ ಒಡೆತನವೂ ಹೇಳಲ್ಪಟ್ಟಿದೆ. 'ಅಸೃಜ್ಯತ' ಎಂಬಲ್ಲಿನ

**'ಸೃಜ್'** ಧಾತುವಿನ ಸಂಬಂಧದಿಂದ ಹೇಳಲ್ಪಟ್ಟಿರುವ ಮಂತ್ರಗಳಿಂದ ಉಪಧಾನ ಮಾಡಲ್ಪಡುವ ಇಷ್ಟಕೆಗಳಾದುದರಿಂದ ಈ ಇಷ್ಟಕೆಗಳಿಗೆ **'ಸೃಷ್ಟೀಷ್ಟಕೆ'**ಗಳೆಂದು ಹೆಸರು.

---

## ವಿನಿಯೋಗಸಂಗ್ರಹ

**1-17** ಏಕ ಸಪ್ತದಶಾದಧ್ಯಾತ್ ಇಷ್ಟಕಾಃ ಸೃಷ್ಟಿಸಂಜ್ಞಿತಾಃ ॥

## ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-17

---

## ಅನುವಾಕದ ವಿಶೇಷವಿಷಯಗಳು

### ಅ) ಮೀಮಾಂಸಾ

**೧) 'ಸೃಷ್ಟೀರುಪದಧಾತಿ' ಎಂಬುದು ಗುಣವಿಧಿಯೇ? ಅರ್ಥವಾದವೇ?**

[ಜೈ. ಸೂ. 1.4.45-48]

ಚಯನಬ್ರಾಹ್ಮಣದಲ್ಲಿ **'ಸೃಷ್ಟೀರುಪದಧಾತಿ ಯಥಾಸೃಷ್ಟಮೇವಾವರುಂಧೇ'** ಎಂದಿದೆ. **'ಸೃಷ್ಟೀಃ'** ಎಂಬುದರ ವಿವರಣೆ ಯಾವ ಇಷ್ಟಕೆಗಳ ಉಪಧಾನಮಂತ್ರವು ಸೃಷ್ಟಿಶಬ್ದದಿಂದ ಕೂಡಿದೆಯೋ ಅವು ಎಂದು. **ಸೃಷ್ಟೀಃ** ಎಂಬುದರ ವಿಗ್ರಹವಾಕ್ಯ **'ಸೃಷ್ಟಿಮಾನ್ ಆಸಾಮುಪಧಾನೋ ಮಂತ್ರಃ'** ಎಂಬುದಾಗಿ ಇದೆ. **'ಸೃಷ್ಟೀರುಪದಧಾತಿ'** ಎಂಬ ವಿಧಿಯಲ್ಲಿ ಸೃಷ್ಟಿಶಬ್ದವಾದ **'ಅಸೃಜ್ಯತ'** ಎಂಬುದರಿಂದ ಕೂಡಿದ ಮಂತ್ರವು ಕೂಡಿರುವುದರಿಂದ ಇದು ಮಂತ್ರರೂಪಗುಣವಿಧಿಯಾಗುತ್ತದೆ. ಇದು ಇಲ್ಲಿನ **ಪೂರ್ವಪಕ್ಷ.** ಬೇರೆ ವಿಧಿಯೊಡನೆ ಏಕವಾಕ್ಯತೆಯು ಇಲ್ಲವಾದ ಕಾರಣ ಇದು ಅರ್ಥವಾದವಾಗುವುದಿಲ್ಲ.

ಇಲ್ಲಿಯ **ಸಿದ್ಧಾಂತವು** ಹೀಗಿದೆ; ಅಗ್ನಿಚಯನಪ್ರಕರಣದಲ್ಲಿ ಆ ಮಂತ್ರಗಳನ್ನು ಪಾಠ ಮಾಡಿರುವುದರಿಂದಲೇ ಅವುಗಳಿಗೆ ಇರುವ ಚಯನಸಂಬಂಧವು ಸಾಮಾನ್ಯವಾಗಿ ತಿಳಿಯುತ್ತದೆ. **'ಅಸೃಜ್ಯತ'** ಎಂಬುದಾಗಿ ಸೃಜ್ ಧಾತುವಿನ ಲಿಂಗವಿರುವುದರಿಂದ ವಿಶೇಷಸಂಬಂಧವು ತಿಳಿಯುತ್ತದೆ. ಹೀಗಾಗಿ **ಸೃಷ್ಟೀರುಪದಧಾತಿ** ಎಂಬುದು ಮಂತ್ರ ವಿಧಾಯಕವಲ್ಲ. ಮಂತ್ರಗಳನ್ನು ಅನುವಾದ ಮಾಡಿ ಇಷ್ಟಕೆಗಳ ಉಪಧಾನವಿಧಿ. **ಯಥಾಸೃಷ್ಟಮೇವಾವರುಂಧೇ** ಎಂಬ ಅರ್ಥವಾದಕ್ಕೆ ಅನುಗುಣವಾಗಿ ಇಲ್ಲಿ **'ಸೃಷ್ಟೀಃ'**

ಎಂದು ಶ್ರುತಿಯು ಹೇಳುತ್ತದೆ. ಸೃಷ್ಟಿಶಬ್ದವು ಇಲ್ಲಿ ಇರದಿದ್ದರೆ ಮುಂದಿನ ಅರ್ಥವಾದಕ್ಕೂ ವಿಧಿಗೂ ಸಾಮಾನಾಧಿಕರಣ್ಯ ಬರದೇ ವ್ಯಧಿಕರಣಭ್ರಾಂತಿಯಾದೀತು. ಹೀಗಾಗಿ ಸೃಷ್ಟೀರುಪದಧಾತಿ ಎಂಬುದು ಮಂತ್ರವನ್ನು ಅನುವಾದ ಮಾಡುತ್ತಿರುವ ಅರ್ಥವಾದ.

*** ಪ್ರಥಮಮಂತ್ರದಲ್ಲಿನ 'ಅಧೀಯಂತೆ' ಎಂಬುದರ ವಿಚಾರ.**

ಈ ಅನುವಾಕದ ಪ್ರಥಮಮಂತ್ರದಲ್ಲಿಯೇ 'ಅಧೀಯಂತ' ಎಂಬ ಕ್ರಿಯಾಪದವಿದೆ. ಹೀಗಾಗಿ ಸೃಷ್ಟೀರುಪದಧಾತಿ ಎಂಬಲ್ಲಿ ಪ್ರಥಮಮಂತ್ರವನ್ನು ಗ್ರಹಿಸುವುದು ಹೇಗೆ? ಇದು ಇಲ್ಲಿನ ಸಂಶಯ.

ಶಬ್ದಗಳಿಗೆ ಶಕ್ತಿ, ಲಕ್ಷಣಾ, ಗೌಣೀ ಎಂಬ ಮೂರು ಬಗೆಯ ಅರ್ಥಬೋಧಕತ್ವವು ಇದೆ. '**ಅಸ್ಮಾತ್ ಪದಾತ್ ಅಯಮರ್ಥೋ ಬೋದ್ಧವ್ಯ ಇತಿ ಈಶ್ವರೇಚ್ಛಾ**' ಶಕ್ತಿಃ, ಶಕ್ಯಸಂಬಂಧೋ ಲಕ್ಷಣಾ, ಬಹುತ್ವಾದಿರೂಪೇಣ ಬೋಧಕತಾ ಗೌಣೀ-ಎಂದು ಅವುಗಳ ವಿವರಣೆ.

ಇಲ್ಲಿ ಮೂರನೆಯ ಬಗೆಯ ಅರ್ಥಬೋಧಕತ್ವವು ಇದೆ. ಈ ಅನುವಾಕದ ಹದಿನೇಳು ಮಂತ್ರಗಳಲ್ಲಿ ಮೂರರಲ್ಲಿ ಸೃಷ್ಟಿಸಂಬಂಧವು ಇಲ್ಲದಿದ್ದರೂ ಹದಿನಾಲ್ಕು ಮಂತ್ರಗಳಲ್ಲಿ ಸೃಷ್ಟಿಸಂಬಂಧವು ಇದೆ. ಅದರಿಂದ ಆ ಮೂರು ಮಂತ್ರಗಳೂ ಸೃಷ್ಟಿಪದಬೋಧ್ಯಗಳೇ ಆಗುತ್ತವೆ. ಆದುದರಿಂದ ಅವುಗಳಿಂದಲೂ ಉಪಧಾನವಿದೆ.

ಬಾಹುಲ್ಯಸಂಬಂಧದಿಂದ ಸೃಷ್ಟಿ-ಅಸೃಷ್ಟಿಸಮೂಹದಲ್ಲಿ ಸೃಷ್ಟಿಶಬ್ದಪ್ರಯೋಗವಿದೆ.

## ॥ ಏಕಾದಶೋಽನುವಾಕಃ ॥

ಇಯಮೇವ ಸಾ ಯಾ ಪ್ರಥಮಾ ವ್ಯೌಚ್ಛದಂತರಸ್ಯಾಂ

ಚರತಿ ಪ್ರವಿಷ್ಟಾ ।

---

ಇಯಮ್ । ಏವ । ಸಾ । ಯಾ । ಪ್ರಥಮಾ । ವ್ಯೌಚ್ಛದಿತಿ ವಿ-ಔಚ್ಛತ್ । ಅಂತಃ ।

ಅಸ್ಯಾಮ್ । ಚರತಿ । ಪ್ರವಿಷ್ಟೇತಿ ಪ್ರ-ವಿಷ್ಟಾ ॥

---

ದಶಮಾನುವಾಕದಲ್ಲಿ ಸೃಷ್ಟೀಷ್ಟಕೆಗಳ ಉಪಧಾನಮಂತ್ರಗಳು ಉಕ್ತವಾದವು. ಈ ಹನ್ನೊಂದನೆಯ ಅನುವಾಕದಲ್ಲಿ ವ್ಯುಷ್ಟೀಷ್ಟಕೆಗಳ ಉಪಧಾನಮಂತ್ರಗಳು ಉಕ್ತವಾಗಿವೆ. ವ್ಯುಷ್ಟೀಷ್ಟಕೆಗಳು ಹದಿನಾರು. ವ್ಯುಷ್ಟಿಯೆಂದರೆ ಕತ್ತಲೆಯನ್ನು ಹೋಗಲಾಡಿಸುವ ಉಷಃಕಾಲ. ಈ ಮಂತ್ರಗಳಲ್ಲಿ ಉಷಃಕಾಲಾಭಿಮಾನಿದೇವತೆಯನ್ನೇ ಸ್ತುತಿಸಲಾಗಿದೆ.

---

| ಮಂತ್ರ | ವಿನಿಯೋಗ |
|---|---|
| ಇಯಮೇವ...ಸಚಂತೇ ॥ | ಮೊದಲನೆಯ ವ್ಯುಷ್ಟೀಷ್ಟಕೋಪಧಾನಕ್ಕಾಗಿ. |

---

🔔 **ಯಾ**=ಯಾವ ವ್ಯುಷ್ಟಿರೂಪೇಷ್ಟಕೆಯು; **ಪ್ರಥಮಾ**=ಸೃಷ್ಟಿಯ ಆದಿಸಮಯದಲ್ಲಿ ಮೊದಲನೆಯ ಪ್ರಭಾತರೂಪವಾಗಿ; **ವ್ಯೌಚ್ಛತ್**=ವಿಶೇಷವಾಗಿ ಪ್ರಕಾಶರೂಪವಾಗಿ ಆಯಿತೋ; **ಇಯಮ್ ಏವ ಸಾ**=ಈ ವ್ಯುಷ್ಟೀಷ್ಟಕೆಯೇ ಅದು. [ಈ ಉಷಃಕಾಲ ದೇವತೆಯು] **ಪ್ರವಿಷ್ಟಾ**=ಸೂರ್ಯನಿಂದ ಅನುಗ್ರಹಿಸಲ್ಪಟ್ಟವಳಾಗಿ; **ಅಸ್ಯಾಮ್**=ಈ ಭೂಮಿಯಲ್ಲಿ; **ಅಂತಃ**=ಒಳಭಾಗದಲ್ಲಿ; **ಚರತಿ**=ಪ್ರವರ್ತಿಸುತ್ತಾಳೆ.

ವಧೂರ್ಜಜಾನ ನವಗಜ್ಜನಿತ್ರೀ ತ್ರಯ ಏನಾಂ

ಮಹಿಮಾನಃ ಸಚಂತೇ ॥ ಛಂದಸ್ವತೀ ಉಷಸಾ

ಪೇಪಿಶಾನೇ ಸಮಾನಂ ಯೋನಿಮನು ಸಂಚರಂತೀ ।

---

ವಧೂಃ । ಜಜಾನ । ನವಗದಿತಿ ನವ-ಗತ್ । ಜನಿತ್ರೀ । ತ್ರಯಃ । ಏನಾಮ್ ।

ಮಹಿಮಾನಃ । ಸಚಂತೇ ॥ ಛಂದಸ್ವತೀ ಇತಿ । ಉಷಸಾ । ಪೇಪಿಶಾನೇ ಇತಿ ।

ಸಮಾನಮ್ । ಯೋನಿಮ್ । ಅನ್ವಿತಿ । ಸಂಚರಂತೀ ಇತಿ ಸಮ್-ಚರಂತೀ ॥

---

| ಮಂತ್ರ | ವಿನಿಯೋಗ |
|---|---|
| ಛಂದಸ್ವತೀ...ಭೂರಿರೇತಸಾ ॥ | ಎರಡನೆಯ ವ್ಯುಷ್ಟೀಷ್ಟಕೋಪಧಾನಕ್ಕಾಗಿ. |

---

**ನವಗತ್**=[ಹೇಗೆ] ಹೊಸದಾಗಿ ವರನನ್ನು ಹೊಂದಿದ; **ವಧೂಃ**=ನೂತನವಧುವು; **ಜಜಾನ**=ಪ್ರಜೆಗಳನ್ನು ಉತ್ಪಾದಿಸುವಳೋ [ಹಾಗೆ] [ಈ ವ್ಯುಷ್ಟಿದೇವತೆಯೂ] **ಜನಿತ್ರೀ**=ಪ್ರತಿನಿತ್ಯವೂ ಉಷಃಕಾಲವನ್ನುಂಟುಮಾಡುತ್ತಾಳೆ; **ತ್ರಯಃ**=ಮೂವರು; **ಮಹಿಮಾನಃ**=ಮಹಿಮಯುಕ್ತರಾದ ಅಗ್ನಿ-ಸೂರ್ಯ-ಚಂದ್ರರೂಪದೇವತೆಗಳು; **ಏನಾಮ್**=ಈ ವ್ಯುಷ್ಟೀಷ್ಟಕೆಯನ್ನು/ವ್ಯುಷ್ಟಿಯನ್ನು; **ಸಚಂತೇ**=ಪ್ರಕಾಶಿಸುವಂತೆ ಮಾಡುತ್ತಾರೆ. [ಇಂತಹ ಇಷ್ಟಕೆಯನ್ನು ಉಪಧಾನ ಮಾಡುತ್ತೇನೆ]. 🔔 **ಛಂದಸ್ವತೀ**=ಮಂತ್ರಗಳಿಂದ ಸ್ತುತಿಸಲ್ಪಡುವ; **ಪೇಪಿಶಾನೇ**=ಪ್ರಕಾಶಮಾನವಾಗಿರುವ; **ಸಮಾನಮ್**=ಬೆಳಕನ್ನು ಕೊಡುವುದೆಂಬ ಸಮಾನವಾದ; **ಯೋನಿಮ್**=ಕಾರಣವನ್ನು; **ಅನು ಸಂಚರಂತೀ**=ಅನುಸರಿಸಿ ಪ್ರವೃತ್ತವಾಗಿರುವ;

---

ಈ ವ್ಯುಷ್ಟೀಷ್ಟಕೆಯು ಸೃಷ್ಟಿಯ ಮೊದಲ ದಿನ ಪ್ರಕಾಶಿಸಿ, ಭೂಮಿಯನ್ನೂ ಬೆಳಗಿಸಿದಳು. ಸೂರ್ಯನ ಅನುಗ್ರಹದಿಂದ ಈಕೆಯು ಪ್ರಕಾಶಮಾನಳಾದಳು. ನೂತನ ವಧುವು ಮತ್ತೆ ಮತ್ತೆ ಪ್ರಜೆಯನ್ನು ಉತ್ಪಾದಿಸುವಂತೆ ಈಕೆಯು ಹೊಸ ಹೊಸ ಉಷಃಕಾಲ

**ಸೂರ್ಯಪತ್ನೀ ವಿ ಚರತಃ ಪ್ರಜಾನತೀ ಕೇತುಂ ಕೃಣ್ವಾನೇ ಅಜರೇ ಭೂರಿರೇತಸಾ ॥ ಋತಸ್ಯ ಪಂಥಾಮನು ತಿಸ್ರ ಆऽಗುಸ್ತ್ರಯೋ ಘರ್ಮಾಸೋ ಅನು ಜ್ಯೋತಿಷಾऽಗುಃ ।**

---

ಸೂರ್ಯಪತ್ನೀ ಇತಿ ಸೂರ್ಯ-ಪತ್ನೀ । ವೀತಿ । ಚರತಃ । ಪ್ರಜಾನತೀ ಇತಿ ಪ್ರ-ಜಾನತೀ । ಕೇತುಮ್ । ಕೃಣ್ವಾನೇ ಇತಿ । ಅಜರೇ ಇತಿ । ಭೂರಿರೇತಸೇತಿ ಭೂರಿ-ರೇತಸಾ ॥ ಋತಸ್ಯ । ಪಂಥಾಮ್ । ಅನ್ವಿತಿ । ತಿಸ್ರಃ । ಐತಿ । ಅಗುಃ । ತ್ರಯಃ । ಘರ್ಮಾಸಃ । ಅನ್ವಿತಿ । ಜ್ಯೋತಿಷಾ । ಐತಿ । ಅಗುಃ ॥

---

| ಮಂತ್ರ | ವಿನಿಯೋಗ |
| --- | --- |
| ಋತಸ್ಯ...ದೇವಯೂನಾಮ್ ॥ | ಮೂರನೆಯ ವ್ಯುಷ್ಟೀಷ್ಟಕೋಪಧಾನಕ್ಕಾಗಿ. |

---

**ಸೂರ್ಯಪತ್ನೀ**=ಸೂರ್ಯದೇವನ ಪತ್ನಿಯರಾದ; **ಪ್ರಜಾನತೀ**=ತಾವು ದೇವತೆಗಳೆಂದು ತಿಳಿದಿರುವ; **ಕೇತುಮ್**=[ಬೆಳಕನ್ನು ಕೊಡುವುದರಿಂದ] ರೂಪಜ್ಞಾನವನ್ನು; **ಕೃಣ್ವಾನೇ**=ಉಂಟುಮಾಡುವ; **ಅಜರೇ**=ಮುಪ್ಪಿಲ್ಲದ/ಎಂದೆಂದೂ ಇರುವ; **ಭೂರಿರೇತಸಾ**=ಬಹುಲೋಕವ್ಯವಹಾರಗಳಿಗೆ ಕಾರಣವಾಗಿರುವ; **ಉಷಸಾ**=ಇಬ್ಬರು ಉಷಃಕಾಲದೇವತೆಯರು; **ವಿಚರತಃ**=ವಿಶೇಷವಾಗಿ ಸ್ವಕಾರ್ಯಗಳಲ್ಲಿ ಪ್ರವೃತ್ತವಾಗಿರುವರು. ▲ **ತಿಸ್ರಃ**=ಮೂರು ಉಷೋದೇವತೆಗಳು; **ಋತಸ್ಯ**=ಯಜ್ಞದ; **ಪಂಥಾಮ್ ಅನು**=ಮಾರ್ಗವನ್ನು ಅನುಸರಿಸಿ; **ಆ ಅಗುಃ**=ರಕ್ಷಕರಾಗಿ ವ್ಯವಸ್ಥಿತರಾಗಿ ಬಂದಿರುತ್ತಾರೆ; **ತ್ರಯಃ**=ಮೂವರು; **ಘರ್ಮಾಸಃ**=ದೀಪ್ತಿರೂಪರಾದ ಅಗ್ನಿ-ಸೂರ್ಯ-ಚಂದ್ರರು; **ಜ್ಯೋತಿಷಾ**=ಪ್ರಕಾಶವನ್ನು ಕೊಡುವುದರಿಂದ; **ಅನು ಆ ಅಗುಃ**=ಯಜ್ಞರಕ್ಷಕರಾಗಿ ಬಂದಿರುತ್ತಾರೆ;

---

ಗಳನ್ನು ಉಂಟುಮಾಡುತ್ತಾಳೆ. ಮಹಿಮಾನ್ವಿತರಾದ ಅಗ್ನಿ-ಸೂರ್ಯ-ಚಂದ್ರರು

ಪ್ರಜಾಮೇಕಾ ರಕ್ಷತ್ಯೂರ್ಜಮೇಕಾ [(೨೧)] ವ್ರತಮೇಕಾ ರಕ್ಷತಿ ದೇವಯೂನಾಮ್ ॥ ಚತುಷ್ಟೋಮೋ ಅಭವದ್ಯಾ ತುರೀಯಾ ಯಜ್ಞಸ್ಯ ಪಕ್ಷಾವೃಷಯೋ ಭವಂತೀ ।

---

ಪ್ರಜಾಮಿತಿ ಪ್ರ-ಜಾಮ್ । ಏಕಾ । ರಕ್ಷತಿ । ಊರ್ಜಮ್ । ಏಕಾ । (೨೧) । ವ್ರತಮ್ । ಏಕಾ । ರಕ್ಷತಿ । ದೇವಯೂನಾಮಿತಿ ದೇವ-ಯೂನಾಮ್ ॥ ಚತುಷ್ಟೋಮ ಇತಿ ಚತುಃ-ಸ್ತೋಮಃ । ಅಭವತ್ । ಯಾ । ತುರೀಯಾ । ಯಜ್ಞಸ್ಯ । ಪಕ್ಷೌ । ಋಷಯಃ । ಭವಂತೀ ॥

---

| ಮಂತ್ರ | ವಿನಿಯೋಗ |
|---|---|
| ಚತುಷ್ಟೋಮೋ...ಇದಮ್ ॥ | ನಾಲ್ಕನೆಯ ವ್ಯುಷ್ಟೀಷ್ಟಕೋಪಧಾನಕ್ಕಾಗಿ. |

---

ಏಕಾ=ಒಬ್ಬಳು ಉಷೋದೇವತೆಯು; **ಪ್ರಜಾಮ್**=ಯಜಮಾನನ ಪುತ್ರಾದಿಪ್ರಜೆಯನ್ನು; **ರಕ್ಷತಿ**=ರಕ್ಷಿಸುತ್ತಾಳೆ; **ಏಕಾ**=ಇನ್ನೊಬ್ಬಳು ಉಷೋದೇವತೆಯು; **ಊರ್ಜಮ್**=ಬಲವನ್ನು; ರಕ್ಷತಿ=ಕಾಪಾಡುತ್ತಾಳೆ; **ಏಕಾ**=ಇನ್ನೊಬ್ಬಳು ಉಷೋದೇವತೆಯು; **ದೇವಯೂನಾಮ್**=ದೇವತೆಗಳನ್ನು ಅಪೇಕ್ಷಿಸುವ ಯಜಮಾನರ; **ವ್ರತಮ್**=ಕರ್ಮಾನುಷ್ಠಾನವನ್ನು; **ರಕ್ಷತಿ**=ರಕ್ಷಿಸುತ್ತಾಳೆ. 🔔 **ಯಾ ತುರೀಯಾ**=ಯಾವಳು ನಾಲ್ಕನೆಯ ಉಷೋದೇವತೆಯೋ; ಸಾ=ಅವಳು; **ಚತುಷ್ಟೋಮಃ**=[ತ್ರಿವೃತ್, ಪಂಚದಶ, ಸಪ್ತದಶ, ಏಕವಿಂಶಸ್ತೋಮವುಳ್ಳ] ಅಗ್ನಿಷ್ಟೋಮವಾಗಿ; **ಅಭವತ್**=ಆದಳು; **ಯಜ್ಞಸ್ಯ**=ಯಜ್ಞದ; **ಪಕ್ಷೌ** =ಪೂರ್ವೋತ್ತರಾಂಗರೂಪವಾದ ರೆಕ್ಕೆಗಳನ್ನು; **ಭವಂತೀ**=ಉತ್ಪಾದಿಸುವವಳಾದಳು; **ಋಷಯಃ** ಭವಂತೀ=ಋತ್ವಿಜರನ್ನು ಉತ್ಪಾದಿಸುವವಳೂ ಆದಳು.

---

ಈಕೆಯನ್ನು ಪ್ರಕಾಶಗೊಳ್ಳುವಂತೆ ಮಾಡುತ್ತಾರೆ. ಇಂತಹ ಇಷ್ಟಕೆಯನ್ನು ಉಪಧಾನ ಮಾಡುತ್ತೇನೆ.

ಗಾಯತ್ರೀಂ ತ್ರಿಷ್ಟುಭಂ ಜಗತೀಮನುಷ್ಟುಭಂ ಬೃಹದರ್ಕಂ

ಯುಂಜಾನಾಃ ಸುವರಾಽಭರನ್ನಿದಮ್ ॥

---

ಗಾಯತ್ರೀಮ್ । ತ್ರಿಷ್ಟುಭಮ್ । ಜಗತೀಮ್ । ಅನುಷ್ಟುಭಮಿತ್ಯನು-ಸ್ತುಭಮ್ ।

ಬೃಹತ್ । ಅರ್ಕಮ್ । ಯುಂಜಾನಾಃ । ಸುವಃ । ಏತಿ । ಅಭರನ್ । ಇದಮ್ ॥

---

ಬೃಹತ್ ಅರ್ಕಮ್=ಪ್ರೌಢವಾದ ಸ್ತೋತ್ರಗಳನ್ನೂ; ಯುಂಜಾನಾಃ= ಹೊಂದಿಸಿ ಕೊಡುವವರಾದ; ಗಾಯತ್ರೀಮ್=ಗಾಯತ್ರೀಛಂದೋದೇವತೆಯನ್ನೂ; ತ್ರಿಷ್ಟುಭಮ್ =ತ್ರಿಷ್ಟುಪ್‌ಛಂದೋದೇವತೆಯನ್ನೂ; ಜಗತೀಮ್=ಜಗತೀಛಂದೋದೇವತೆಯನ್ನೂ; ಅನುಷ್ಟುಭಮ್=ಅನುಷ್ಟುಪ್‌ಛಂದೋದೇವತೆಯನ್ನೂ; ಸುವಃ=ಯಜ್ಞದ ಫಲವಾದ ಸ್ವರ್ಗವನ್ನೂ; ಇದಮ್=ಈ ಕರ್ಮವನ್ನೂ; ಆ ಅಭರನ್=ಎಲ್ಲೆಡೆಯಿಂದಲೂ ಸಂಪಾದಿಸಿಕೊಡುವವಳಾಗಿರುತ್ತಾಳೆ.

---

ಉಷಃಕಾಲವನ್ನು ಸೂರ್ಯನ ಪತ್ನಿಯಂತೆ ವೇದದಲ್ಲಿ ಸ್ತುತಿಸಲಾಗಿದೆ. ಉಷಃ ಕಾಲವು ಬೆಳಕನ್ನು ಕೊಡುವುದರಿಂದ ಪ್ರಾಣಿಗಳು ರೂಪಜ್ಞಾನವನ್ನು ಪಡೆದು ತಮ್ಮ ತಮ್ಮ ವಿವಿಧ ಕಾರ್ಯಗಳಲ್ಲಿ ಪ್ರವೃತ್ತವಾಗುತ್ತವೆ. ಮಹಾಪ್ರಳಯಾನಂತರದ ಮೊದಲನೆಯ ಉಷಃಕಾಲವು ಮೊದಲನೆಯದು. ಪ್ರತಿನಿತ್ಯದ ಉಷಃಕಾಲವು ಎರಡನೆಯದು. ಈ ಎರಡರ ದೇವತೆಗಳು ಇಬ್ಬರು ಉಷೋದೇವತೆಗಳು. ಇಂತಹ ಉಷಃಕಾಲದ ದೇವತೆಗಳು ಅವಿಚ್ಛಿನ್ನವಾಗಿ ತಮ್ಮ ಕಾರ್ಯವನ್ನು ಮಾಡುತ್ತವೆ.

ಮೂವರು ಉಷೋದೇವತೆಗಳು ಯಜ್ಞಮಾರ್ಗವನ್ನು ರಕ್ಷಿಸುತ್ತಾರೆ. ಅಗ್ನಿ-ಸೂರ್ಯ-ಚಂದ್ರರು ಬೇಕಾದ ಪ್ರಕಾಶವನ್ನು ನೀಡಿ ರಕ್ಷಿಸುತ್ತಾರೆ. ಒಬ್ಬ ಉಷೋ ದೇವತೆಯು ಯಜಮಾನನ ಪ್ರಜೆಯನ್ನೂ, ಮತ್ತೊಬ್ಬಳು ಬಲವನ್ನೂ, ಇನ್ನೊಬ್ಬಳು ಯಜಮಾನನ ಕರ್ಮಾನುಷ್ಠಾನವನ್ನೂ ಕಾಪಾಡುತ್ತಾರೆ.

ನಾಲ್ಕನೆಯ ಉಷೋದೇವತೆಯು ಸೋಮಯಾಗಸಾಧಕಳು. ಅವಳು ತ್ರಿವೃತ್ ಮುಂತಾದ ಸ್ತೋಮಗಳಿಂದ ಅಗ್ನಿಷ್ಟೋಮರೂಪಳಾದಳು. ಯಜ್ಞದ ಪೂರ್ವೋತ್ತ ರಾಂಗವನ್ನೂ, ಋತ್ವಿಜರನ್ನೂ, ಪ್ರೌಢಸ್ತೋತ್ರಗಳನ್ನು ಹೊಂದಿಸುವ ಗಾಯತ್ರೀ ಮುಂತಾದ ಛಂದೋದೇವತೆಗಳನ್ನೂ, ಈ ಯಜ್ಞವನ್ನೂ, ಯಜ್ಞಫಲವಾದ ಸ್ವರ್ಗವನ್ನೂ ಸಂಪಾ ದಿಸಿಕೊಡುವವಳಾಗಿದ್ದಾಳೆ. ಈ ಮಂತ್ರದಲ್ಲಿ ವಿಭಕ್ತಿ, ವಚನವ್ಯತ್ಯಯವು ಇದೆ.

ಪಂಚಭಿರ್ಧಾತಾ ವಿ ದಧಾವಿದಂ ಯತ್ತಾಸಾಗ್‍ಂ ಸ್ವಸ್ರೃ

ರಜನಯತ್ಪಂಚಪಂಚ । ತಾಸಾಮು ಯಂತಿ ಪ್ರಯವೇಣ

ಪಂಚ ನಾನಾ ರೂಪಾಣಿ ಕ್ರತವೋ ವಸಾನಾಃ ॥

---

ಪಂಚಭಿರಿತಿ ಪಂಚ-ಭಿಃ । ಧಾತಾ । ವೀತಿ । ದಧೌ । ಇದಮ್ । ಯತ್ । ತಾಸಾಮ್ । ಸ್ವಸ್ರೃಃ । ಅಜನಯತ್ । ಪಂಚಪಂಚೇತಿ ಪಂಚ-ಪಂಚ ॥ ತಾಸಾಮ್ । ಉ । ಯಂತಿ । ಪ್ರಯವೇಣೇತಿ ಪ್ರ-ಯವೇನ । ಪಂಚ । ನಾನಾ । ರೂಪಾಣಿ । ಕ್ರತವಃ । ವಸಾನಾಃ ॥

---

| ಮಂತ್ರ | ವಿನಿಯೋಗ |
|---|---|
| ಪಂಚಭಿಃ...ವಸಾನಾಃ ॥ | ಐದನೆಯ ವ್ಯುಷ್ಟೀಷ್ಟಕೋಪಧಾನಕ್ಕಾಗಿ. |

---

▲ ಯತ್ ಇದಮ್ [ಜಗತ್]=ಯಾವ ಈ ವಿಶ್ವವು ಇದೆಯೋ; [ಇದನ್ನು] **ಧಾತಾ**= ಜಗತ್ಸೃಷ್ಟಿಕರ್ತನು; **ಪಂಚಭಿಃ**=ಐದು ಉಷೋದೇವತೆಯರಿಂದ; **ವಿ ದಧೌ**= ನಿರ್ಮಿಸಿದನು; **ತಾಸಾಮ್**=ಆ ಐದು ಉಷೆಯರಿಗೆ; **ಪಂಚಪಂಚ**=ಐದು ಐದು; **ಸ್ವಸ್ರೃಃ**=ತಂಗಿಯರನ್ನು; **ಅಜನಯತ್**=ಉತ್ಪಾದಿಸಿದನು; **ತಾಸಾಮ್ ಉ**=ಆ ಮುಖ್ಯರಾದ ಐದು ಉಷೋದೇವತೆಯರ; **ಪ್ರಯವೇಣ**=ಶ್ರೇಷ್ಠಮಿಶ್ರಣದಿಂದ; **ಕ್ರತವಃ**=ಯಾಗನಿಷ್ಪಾದಿಕೆಯರಾದ; **ನಾನಾ ರೂಪಾಣಿ**=ಬಹುರೂಪವಾದ ಯಜ್ಞಾಂಗಗಳನ್ನು; **ವಸಾನಾಃ**=ಧರಿಸುವವರಾಗಿ; **ಪಂಚ**=ಐದು ಪ್ರಧಾನ ಉಷೋದೇವತೆಯರು; **ಯಂತಿ**=ಪ್ರವರ್ತಿಸುತ್ತಾರೆ.

---

ಬ್ರಹ್ಮನು ಮುಖ್ಯರಾದ ಐದು ಉಷೋದೇವತೆಯರನ್ನೂ, ಒಬ್ಬೊಬ್ಬರಿಗೆ ಐದೈದು ಜನ ತಂಗಿಯರನ್ನೂ ಸೃಷ್ಟಿಸಿದನು. ಒಬ್ಬಳು ಅಗ್ನಿಹೋತ್ರನಿಷ್ಪಾದಕಳು. ದರ್ಶ-ಪೌರ್ಣಮಾಸಗಳ ನಿಷ್ಪಾದಕರು ಇಬ್ಬರು. ಸೋಮಯಾಗದ ಸುತ್ಯಾಪೂರ್ವದಿನದ ಕೃತ್ಯಗಳ ನಿಷ್ಪಾದಿಕೆಯು ಇನ್ನೊಬ್ಬಳು. ಸುತ್ಯಾದಿನದ ಕೃತ್ಯನಿಷ್ಪಾದಿಕೆಯು ಒಬ್ಬಳು.

ತ್ರಿಗ್ಂಶತ್ಸ್ವಸಾರ ಉಪಯಂತಿ ನಿಷ್ಕೃತಗ್ಂ ಸಮಾನಂ ಕೇತುಂ ಪ್ರತಿಮುಂಚಮಾನಾಃ । [(೨೨)] ಋತೂಗ್ಂ ಸ್ತನ್ವತೇ ಕವಯಃ ಪ್ರಜಾನತೀರ್ಮಧ್ಯೇಛಂದಸಃ ಪರಿ ಯಂತಿ ಭಾಸ್ವತೀಃ ॥

---

ತ್ರಿಗ್ಂಶತ್ । ಸ್ವಸಾರಃ । ಉಪೇತಿ । ಯಂತಿ । ನಿಷ್ಕೃತಮಿತಿ ನಿಃ-ಕೃತಮ್ । ಸಮಾನಮ್ । ಕೇತುಮ್ । ಪ್ರತಿಮುಂಚಮಾನಾ ಇತಿ ಪ್ರತಿ-ಮುಂಚಮಾನಾಃ ॥ (೨೨) । ಋತೂನ್ । ತನ್ವತೇ । ಕವಯಃ । ಪ್ರಜಾನತೀರಿತಿ ಪ್ರ-ಜಾನತೀಃ । ಮಧ್ಯೇಛಂದಸ ಇತಿ ಮಧ್ಯೇ-ಛಂದಸಃ । ಪರೀತಿ । ಯಂತಿ । ಭಾಸ್ವತೀಃ ॥

---

| ಮಂತ್ರ | ವಿನಿಯೋಗ |
|---|---|
| ತ್ರಿಗ್ಂಶತ್...ಭಾಸ್ವತೀಃ ॥ | ಆರನೆಯ ವ್ಯುಷ್ಟೀಷ್ಟಕೋಪಧಾನಕ್ಕಾಗಿ. |

---

▲ ಸಮಾನಮ್ ಕೇತುಮ್=ಸಮಾನವಾಗಿರುವ ಚಿಹ್ನವನ್ನು; ಪ್ರತಿಮುಂಚಮಾನಾಃ =ಹೊಂದಿರುವ; ತ್ರಿಂಶತ್ ಸ್ವಸಾರಃ=ಮೂವತ್ತು ಜನ ಅಕ್ಕ ತಂಗಿಯರಾದ ಉಷೋ ದೇವತೆಯರು; ನಿಷ್ಕೃತಮ್=ಯಾವಾಗಲೂ ಮಾಡಬೇಕಾದ ಅಗ್ನಿಹೋತ್ರಾದಿಕರ್ಮ ಗಳನ್ನು; ಉಪ ಯಂತಿ=ಹೊಂದುತ್ತಾರೆ; ಕವಯಃ=[ಆ ಉಷೆಯರು] ವಿದ್ವಾಂಸ ರಂತೆ; ಪ್ರಜಾನತೀಃ=ಮಾಡಬೇಕಾದ ಕೃತ್ಯಗಳನ್ನು ತಿಳಿದವರಾಗಿ; ಋತೂನ್ =ವಸಂತಾದಿ ಋತುಗಳನ್ನು; ತನ್ವತೇ=ಉಂಟುಮಾಡುತ್ತಾರೆ; ಭಾಸ್ವತೀಃ=ಪ್ರಕಾಶ ವತಿಯರಾಗಿ; ಮಧ್ಯೇಛಂದಸಃ=ಛಂದಸ್ಸುಗಳ ಮಧ್ಯದಲ್ಲಿಯೇ ಸಂಚರಿಸುವ ಸೂರ್ಯದೇವನ; ಪರಿ ಯಂತಿ=ಸುತ್ತಲೂ ಸಂಚರಿಸುತ್ತಾರೆ.

**ಜ್ಯೋತಿಷ್ಮತೀ ಪ್ರತಿ ಮುಂಚತೇ ನಭೋ ರಾತ್ರೀ ದೇವೀ ಸೂರ್ಯಸ್ಯ ವ್ರತಾನಿ । ವಿ ಪಶ್ಯಂತಿ ಪಶವೋ ಜಾಯಮಾನಾ ನಾನಾರೂಪಾ ಮಾತುರಸ್ಯಾ ಉಪಸ್ಥೇ ॥**

---

ಜ್ಯೋತಿಷ್ಮತೀ । ಪ್ರತೀತಿ । ಮುಂಚತೇ । ನಭಃ । ರಾತ್ರೀ । ದೇವೀ । ಸೂರ್ಯಸ್ಯ । ವ್ರತಾನಿ ॥ ವೀತಿ । ಪಶ್ಯಂತಿ । ಪಶವಃ । ಜಾಯಮಾನಾಃ । ನಾನಾರೂಪಾ ಇತಿ ನಾನಾ-ರೂಪಾಃ । ಮಾತುಃ । ಅಸ್ಯಾಃ । ಉಪಸ್ಥ ಇತ್ಯುಪ-ಸ್ಥೇ ॥

---

| ಮಂತ್ರ | ವಿನಿಯೋಗ |
|---|---|
| ಜ್ಯೋತಿಷ್ಮತೀ...ಉಪಸ್ಥೇ ॥ | ಏಳನೆಯ ವ್ಯುಷ್ಟೀಷ್ಟಕೋಪಧಾನಕ್ಕಾಗಿ. |

---

▲ **ಜ್ಯೋತಿಷ್ಮತೀ**=ನಕ್ಷತ್ರಪ್ರಕಾಶಯುಕ್ತವಾದ ಈ ಉಷೆಯು; **ರಾತ್ರೀ**=[ಸೂರ್ಯೋದಯಕ್ಕೆ ಮೊದಲು ಇರುವುದರಿಂದ] ರಾತ್ರಿರೂಪಳಾಗಿ; **ದೇವೀ**=ಪ್ರಕಾಶಮಾನಳಾಗಿ; **ನಭಃ**=ಆಕಾಶದಲ್ಲಿರುವ; **ಸೂರ್ಯಸ್ಯ**=ಸೂರ್ಯದೇವನ; **ವ್ರತಾನಿ**=ವ್ರತದಂತೆ ನಿಯತವಾಗಿರುವ [ಕಿರಣಸಮೂಹವನ್ನು]; **ಪ್ರತಿ ಮುಂಚತೇ**=ಧರಿಸುತ್ತಾಳೆ; **ನಾನಾರೂಪಾಃ**=ಗವಾಶ್ವಾದಿ ಅನೇಕ ರೂಪಗಳುಳ್ಳ; **ಪಶವಃ**=ಪ್ರಾಣಿಗಳು; **ಜಾಯಮಾನಾಃ**=ಹೊಸ ಹುಟ್ಟಿನಂತೆ ಇರುವ ನಿದ್ರೆಯಿಂದ ಎಚ್ಚರವನ್ನು ಹೊಂದಿದವುಗಳಾಗಿ; **ಅಸ್ಯಾಃ**=ಈ; **ಮಾತುಃ**=ತಾಯಿಯಂತಿರುವ ಭೂಮಿಯ; **ಉಪಸ್ಥೇ**=ಮೇಲಿನ ಭಾಗದಲ್ಲಿ; **ವಿ ಪಶ್ಯಂತಿ**=ಅರಣ್ಯಗಮನಾದಿಯಾದ ನಾನಾ ಬಗೆಯ ವ್ಯವಹಾರಗಳನ್ನು ತಿಳಿಯುತ್ತವೆ.

---

ಹೀಗೆ ಐವರು ಮುಖ್ಯರು. ಈ ಯಾಗಗಳ ಅಂಗೋಪಾಂಗನಿಷ್ಪಾದಿಕೆಯರು ಇಪ್ಪತ್ತೈದು ಉಷೋದೇವತೆಯರು ತಂಗಿಯರಂತೆ ಇದ್ದಾರೆ. ಹೀಗೆ ಮೂವತ್ತು ಉಷೋದೇವತೆಯರು ಬ್ರಹ್ಮನಿಂದ ಉತ್ಪಾದಿಸಲ್ಪಟ್ಟಿದ್ದಾರೆ.

ಏಕಾಷ್ಟಕಾ ತಪಸಾ ತಪ್ಯಮಾನಾ ಜಜಾನ ಗರ್ಭಂ ಮಹಿಮಾನಮಿಂದ್ರಮ್ । ತೇನ ದಸ್ಯೂನ್ವ್ಯಸಹಂತ ದೇವಾ ಹಂತಾಽಸುರಾಣಾಮಭವಚ್ಛಚೀಭಿಃ ॥

---

ಏಕಾಷ್ಟಕೇತ್ಯೇಕ-ಅಷ್ಟಕಾ । ತಪಸಾ । ತಪ್ಯಮಾನಾ । ಜಜಾನ । ಗರ್ಭಮ್ । ಮಹಿಮಾನಮ್ । ಇಂದ್ರಮ್ ॥ ತೇನ । ದಸ್ಯೂನ್ । ವೀತಿ । ಅಸಹಂತ । ದೇವಾಃ । ಹಂತಾ । ಅಸುರಾಣಾಮ್ । ಅಭವತ್ । ಶಚೀಭಿರಿತಿ ಶಚಿ-ಭಿಃ ॥

---

| ಮಂತ್ರ | ವಿನಿಯೋಗ |
| --- | --- |
| ಏಕಾಷ್ಟಕಾ...ಶಚೀಭಿಃ ॥ | ಎಂಟನೆಯ ವ್ಯುಷ್ಟೀಷ್ಟಕೋಪಧಾನಕ್ಕಾಗಿ. |

---

▲ **ಏಕಾಷ್ಟಕಾ**=[ಮಾಘಮಾಸದ ಕೃಷ್ಣಪಕ್ಷದ ಅಷ್ಟಮಿಯ ದೇವತೆಯಾದ] ಏಕಾಷ್ಟಕೆಯು; **ತಪಸಾ ತಪ್ಯಮಾನಾ**=ತಪಸ್ಸನ್ನು ಮಾಡಿದವಳಾಗಿ; **ಮಹಿಮಾನಮ್**=ಮಹಿಮವಂತನಾದ; **ಗರ್ಭಮ್**=ತನ್ನ ಗರ್ಭರೂಪನಾದ; **ಇಂದ್ರಮ್**=ಇಂದ್ರನನ್ನು; **ಜಜಾನ**=ಉತ್ಪಾದಿಸಿದಳು; **ದೇವಾಃ**=ದೇವತೆಗಳು; **ತೇನ**=ಆ ಇಂದ್ರನಿಂದ; **ದಸ್ಯೂನ್**=ತಸ್ಕರರಂತೆ ಇರುವ ರಾಕ್ಷಸರನ್ನು; **ವ್ಯಸಹಂತ**=ವಿಶೇಷವಾಗಿ ಸೋಲಿಸಿದರು; [ಆ ಇಂದ್ರನು] **ಶಚೀಭಿಃ**=ತನ್ನ ಶಕ್ತಿಗಳಿಂದ; **ಅಸುರಾಣಾಮ್**=ರಾಕ್ಷಸರ; **ಹಂತಾ ಅಭವತ್**=ಹಂತಕನಾದನು.

---

ಮೂವತ್ತು ಉಷೋದೇವತೆಯರು ಸಮಾನವಾದ ಚಿಹ್ನೆಯಿಂದ ಕೂಡಿದವರಾಗಿ ಅಗ್ನಿಹೋತ್ರಾದಿಕರ್ಮಗಳ ನಿಷ್ಪಾದಿಕೆಯರು. ಇವರು ಋತುಗಳನ್ನು ಉಂಟುಮಾಡುವವರು. ಈ ಉಷೋದೇವತೆಯರು ಸೂರ್ಯನನ್ನು ಅನುಸರಿಸುತ್ತಾರೆ. ಸೂರ್ಯದೇವನು ಪ್ರಾತಃಕಾಲದಲ್ಲಿ ಋಗ್ವೇದದ ಮಧ್ಯದಲ್ಲಿಯೂ, ಮಧ್ಯಾಹ್ನದಲ್ಲಿ ಯಜುರ್ವೇದದ ಮಧ್ಯದಲ್ಲಿಯೂ, ಅಸ್ತಮಾನ ಸಮಯದಲ್ಲಿ ಸಾಮವೇದದ ಮಧ್ಯದಲ್ಲಿಯೂ

ಅನಾನುಜಾಮನುಜಾಂ ಮಾಮಕರ್ತ ಸತ್ಯಂ ವದಂತ್ಯನ್ವಿಚ್ಛ

ಏತತ್ । ಭೂಯಾಸಮ[ ಭೂಯಾಸಮ್ ( ೨೩ )ಅಸ್ಯ

ಸುಮತೌ ]ಸ್ಯ ಸುಮತೌ ಯಥಾ ಯೂಯಮನ್ಯಾ ವೋ

ಅನ್ಯಾಮತಿ ಮಾ ಪ್ರ ಯುಕ್ತ ॥

---

ಅನಾನುಜಾಮಿತ್ಯನಾನು-ಜಾಮ್ । ಅನುಜಾಮಿತ್ಯನು-ಜಾಮ್ । ಮಾಮ್ । ಅಕರ್ತ । ಸತ್ಯಮ್ । ವದಂತೀ । ಅನ್ವಿತಿ । ಇಚ್ಛೇ । ಏತತ್ ॥ ಭೂಯಾಸಮ್ । (೨೩) । ಅಸ್ಯ । ಸುಮತಾವಿತಿ ಸು-ಮತೌ । ಯಥಾ । ಯೂಯಮ್ । ಅನ್ಯಾ । ವಃ । ಅನ್ಯಾಮ್ । ಅತೀತಿ । ಮಾ । ಪ್ರೇತಿ । ಯುಕ್ತ ॥

---

| ಮಂತ್ರ | ವಿನಿಯೋಗ |
|---|---|
| ಅನಾನುಜಾಮ್...ಪ್ರ ಯುಕ್ತ ॥ | ಒಂಬತ್ತನೆಯ ವ್ಯುಷ್ಟೀಷ್ಟಕೋಪಧಾನಕ್ಕಾಗಿ. |

---

▲ [ಹೇ! ಏಕಾಷ್ಟಕಾದೇವತೆಯರೇ!] **ಸತ್ಯಮ್ ವದಂತೀ**=ಸತ್ಯವಾದ ಧರ್ಮವನ್ನು ಬೋಧಿಸುವ ನೀವು; **ಅನಾನುಜಾಮ್**=ಅನುಷ್ಠಾನರಹಿತನಾದ; **ಮಾಮ್**=ನನ್ನನ್ನು; **ಅನುಜಾಮ್**=ಸನ್ಮಾರ್ಗಾವಲಂಬಿಯನ್ನಾಗಿ; **ಅಕರ್ತ**=ಮಾಡಿರುವಿರಿ; **ಅಸ್ಯ**=ಈ ನಿಮ್ಮ ಪುತ್ರನಾದ ಇಂದ್ರನ; **ಸುಮತೌ**=ಮಂಗಲಕರವಾದ ಬುದ್ಧಿಯಲ್ಲಿ; **ಯಥಾ ಯೂಯಮ್**=ಹೇಗೆ ನೀವು ಇರುವಿರೋ [ಹಾಗೆ]; **ಭೂಯಾಸಮ್**=ಇರುವೆನು. [ಇರುವಂತೆ ಆಗಲಿ]; **ವಃ**=ನಿಮ್ಮಲ್ಲಿ; **ಅನ್ಯಾ**=ಒಬ್ಬಳು; **ಅನ್ಯಾಮ್**=ಬೇರೊಬ್ಬಳನ್ನು; **ಅತಿ ಮಾ ಪ್ರಯುಕ್ತ**=ಅತಿಕ್ರಮಿಸಿ ನಡೆಯದಿರುವಂತೆ [ನಾನೂ ಮತ್ತು ಋತ್ವಿಜರೂ ಅನ್ಯೋನ್ಯವಾಗಿರುವಂತೆ]; **ಏತತ್ ಅನ್ವಿಚ್ಛೇ**=ಇದನ್ನು [ನಿಮ್ಮನ್ನು ಕುರಿತು] ಕೇಳಿಕೊಳ್ಳುತ್ತೇನೆ.

## ಅಭೂನ್ಮಮ ಸುಮತೌ ವಿಶ್ವವೇದಾ ಆಷ್ಟ ಪ್ರತಿಷ್ಠಾ-ಮವಿದದ್ಧಿ ಗಾಧಮ್ । ಭೂಯಾಸಮಸ್ಯ ಸುಮತೌ ಯಥಾ ಯೂಯಮನ್ಯಾ ವೋ ಅನ್ಯಾಮತಿ ಮಾ ಪ್ರ ಯುಕ್ತ ॥

---

ಅಭೂತ್ । ಮಮ । ಸುಮತಾವಿತಿ-ಸು-ಮತೌ । ವಿಶ್ವವೇದಾ ಇತಿ ವಿಶ್ವ-ವೇದಾಃ । ಆಷ್ಟ । ಪ್ರತಿಷ್ಠಾಮಿತಿ ಪ್ರತಿ-ಸ್ಥಾಮ್ । ಅವಿದತ್ । ಹಿ । ಗಾಧಮ್ ॥ ಭೂಯಾಸಮ್ । ಅಸ್ಯ । ಸುಮತಾವಿತಿ ಸು-ಮತೌ । ಯಥಾ । ಯೂಯಮ್ । ಅನ್ಯಾ । ವಃ । ಅನ್ಯಾಮ್ । ಅತೀತಿ । ಮಾ । ಪ್ರೇತಿ । ಯುಕ್ತ ॥

---

| ಮಂತ್ರ | ವಿನಿಯೋಗ |
|---|---|
| ಅಭೂನ್ಮಮ...ಪ್ರ ಯುಕ್ತ ॥ | ಹತ್ತನೆಯ ವ್ಯುಷ್ಟೀಷ್ಟಕೋಪಧಾನಕ್ಕಾಗಿ. |

---

▲ **ಮಮ**=ಯಜಮಾನನಾದ ನನ್ನ; **ಸುಮತೌ**=ಭಕ್ತಿಯುಕ್ತವಾದ ಬುದ್ಧಿಯಲ್ಲಿ; **ವಿಶ್ವವೇದಾಃ**=ಸಮಸ್ತ ಜಗತ್ತನ್ನೂ ತಿಳಿದಿರುವ ಈ ಉಷಾದೇವಿಯು; **ಅಭೂತ್**=ಇದ್ದಳು; **ಹಿ**=ಏತಕ್ಕೆಂದರೆ; [ಈ ಉಷೆಯು]; **ಗಾಧಮ್**=ಪ್ರತಿಷ್ಠಾನಿಮಿತ್ತಭೂತನಾದ ಯಜಮಾನನನ್ನು; **ಅವಿದತ್**=ತಿಳಿದಳೋ [ಆದುದರಿಂದ]; **ಪ್ರತಿಷ್ಠಾಮ್**=ಸ್ಥೈರ್ಯವನ್ನು; **ಆಷ್ಟ**=ಹೊಂದಿದಳು; **ಅಸ್ಯ**=ಈ ನಿಮ್ಮ ಪುತ್ರನಾದ ಇಂದ್ರನ; **ಸುಮತೌ**=ಮಂಗಲಕರವಾದ ಬುದ್ಧಿಯಲ್ಲಿ; **ಯಥಾ ಯೂಯಮ್**=ಹೇಗೆ ನೀವು ಇರುವಿರೋ [ಹಾಗೆ]; **ಭೂಯಾಸಮ್**=ಇರುವೆನು/ಇರುವಂತಾಗಲಿ; **ವಃ**=ನಿಮ್ಮಲ್ಲಿ **ಅನ್ಯಾ**=ಒಬ್ಬಳು; **ಅನ್ಯಾಮ್**=ಬೇರೊಬ್ಬಳನ್ನು; **ಅತಿ ಮಾ ಪ್ರಯುಕ್ತ**=ಅತಿಕ್ರಮಿಸಿ ನಡೆಯದಿರುವಂತೆ; [ನಾನೂ ಮತ್ತು ಋತ್ವಿಜರು ಅನ್ಯೋನ್ಯವಾಗಿರುವಂತೆ] [ಇದನ್ನು ಪ್ರಾರ್ಥಿಸುವೆನು]

---

ಇರುವನೆಂದು **'ವೇದ್ಯೈರಶೂನ್ಯಸ್ತ್ರಿಭಿರೇತಿ ಸೂರ್ಯಃ'** ಎಂದು **ಶ್ರುತಿಯು ಹೇಳುತ್ತದೆ.**

ಪಂಚ ವ್ಯುಷ್ಟೀರನು ಪಂಚ ದೋಹಾ ಗಾಂ ಪಂಚನಾಮ್ನೀ ಮೃತವೋಽನು ಪಂಚ। ಪಂಚ ದಿಶಃ ಪಂಚದಶೇನ ಕ್ಲೃಪ್ತಾಃ

---

ಪಂಚ । ವ್ಯುಷ್ಟೀರಿತಿ ವಿ-ಉಷ್ಟೀಃ । ಅನ್ವಿತಿ । ಪಂಚ । ದೋಹಾಃ । ಗಾಮ್ । ಪಂಚನಾಮ್ನೀಮಿತಿ ಪಂಚ-ನಾಮ್ನೀಮ್ । ಋತವಃ । ಅನ್ವಿತಿ । ಪಂಚ ॥ ಪಂಚ । ದಿಶಃ । ಪಂಚದಶೇನೇತಿ ಪಂಚ-ದಶೇನ । ಕ್ಲೃಪ್ತಾಃ ।

---

| ಮಂತ್ರ | ವಿನಿಯೋಗ |
|---|---|
| ಪಂಚ ವ್ಯುಷ್ಟೀಃ...ಏಕಮ್ ॥ | ಹನ್ನೊಂದನೆಯ ವ್ಯುಷ್ಟೀಷ್ಟಕೋಪಧಾನಕ್ಕಾಗಿ. |

---

▲ **ಪಂಚ ವ್ಯುಷ್ಟೀಃ**=[ಅಗ್ನಿಹೋತ್ರ, ದರ್ಶ-ಪೂರ್ಣಮಾಸ, ಔಪವಸಥ್ಯ-ಸುತ್ಯಾ ಎಂಬ] ಐದು ಮುಖ್ಯವಾದ ಉಷೆಗಳನ್ನು; **ಅನು**=ಅನುಸರಿಸಿ; **ಪಂಚ ದೋಹಾಃ**= [ತಮಿಸ್ರಾ, ಜ್ಯೋತ್ಸ್ನಾ, ಎರಡು ಸಂಧ್ಯೆಗಳು, ಅಹಸ್ಸು ಎಂಬ] ಐದು ಪ್ರಜಾಪತಿಯ ದೋಹಗಳು; **ಕ್ಲೃಪ್ತಾಃ**=ಉತ್ಪಾದಿಸಲ್ಪಟ್ಟಿವೆ; **ಪಂಚನಾಮ್ನೀಮ್**=[ಪುಷ್ಪವತೀ, ತಾಪವತೀ, ವೃಷ್ಟಿಮತೀ, ಜಲಪ್ರಸಾದವತೀ, ಶೈತ್ಯವತೀ] ಎಂಬ ಐದು ಹೆಸರುಳ್ಳ; **ಗಾಮ್**=ಭೂಮಿಯನ್ನು; ಅನು=[ಐದು ಉಷೆಗಳನ್ನು] ಅನುಸರಿಸಿ [ಉತ್ಪನ್ನವಾದು ದೆಂದು ತಿಳಿಯಬೇಕು]; **ಅನು**=[ಉಷೆಗಳನ್ನು] ಅನುಸರಿಸಿ; **ಪಂಚ ಋತವಃ**= [ಹೇಮಂತ-ಶಿಶಿರಗಳನ್ನು ಒಗ್ಗೂಡಿಸಿ ಒಂದು ಋತುವೆಂದು ಪರಿಗಣಿಸಿ] ವಸಂತಾದಿ ಐದು ಋತುಗಳು; ಕ್ಲೃಪ್ತಾಃ=ಉತ್ಪನ್ನವಾಗಿವೆ; **ಪಂಚ ದಿಶಃ**=[ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ ಹಾಗೂ ಊರ್ಧ್ವ] ಎಂಬ ಐದು ದಿಕ್ಕುಗಳು; ಅನು=[ಉಷೆಗಳನ್ನು] ಅನುಸರಿಸಿ; ಕ್ಲೃಪ್ತಾಃ=ಉತ್ಪನ್ನವಾಗಿವೆ; **ಪಂಚದಶೇನ**=ಪಂಚದಶಸ್ತೋಮದಿಂದ; ಕ್ಲೃಪ್ತಾಃ=ಉಂಟಾದ ಪಾಂಚವಿಭಕ್ತಿಕವಾದ ಸಾಮಯುಕ್ತವಾದ ಸ್ತೋಮಗಳು; ಅನು=ಉಷೆಗಳನ್ನು ಅನುಸರಿಸಿವೆ.

---

**ಅವನು ವೇದಗಳ ಮಧ್ಯದಲ್ಲಿ ಇರುವವನಾದುದರಿಂದ ಅವನು ಮಧ್ಯೇಛಂದಸನು. ಅವನನ್ನು ಈ ಉಷೋದೇವತೆಯರು ಸುತ್ತುವರು.**

# ಸಮಾನಮೂರ್ಧ್ನೀರಭಿ ಲೋಕಮೇಕಮ್ ॥ [( ೨೪ )] ॥

ಸಮಾನಮೂರ್ಧ್ನೀರಿತಿ ಸಮಾನ-ಮೂರ್ಧ್ನೀ ಃ । ಅಭೀತಿ । ಲೋಕಮ್ । ಏಕಮ್ ॥

। (೨೪) ॥

[ಈ ಐದು ವ್ಯುಷ್ಟಿಗಳು] **ಏಕಮ್ ಲೋಕಮ್**=ಪ್ರಕಾಶವೊಂದನ್ನೇ; **ಅಭಿ**= ಕುರಿತಾಗಿ; **ಸಮಾನಮೂರ್ಧ್ನೀಃ**=ಸಮಾನವಾದ ಸ್ವಭಾವವುಳ್ಳವುಗಳಾಗಿ ಇವೆ.

ಇಂತಹ ಉಷೋದೇವತಾರೂಪವಾದ ಇಷ್ಟಕೆಯನ್ನು ಉಪಧಾನ ಮಾಡುವೆನು.

ಉಷಃಕಾಲವು ನಕ್ಷತ್ರಪ್ರಕಾಶದಿಂದ ಕೂಡಿದೆ. ರಾತ್ರಿಯ ಭಾಗವಾದ ಉಷೆಯು ಸೂರ್ಯನ ಕಿರಣಗಳನ್ನೂ ಹೊಂದುತ್ತದೆ. ಗೋವು-ಅಶ್ವ-ಮುಂತಾದ ಬಗೆ ಬಗೆಯ ಪ್ರಾಣಿಗಳು ಉಷಃಕಾಲದಲ್ಲಿ ಪುನರ್ಜನ್ಮದಂತೆ ಇರುವ ಎಚ್ಚರವನ್ನು ಹೊಂದುತ್ತವೆ. ಬಳಿಕ ತಮ್ಮ ತಮ್ಮ ವ್ಯವಹಾರಗಳಲ್ಲಿ ತೊಡಗುತ್ತವೆ.

**'ಯಾ ಮಾಘ್ಯಾ ಉಪರಿಷ್ಟಾತ್ ದ್ವ್ಯಷ್ಟಕಾ ತಸ್ಯಾಮಷ್ಟಮೀ ಜ್ಯೇಷ್ಠಯಾ ಸಂಪದ್ಯತೇ ತಾಮೇಕಾಷ್ಟಕೇತ್ಯಾಚಕ್ಷತೇ'** [ಆಪ.ಗೃ.ಸೂ. 21.10] ಎಂದು ಮಾಘ ಕೃಷ್ಣ ಅಷ್ಟಮಿಗೆ ಏಕಾಷ್ಟಕಾ ಎಂಬ ಸಂಜ್ಞೆಯನ್ನು ಆಪಸ್ತಂಬರು ಹೇಳಿದ್ದಾರೆ. ಆಕೆಯ ತಪಸ್ಸಿನಿಂದ ಗರ್ಭದಲ್ಲಿ ಇಂದ್ರನು ಜನಿಸಿದನು. ಆ ಇಂದ್ರನ ಸಹಾಯದಿಂದ ದೇವತೆಗಳು ರಾಕ್ಷಸರನ್ನು ಸೋಲಿಸಿದರು. ಇಂದ್ರನು ತನ್ನ ಶಕ್ತಿಗಳಿಂದ ರಾಕ್ಷಸರನ್ನು ಸಂಹರಿಸಿದನು. ಈ ರೀತಿಯ ಏಕಾಷ್ಟಕಾರೂಪವಾದ ಇಷ್ಟಕೆಯನ್ನು ಉಪಧಾನ ಮಾಡುತ್ತೇನೆ.

ಯಜಮಾನನು ಈ ರೀತಿ ಹೇಳುತ್ತಾನೆ. ಹೇ! ಏಕಾಷ್ಟಕಾದೇವಿಯರೇ! ನಾನು ಮೊದಲು ಅನುಷ್ಠಾನರಹಿತನಾಗಿದ್ದೆನು. ನನಗೆ ನೀವು ಸತ್ಯವಾದ ಧರ್ಮವನ್ನು ತಿಳಿಸಿ ಅನುಷ್ಠಾನಪರನಾಗುವಂತೆ ಮಾಡಿದಿರಿ. ಈಗ ನಿಮ್ಮಂತೆಯೇ ನಾನೂ ನಿಮ್ಮ ಪುತ್ರನಾದ ಇಂದ್ರನ ಅನುಗ್ರಹಬುದ್ಧಿಯಲ್ಲಿ ಇರುವಂತೆ ಮಾಡಿರಿ. ನೀವು ಪರಸ್ಪರವಾಗಿ ಒಬ್ಬರು ಇನ್ನೊಬ್ಬರನ್ನು ಅತಿಕ್ರಮಿಸದೆ ಅನ್ಯೋನ್ಯವಾಗಿರುತ್ತೀರಿ. ನಾನೂ ಹಾಗೆಯೇ ಋತ್ವಿಜರೊಡನೆ ಅನ್ಯೋನ್ಯಪ್ರೀತಿಯಿಂದ ಇರುವಂತೆ ಆಗಲೆಂದು ಪ್ರಾರ್ಥಿಸುತ್ತೇನೆ.

ಸರ್ವಜ್ಞಳಾದ ಉಷಾದೇವಿಯು ನನ್ನ ಭಕ್ತಿಯನ್ನು ತಿಳಿದಿರುವುದರಿಂದ ನನ್ನನ್ನು ಅನುಗ್ರಹಿಸುವುದರಲ್ಲಿ ಸ್ಥೈರ್ಯವನ್ನು ಹೊಂದಲಿ. ನಾನು ಉಷೆಯ ಅನುಗ್ರಹದಿಂದ ಇಂದ್ರನ ಅನುಗ್ರಹಕ್ಕೆ ಪಾತ್ರನಾಗುವಂತಾಗಲಿ. ನಾನೂ ಋತ್ವಿಜರೂ ಅನ್ಯೋನ್ಯವಾಗಿ ಪ್ರೀತಿಯುಕ್ತವಾಗಿ ನಡೆದುಕೊಳ್ಳುವಂತೆ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

**ಋತಸ್ಯ ಗರ್ಭಃ ಪ್ರಥಮಾ ವ್ಯೂಷುಷ್ಯಪಾಮೇಕಾ ಮಹಿಮಾನಂ ಬಿಭರ್ತಿ । ಸೂರ್ಯಸ್ಯೈಕಾ ಚರತಿ ನಿಷ್ಕೃತೇಷು ಘರ್ಮಸ್ಯೈಕಾ ಸವಿತೈಕಾಂ ನಿಯಚ್ಛತಿ ॥**

---

ಋತಸ್ಯ । ಗರ್ಭಃ । ಪ್ರಥಮಾ । ವ್ಯೂಷುಷೀತಿ ವಿ–ಊಷುಷೀ । ಅಪಾಮ್ । ಏಕಾ । ಮಹಿಮಾನಮ್ । ಬಿಭರ್ತಿ ॥ ಸೂರ್ಯಸ್ಯ । ಏಕಾ । ಚರತಿ । ನಿಷ್ಕೃತೇಷ್ವಿತಿ ನಿಃ–ಕೃತೇಷು । ಘರ್ಮಸ್ಯ । ಏಕಾ । ಸವಿತಾ । ಏಕಾಮ್ । ನೀತಿ । ಯಚ್ಛತಿ ॥

---

| ಮಂತ್ರ | ವಿನಿಯೋಗ |
|---|---|
| ಋತಸ್ಯ ಗರ್ಭಃ...ಯಚ್ಛತಿ ॥ | ಹನ್ನೆರಡನೆಯ ವ್ಯುಷ್ಟೀಷ್ಟಕೋಪಧಾನಕ್ಕಾಗಿ. |

---

▲ **ಪ್ರಥಮಾ ವ್ಯೂಷುಷೀ**=[ಐದು ವ್ಯುಷ್ಟಿಗಳಲ್ಲಿ] ಮೊದಲನೆಯದಾದ ಉಷೆಯು; **ಋತಸ್ಯ**=ಸತ್ಯಸ್ವರೂಪನಾದ ಸೂರ್ಯನ; **ಗರ್ಭಃ**=ಗರ್ಭವಾಗಿದೆ [ಸೂರ್ಯನನ್ನು ಗರ್ಭವನ್ನಾಗಿಸಿಕೊಂಡಿದೆ/ಸೂರ್ಯನೊಡನೆ ಇರುತ್ತದೆ; **ಏಕಾ**=ಮತ್ತೊಬ್ಬ ಉಷಸ್ಸು; **ಅಪಾಮ್**=[ಸೂರ್ಯರಶ್ಮಿಗಳಿಗೆ ಸಹಕಾರಿಯಾಗಿ] ನೀರಿನ; **ಮಹಿಮಾನಮ್**= ಹೆಚ್ಚಳವನ್ನು; **ಬಿಭರ್ತಿ**=[ಮೇಘರೂಪದಿಂದ] ಪೋಷಿಸುತ್ತದೆ; **ಏಕಾ**=ಒಬ್ಬ ಉಷೆಯು; **ಸೂರ್ಯಸ್ಯ**=ಸೂರ್ಯನಿಗೆ ಸಂಬಂಧಿಸಿದ; **ನಿಷ್ಕೃತೇಷು**=ನಿಶ್ಚಿತವಾದ ಪ್ರದೇಶಗಳಲ್ಲಿ; **ಚರತಿ**=ಸಂಚರಿಸುತ್ತಾಳೆ; **ಏಕಾ**=ಇನ್ನೊಬ್ಬ ಉಷೆಯು; **ಘರ್ಮಸ್ಯ**= ಜ್ವಲಿಸುವ ಅಗ್ನಿಯ; ನಿಷ್ಕೃತೇಷು ಚರತಿ=ಸಂಸ್ಕೃತವಾದ ಪ್ರದೇಶಗಳಲ್ಲಿ ಸಂಚರಿಸುತ್ತಾಳೆ; **ಸವಿತಾ**=ಸೂರ್ಯನು; **ಏಕಾಮ್**=ಇನ್ನೊಬ್ಬ ಉಷೆಯನ್ನು; **ನಿಯಚ್ಛತಿ**= ದೈನಂದಿನಪ್ರಕಾಶಕಾರಿಯನ್ನಾಗಿ ನಿಯಮಿಸುತ್ತಾನೆ.

---

ಐದು ಮುಖ್ಯರಾದ ಉಷೆಯರನ್ನು ಅನುಸರಿಸಿ ಪ್ರಜಾಪತಿಯ ಐದು ದೋಹಗಳೂ, ಐದು ಹೆಸರುಗಳುಳ್ಳ ಭೂಮಿಯೂ, ಐದು ಋತುಗಳೂ, ಐದು ದಿಕ್ಕುಗಳೂ, ಸ್ತೋತ್ರೀಯ

**ಯಾ ಪ್ರಥಮಾ ವ್ಯೌಚ್ಛತ್ಸಾ ಧೇನುರಭವದ್ಯಮೇ । ಸಾ ನಃ ಪಯಸ್ವತೀ ಧುಕ್ಷ್ವೋತ್ತರಾಮುತ್ತರಾಗ್ಂ ಸಮಾಮ್ ॥**

---

ಯಾ । ಪ್ರಥಮಾ । ವ್ಯೌಚ್ಛದಿತಿ ವಿ-ಔಚ್ಛತ್ । ಸಾ । ಧೇನುಃ । ಅಭವತ್ । ಯಮೇ ॥ ಸಾ । ನಃ । ಪಯಸ್ವತೀ । ಧುಕ್ಷ್ವ । ಉತ್ತರಾಮುತ್ತರಾಮಿತ್ಯುತ್ತರಾಮ್-ಉತ್ತರಾಮ್ । ಸಮಾಮ್ ॥

---

| ಮಂತ್ರ | ವಿನಿಯೋಗ |
|---|---|
| **ಯಾ ಪ್ರಥಮಾ...ಸಮಾಮ್ ॥** | ಹದಿಮೂರನೆಯ ವ್ಯುಷ್ಟೀಷ್ಟಕೋಪಧಾನಕ್ಕಾಗಿ. |

---

**ಯಾ ಪ್ರಥಮಾ**=ಯಾವ ಸೃಷ್ಟಿಯ ಮೊದಲನೆಯ ಅಂಧಕಾರನಿವಾರಕವಾದ ಉಷೆಯು; **ವ್ಯೌಚ್ಛತ್**=ಕತ್ತಲನ್ನು ದೂರಮಾಡಿತೋ; **ಸಾ**=ಆ ಉಷಾದೇವಿಯು; **ಯಮೇ**=ಯಮನೇ ಅಧಿಪತಿಯಾಗಿರುವ ಈ ಲೋಕದಲ್ಲಿ; **ಧೇನುಃ ಅಭವತ್**= ಹಾಲನ್ನು ಸುರಿಸುವ ಹಸುವಿನಂತೆ ಪ್ರೀತಿಕರವಾದಳು; **ಸಾ**=ಅಂತಹ ಉಷೆಯಾದ ನೀನು; **ನಃ**=ನಮಗೆ; **ಉತ್ತರಾಮುತ್ತರಾಮ್**=ಮುಂದಿನ ಮುಂದಿನ; **ಸಮಾಮ್**= ಸಂವತ್ಸರಗಳನ್ನು; **ಪಯಸ್ವತೀ**=ಸುವೃಷ್ಟಿಯನ್ನು ಕೊಡುವವಳಾಗಿ; **ಧುಕ್ಷ್ವ**=ಸುಖ ವನ್ನು ಸುರಿಸು.

---

**ಗಳೂ ಕ್ಲೃಪ್ತವಾಗಿವೆ. ಈ ವೃಷ್ಟಿಗಳು ಸಮಾನಸ್ವಭಾವವುಳ್ಳವರಾಗಿ ಸುತ್ತಲೂ ಪ್ರಕಾಶವನ್ನು ಹೊಂದಿವೆ.**

**ಈ ಅನುವಾಕದಲ್ಲಿ ಪಂಚಸಂಖ್ಯೆಯು ಪ್ರಶಂಸಿಸಲ್ಪಟ್ಟಿದೆ. ಐದು ಸಂಖ್ಯೆಯ ವಿವರಣೆ ಯಲ್ಲಿ ಭಾಷ್ಯಕಾರರು ಶ್ರುತಿವಚನಗಳನ್ನು ಪ್ರಮಾಣವನ್ನಾಗಿಸಿಕೊಂಡು ವಿವರಿಸಿರು ತ್ತಾರೆ.**

**ಐದು ಉಷಸ್ಸುಗಳೂ ಬೇರೆ ಬೇರೆ ಪ್ರದೇಶದಲ್ಲಿ ನಿರ್ವಹಿಸುವ ಬೇರೆ ಬೇರೆ ಕಾರ್ಯಗಳನ್ನು ಈ ಮಂತ್ರದಲ್ಲಿ ಹೇಳಿದೆ.**

ಶುಕ್ರರ್ಷಭಾ ನಭಸಾ ಜ್ಯೋತಿಷಾಽಗಾದ್ವಿಶ್ವರೂಪಾ

ಶಬಲೀರಗ್ನಿಕೇತುಃ । ಸಮಾನಮರ್ಥಗ್ಗ್ಂ ಸ್ವಪಸ್ಯಮಾನಾ

ಬಿಭ್ರತೀ ಜರಾಮಜರ ಉಷ ಆಽಗಾಃ ॥

---

ಶುಕ್ರರ್ಷಭೇತಿ ಶುಕ್ರ-ಋಷಭಾ । ನಭಸಾ । ಜ್ಯೋತಿಷಾ । ಏತಿ । ಅಗಾತ್ । ವಿಶ್ವ ರೂಪೇತಿ ವಿಶ್ವ-ರೂಪಾ । ಶಬಲೀಃ । ಅಗ್ನಿಕೇತುರಿತ್ಯಗ್ನಿ-ಕೇತುಃ ॥ ಸಮಾನಮ್ । ಅರ್ಥಮ್ । ಸ್ವಪಸ್ಯಮಾನೇತಿ ಸು-ಅಪಸ್ಯಮಾನಾ । ಬಿಭ್ರತೀ । ಜರಾಮ್ । ಅಜರೇ । ಉಷಃ । ಏತಿ । ಅಗಾಃ ॥

---

| ಮಂತ್ರ | ವಿನಿಯೋಗ |
|---|---|
| ಶುಕ್ರರ್ಷಭಾ...ಅಗಾಃ ॥ | ಹದಿನಾಲ್ಕನೆಯ ವ್ಯುಷ್ಟೀಷ್ಟಕೋಪಧಾನಕ್ಕಾಗಿ. |

---

▲ [ಈ ಉಷೆಯು] **ವಿಶ್ವರೂಪಾ**=ಎಲ್ಲ ರೂಪಗಳನ್ನೂ ಪ್ರಕಾಶಪಡಿಸುವವಳು; **ಶುಕ್ರರ್ಷಭಾ**=ಪ್ರಕಾಶಮಾನವಾದ ನಕ್ಷತ್ರಾದಿಗಳಲ್ಲಿ ಶ್ರೇಷ್ಠವಾದವಳು; **ಶಬಲೀಃ**=ಮಿಶ್ರವರ್ಣವುಳ್ಳವಳು; **ಅಗ್ನಿಕೇತುಃ**=ಅಗ್ನಿಯೇ ಧ್ವಜವಾಗಿ ಉಳ್ಳವಳು [ಇಂತಹ ಉಷೆಯು] **ನಭಸಾ ಜ್ಯೋತಿಷಾ**=ಆಕಾಶದಲ್ಲಿರುವ ಪ್ರಕಾಶದಿಂದ ಕೂಡಿದವಳಾಗಿ; **ಆ ಅಗಾತ್**=ಬಂದಿರುವಳು; **ಅಜರೇ**=ಮುಪ್ಪಿಲ್ಲದವಳಾದ; **ಉಷಃ**=ಹೇ! ಉಷಾ ದೇವಿಯೇ! **ಸಮಾನಮ್ ಅರ್ಥಮ್**=ಸಮಾನವಾದ ಪ್ರಕಾಶವನ್ನು ನೀಡುವಿಕೆ ಎಂಬ; **ಸ್ವಪಸ್ಯಮಾನಾ**=ಚೆನ್ನಾದ ಕಾರ್ಯವನ್ನು ಬಯಸುವ ನೀನು; **ಜರಾಮ್ ಬಿಭ್ರತೀ**=ಬಹಳಕಾಲ ಬಾಳುವಿಕೆ ಎಂಬ ಮುಪ್ಪನ್ನು ಹೊಂದಿದವಳಾಗಿ; **ಆ ಅಗಾಃ**=ಬಂದಿರುವೆ.

---

ಸೃಷ್ಟಿಯ ಮೊದಲನೆಯ ಉಷಸ್ಸು ಕತ್ತಲನ್ನು ದೂರ ಮಾಡಿತು. ಮತ್ತೊಂದು ಸೂರ್ಯನೊಡನೆಯೇ ಇರುತ್ತದೆ. ಮಳೆಯನ್ನು ಸುರಿಸುವ ಉಷಸ್ಸೊಂದು. ಸೂರ್ಯ-

ಋತೂನಾಂ ಪತ್ನೀ ಪ್ರಥಮೇಯಮಾऽಗಾದಹ್ನಾಂ ನೇತ್ರೀ

ಜನಿತ್ರೀ ಪ್ರಜಾನಾಮ್ । ಏಕಾ ಸತೀ ಬಹುಧೋಷೋ

ವ್ಯುಚ್ಛಸ್ಯಜೀರ್ಣಾ ತ್ವಂ

---

ಋತೂನಾಮ್ । ಪತ್ನೀ । ಪ್ರಥಮಾ । ಇಯಮ್ । ಏತಿ । ಅಗಾತ್ । ಅಹ್ನಾಮ್ । ನೇತ್ರೀ । ಜನಿತ್ರೀ । ಪ್ರಜಾನಾಮಿತಿ ಪ್ರ-ಜಾನಾಮ್ ॥ ಏಕಾ । ಸತೀ । ಬಹುಧೇತಿ ಬಹು-ಧಾ । ಉಷಃ । ವೀತಿ । ಉಚ್ಛಸಿ । ಅಜೀರ್ಣಾ । ತ್ವಮ್ ।

---

| ಮಂತ್ರ | ವಿನಿಯೋಗ |
|---|---|
| ಋತೂನಾಂ...ಅನ್ವತ್ ॥ | ಹದಿನೈದನೆಯ ವ್ಯುಷ್ಟೀಷ್ಟಕೋಪಧಾನಕ್ಕಾಗಿ. |

---

[ಉಷೆಯು] ಋತೂನಾಮ್ ಪತ್ನೀ=ಋತುಗಳನ್ನು ಪಾಲಿಸುವವಳು; ಅಹ್ನಾಮ್ =ದಿನಗಳಿಗೆ; ನೇತ್ರೀ=ಕಣ್ಣಾಗಿರುವವಳು; ಪ್ರಜಾನಾಮ್=[ಕಾಲರೂಪಳಾಗಿ] ಪ್ರಜೆಗಳ; ಜನಿತ್ರೀ=ಉತ್ಪತ್ತಿಗೆ ಕಾರಣಳು; ಇಯಮ್ ಪ್ರಥಮಾ=ಈ ಮೊದಲನೆಯ ಉಷೆಯು; ಆ ಅಗಾತ್=ಯಾಗಕ್ಕೆ ಬಂದಿರುವಳು; ಉಷಃ=ಹೇ ಉಷೋದೇವಿಯೇ! ತ್ವಮ್=ನೀನು; ಏಕಾ ಸತೀ=ಒಬ್ಬಳೇ ಆಗಿದ್ದರೂ; ಬಹುಧಾ= ಅನೇಕ ಪ್ರಕಾರವಾಗಿ ಆವೃತ್ತಿ ಹೊಂದುತ್ತಾ; ವ್ಯುಚ್ಛಸಿ=ಕತ್ತಲನ್ನು ಹೋಗಲಾಡಿಸುತ್ತೀಯೆ; ಅಜೀರ್ಣಾ=[ನೀನು] ಮುಪ್ಪಿಲ್ಲದವಳು;

---

ಅಗ್ನಿಯರ ನಿಶ್ಚಿತಪ್ರದೇಶಗಳಲ್ಲಿ ಸಂಚರಿಸುವ ಉಷೆಯರು. ಸೂರ್ಯನಿಂದ ದೈನಂದಿನ ಪ್ರಕಾಶಕ್ಕಾಗಿ ನಿಯತಳಾಗಿರುವ ಉಷೆಯೊಬ್ಬಳು.

ಹೀಗೆ ಉಷೆಯರು ಬೇರೆ ಬೇರೆಯ ಕಾರ್ಯವನ್ನು ನಿರ್ವಹಿಸಿ, ಎಲ್ಲಕ್ಕೂ ಕಾರಣರಾಗಿರುತ್ತಾರೆ.

ಜರಯಸಿ ಸರ್ವಮನ್ಯತ್ ॥ ೨೫–11 ॥

[ಊರ್ಜಮೇಕಾ ಪ್ರತಿಮುಂಚಮಾನಾ ಭೂಯಾಸಮೇಕಂ

ಪತ್ನ್ಯೇಕಾನ್ನವಿಗ್ಂಶತಿಶ್ಚ ॥]

---

ಜರಯಸಿ । ಸರ್ವಮ್ । ಅನ್ಯತ್ ॥ ( ೨೫ ) ॥

---

ಸರ್ವಮ್ ಅನ್ಯತ್=ಬೇರೆ ಎಲ್ಲವನ್ನೂ; ಜರಯಸಿ=ಮುಪ್ಪನ್ನು ಹೊಂದುವಂತೆ ಮಾಡುತ್ತೀಯೆ [ಇಂತಹ ಉಷಾರೂಪವಾದ ಇಷ್ಟಕೆಯೇ! ನಿನ್ನನ್ನು ಉಪಧಾನ ಮಾಡುತ್ತೇನೆ].

---

ಉಷೆಯು ಯಮನ ಅಧೀನವಾಗಿರುವ ಈ ಲೋಕದಲ್ಲಿ ಪ್ರಜೆಗಳು ಸಂತೋಷ ಭರಿತರಾಗುವಂತೆ ಮಾಡಲಿ. ಮುಂದು ಮುಂದಿನ ವರ್ಷಗಳಲ್ಲಿ ಒಳ್ಳೆಯ ಮಳೆಯನ್ನು ಸುರಿಸುತ್ತಾ ಕಾಮಧೇನುವಿನಂತೆ ನಮಗೆ ಸೌಖ್ಯವನ್ನು ಕರುಣಿಸಲಿ.

ಅರುಣೋದಯದೊಡನೆಯೇ ಉಷಾದೇವಿಯು ಎಲ್ಲವನ್ನೂ ಕಾಣುವಂತೆ ಮಾಡುವಳು. ಅವಳು ನಕ್ಷತ್ರಾದಿಜ್ಯೋತಿಗಳಲ್ಲಿ ಶ್ರೇಷ್ಠಳು. ಸೂರ್ಯೋದಯಕ್ಕೆ ಮೊದಲು ಅಲ್ಪಪ್ರಕಾಶವಿರುವುದರಿಂದ ಕತ್ತಲು–ಬೆಳಕಿನ ಮಿಶ್ರವರ್ಣವುಳ್ಳವಳು ಉಷಾದೇವಿ. ಅನಂತರ ಅಗ್ನಿಹೋತ್ರಕ್ಕಾಗಿ ಬೆಳಗಿಸುವ ಅಗ್ನಿಯನ್ನೇ ಧ್ವಜವನ್ನಾಗಿ ಉಳ್ಳವಳಾಗಿದ್ದಾಳೆ. ಇವಳು ಸೂರ್ಯನೊಡನೆ ಪ್ರಕಾಶನರೂಪವಾದ ಕಾರ್ಯದಲ್ಲಿ ತೊಡಗುವಳು. ಬಹಳ ಕಾಲ ಬದುಕಿರುವಿಕೆಯೆಂಬ ಜೀವನರೂಪವಾದ ಮುಪ್ಪನ್ನು ಹೊಂದಿದರೂ, ಮುಪ್ಪಿನ ಲಕ್ಷಣವಾದ ಕೂದಲು ಬೆಳ್ಳಗಾಗುವಿಕೆ ಮೊದಲಾದವನ್ನು ಹೊಂದದವಳು. ಇಂತಹ ಉಷೆಯು ಪ್ರಸನ್ನಳಾಗಲಿ.

ಉಷೆಯು ಕಾಲರೂಪಳಾಗಿ ವಸಂತಾದಿಗಳಿಗೆ ಕಾರಣಳು. ಅವಳು ಹಗಲಿಗೆ ಕಣ್ಣಿನಂತೆ ಇದ್ದಾಳೆ. ಅವಳು ಪ್ರಜೆಗಳ ಉತ್ಪತ್ತಿಗೂ ಕಾರಣಳು. ಅವಳು ಬಹುರೂಪಳಾಗಿದ್ದಾಳೆ. ಕತ್ತಲನ್ನು ಹೋಗಲಾಡಿಸಿ ವ್ಯಕ್ತಿಯೆನಿಸಿದವಳಾಗಿದ್ದಾಳೆ. ಸ್ವತಃ ಅವಳು ಮುಪ್ಪಿನ ಯಾವ ಲಕ್ಷಣವನ್ನೂ ಹೊಂದದೇ ಮುಪ್ಪಿಲ್ಲದವಳಾಗಿದ್ದಾಳೆ. ಆದರೆ ಆಕೆಯು ಕಾಲ ಸ್ವರೂಪಳಾದುದರಿಂದ ಬೇರೆಯವರು ಮುಪ್ಪಾಗುವಂತೆ ಮಾಡುವವಳು. ಇಂತಹ ಉಷಾಸ್ವರೂಪಳಾದ ನಿನ್ನ ಸ್ತುತಿಯನ್ನು ಮಾಡಿ ಉಷಾರೂಪವಾದ ಈ ಇಷ್ಟಕೆಯನ್ನು ಉಪಧಾನ ಮಾಡುತ್ತೇನೆ.

## ವಿನಿಯೋಗಸಂಗ್ರಹ

ಇಯಂ ವ್ಯುಷ್ಟೀರುಪಾದಧ್ಯಾತ್ ಮಂತ್ರಾಃ *ಪಂಚದಶೇರಿತಾಃ ॥

### ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–15

* ಈ ಅನುವಾಕದ ಆರಂಭದಲ್ಲಿ ಸಾಯಣಭಾಷ್ಯದಲ್ಲಿ **'ಇಯಮೇವ ಸಾ ಯಾ ಪ್ರಥಮಾ ವ್ಯೌಚ್ಛದಿತಿ ಷೋಡಶ ವ್ಯುಷ್ಟೀಃ'** [ಆಪ. ಶ್ರೌ. ಸೂ. 17.2.12] ಎಂಬ ವಚನದಂತೆ 16 ವ್ಯುಷ್ಟೀಷ್ಟಕೆಗಳೆಂದು ತಿಳಿಸಿದೆ. ಈ ಅನುವಾಕದಲ್ಲಿ ಪಠಿತವಾದ ಮಂತ್ರಗಳು 15. ಆಪಸ್ತಂಬರು ಸೂಚಿಸಿರುವ ಹದಿನಾರನೆಯ ವ್ಯುಷ್ಟೀಷ್ಟಕೆಯ ಮಂತ್ರವನ್ನು ಯಜುರ್ವೇದದ ಶಾಖಾಂತರದಿಂದ ಸಂಗ್ರಹಿಸಬೇಕೆಂಬ ಅಭಿಪ್ರಾಯದಿಂದ ಸಾಯಣಾಚಾರ್ಯರು **'ಷೋಡಶೀ ತ್ವಸ್ಯತ್ರ ದ್ರಷ್ಟವ್ಯಾ'** ಎಂದು ತಿಳಿಸಿದ್ದಾರೆ.

ಪಂಚಮಕಾಂಡದ ಮೂರನೆಯ ಪ್ರಪಾಠಕದ ಭಟ್ಟಭಾಸ್ಕರಭಾಷ್ಯದಲ್ಲಿ ಬೋಧಾಯನ ಶ್ರೌತ ಸೂತ್ರಾನುಸಾರಿಯಾಗಿ 15 ವ್ಯುಷ್ಟೀಷ್ಟಕೆಗಳು. ನಾಲ್ಕು ದಿಕ್ಕುಗಳಲ್ಲಿ ಮೂರು ಮೂರರಂತೆ ಹಾಗೂ ಮಧ್ಯದಲ್ಲಿ ಮೂರು ಎಂದಿದೆ. ಈ ಶಾಖೆಯಲ್ಲಿ ಪಠಿತವಾದ ಮಂತ್ರಗಳಿಗೆ ಅನುಗುಣವಾಗಿ ಬೌಧಾಯನ ಶ್ರೌತಸೂತ್ರವಿದೆ. ಚತುರ್ಥಕಾಂಡದ ಭಟ್ಟಭಾಸ್ಕರಭಾಷ್ಯವು ಉಪಲಬ್ಧವಿಲ್ಲ.

## ॥ ದ್ವಾದಶೋಽನುವಾಕಃ ॥

ಅಗ್ನೇ ಜಾತಾನ್ಪ್ರಣುದಾ ನಃ

ಸಪತ್ನಾನ್ಪ್ರತ್ಯಜಾತಾಞ್ಜಾತವೇದೋ ನುದಸ್ವ ।

---

ಅಗ್ನೇ । ಜಾತಾನ್ । ಪ್ರೇತಿ । ನುದ । ನಃ । ಸಪತ್ನಾನ್ । ಪ್ರತೀತಿ । ಅಜಾತಾನ್ । ಜಾತವೇದ ಇತಿ ಜಾತ-ವೇದಃ । ನುದಸ್ವ ॥

---

ಹನ್ನೊಂದನೆಯ ಅನುವಾಕದಲ್ಲಿ ವ್ಯಷ್ಟೀಷ್ಟಕೋಪಧಾನಮಂತ್ರಗಳು ಉಕ್ತವಾದವು. ಇಲ್ಲಿಗೆ ನಾಲ್ಕನೆಯ ಚಿತಿಯು ಮುಗಿಯಿತು. ಈ ಹನ್ನೆರಡನೆಯ ಅನುವಾಕದಲ್ಲಿ ಐದನೆಯ ಚಿತಿಯ ಅಸಪತ್ನಾದಿ ಇಷ್ಟಕೆಗಳ ಉಪಧಾನಮಂತ್ರಗಳು ಉಕ್ತವಾಗಿವೆ.

---

| ಮಂತ್ರ | ವಿನಿಯೋಗ |
|---|---|
| ಅಗ್ನೇ ಜಾತಾನ್...ಉದ್ಭಿತ್ ॥ | ಪೂರ್ವದಿಕ್ಕಿನಲ್ಲಿ ಉಪಧಾನ ಮಾಡುವ ಅಸಪತ್ನೇಷ್ಟಕೆಯ ಉಪಧಾನಕ್ಕಾಗಿ. |

---

ಅಗ್ನೇ=ಅಗ್ನಿದೇವನೇ! **ಜಾತವೇದಃ**=ಹುಟ್ಟಿದುದೆಲ್ಲವನ್ನೂ ತಿಳಿದವನೇ! **ಜಾತಾನ್**=ಜನಿಸಿರುವ; **ನಃ ಸಪತ್ನಾನ್**=ನಮ್ಮ ಶತ್ರುಗಳನ್ನು; **ಪ್ರ ನುದ**=ಪೂರ್ಣವಾಗಿ ನಾಶಪಡಿಸು. **ಅಜಾತಾನ್**=ಹುಟ್ಟಲಿರುವ; ಸಪತ್ನಾನ್=ಶತ್ರುಗಳನ್ನು; **ಪ್ರತಿ ನುದಸ್ವ**=ಹುಟ್ಟದಂತೆ ಪ್ರತಿಬಂಧಿಸು.

ಅಸ್ಮೇ ದೀದಿಹಿ ಸುಮನಾ ಅಹೇಡನ್ತವ ಸ್ಯಾಗ್ಂ
ಶರ್ಮನ್ತ್ರಿವರೂಥ ಉದ್ಭಿತ್ ॥ ಸಹಸಾ ಜಾತಾನ್ಪ್ರಣುದಾ ನಃ
ಸಪತ್ನಾನ್ಪ್ರತ್ಯಜಾತಾಞ್ಜಾತವೇದೋ ನುದಸ್ವ ।

---

ಅಸ್ಮೇ ಇತಿ । ದೀದಿಹಿ । ಸುಮನಾ ಇತಿ ಸು-ಮನಾಃ । ಅಹೇಡನ್ನ್ । ತವ । ಸ್ಯಾಮ್ । ಶರ್ಮನ್ನ್ । ತ್ರಿವರೂಥ ಇತಿ ತ್ರಿ-ವರೂಥಃ । ಉದ್ಭಿದಿತ್ಯುತ್-ಭಿತ್ ॥ ಸಹಸಾ । ಜಾತಾನ್ । ಪ್ರೇತಿ । ನುದ । ನಃ । ಸಪತ್ನಾನ್ । ಪ್ರತೀತಿ । ಅಜಾತಾನ್ । ಜಾತವೇದ ಇತಿ ಜಾತ-ವೇದಃ । ನುದಸ್ವ ॥

---

| ಮಂತ್ರ | ವಿನಿಯೋಗ |
| --- | --- |
| ಸಹಸಾ...ಸಪತ್ನಾನ್ ॥ | ಪಶ್ಚಿಮದಿಕ್ಕಿನಲ್ಲಿನ ಇಷ್ಟಕೋಪಧಾನಮಂತ್ರ. |

---

**ಸುಮನಾಃ**=[ನಮ್ಮ ವಿಷಯದಲ್ಲಿ] ಅನುಗ್ರಹಬುದ್ಧಿಯುಳ್ಳವನಾಗಿ; **ಅಹೇಡನ್**=ಕೋಪಿಸಿಕೊಳ್ಳದವನಾಗಿ; **ತ್ರಿವರೂಥಃ**=ಪ್ರಾಗ್ವಂಶ, ಸದಸ್ಸು, ಹವಿರ್ಧಾನಗಳೆಂಬ ಮೂರು ಮನೆಗಳುಳ್ಳವನಾಗಿ; **ಉದ್ಭಿತ್**=ಅನುಷ್ಠಿಸಬೇಕಾದ ಕರ್ಮಗಳ ಉತ್ಪಾದಕನಾಗು; **ಅಸ್ಮೇ**=ನಮ್ಮನ್ನು; **ದೀದಿಹಿ**=ಪ್ರಕಾಶಪಡಿಸು. **ತವ**=ನಿನ್ನ [ಅನುಗ್ರಹದಿಂದ] **ಶರ್ಮನ್**=ಸುಖದಲ್ಲಿ; **ಸ್ಯಾಮ್**=ಇರುವವರಾಗೋಣ. ▲ **ಸಹಸಾ ಜಾತಾನ್**=ಬಲದಿಂದ/ಒಡನೆಯೇ ಹುಟ್ಟಿರುವ; **ನಃ ಸಪತ್ನಾನ್**=ನಮ್ಮ ಶತ್ರುಗಳನ್ನು; **ಪ್ರ ಣುದ**=ನಾಶಪಡಿಸು. **ಜಾತವೇದಃ**=ಹುಟ್ಟಿದುದೆಲ್ಲವನ್ನೂ ತಿಳಿದಿರುವವನೇ! **ಅಜಾತಾನ್**=ಇನ್ನೂ ಜನಿಸದಿರುವ ಶತ್ರುಗಳನ್ನು; **ಪ್ರತಿ ನುದಸ್ವ**=ಹುಟ್ಟದಿರುವಂತೆ ಪ್ರತಿಬಂಧಿಸು.

---

ಎಲ್ಲವನ್ನೂ ತಿಳಿದಿರುವ ಅಗ್ನಿದೇವನೇ! ಹುಟ್ಟಿರುವ ನಮ್ಮ ಶತ್ರುಗಳನ್ನು ನಾಶಪಡಿಸು. ಹುಟ್ಟಲಿರುವ ಶತ್ರುಗಳನ್ನು ಹುಟ್ಟದಂತೆ ಪ್ರತಿಬಂಧಿಸಿ, ನಮ್ಮಲ್ಲಿ ಅನುಗ್ರಹ

ಅಧಿ ನೋ ಬ್ರೂಹಿ ಸುಮನಸ್ಯಮಾನೋ ವಯಗ್‍ಂ

ಸ್ಯಾಮ ಪ್ರಣುದಾ ನಃ ಸಪತ್ನಾನ್ ॥ ಚತುಶ್ಚತ್ವಾರಿಗ್‍ಂಶಃ

ಸ್ತೋಮೋ ವರ್ಚೋ ದ್ರವಿಣಗ್‍ಂ

---

ಅಧೀತಿ । ನಃ । ಬ್ರೂಹಿ । ಸುಮನಸ್ಯಮಾನ ಇತಿ ಸು-ಮನಸ್ಯಮಾನಃ । ವಯಮ್ । ಸ್ಯಾಮ । ಪ್ರೇತಿ । ನುದ । ನಃ । ಸಪತ್ನಾನ್ ॥ ಚತುಶ್ಚತ್ವಾರಿಗ್‍ಂಶ ಇತಿ ಚತುಃ-ಚತ್ವಾರಿಗ್‍ಂಶಃ । ಸ್ತೋಮಃ । ವರ್ಚಃ । ದ್ರವಿಣಮ್ ।

---

| ಮಂತ್ರ | ವಿನಿಯೋಗ |
| --- | --- |
| **ಚತುಶ್ಚತ್ವಾರಿಗ್‍ಂಶಃ...ದ್ರವಿಣಮ್** ॥ | ಮೂರನೆಯ ಅಸಪತ್ನೇಷ್ಟಕೆಯ ಉಪಧಾನಕ್ಕಾಗಿ. |

---

**ಸುಮನಸ್ಯಮಾನಃ**=ನಮ್ಮ ವಿಷಯದಲ್ಲಿ ಒಳ್ಳೆಯ ಮನಸ್ಸುಳ್ಳವನಾಗಿ; **ನಃ**=ನಮ್ಮನ್ನು; **ಅಧಿ ಬ್ರೂಹಿ**=ಅಧಿಕರಾದವರನ್ನಾಗಿ [ಮಾಡಿ ಅದನ್ನು ಎಲ್ಲರಲ್ಲಿಯೂ] ಹೇಳು. **ವಯಮ್ ಸ್ಯಾಮ**=[ನಿನ್ನ ಅನುಗ್ರಹದಿಂದ] ನಾವು ಅಧಿಕರಾಗೋಣ. **ನಃ**=ನಮ್ಮ; **ಸಪತ್ನಾನ್**=ಸಕಲ ಶತ್ರುಗಳನ್ನೂ; **ಪ್ರ ಣುದ**=ನಾಶಪಡಿಸು. 🔔 [ಎಲೈ! ಇಷ್ಟಕೆಯೇ! ನೀನು] **ಚತುಶ್ಚತ್ವಾರಿಂಶಃ ಸ್ತೋಮಃ**=ಸಾಮಗಳ ನಲವತ್ತುನಾಲ್ಕು ಆವೃತ್ತಿಗಳಿಂದ ಉಂಟಾಗುವ ಚತುಶ್ಚತ್ವಾರಿಂಶಸ್ತೋಮ; **ವರ್ಚಃ**=ಬಲರೂಪವಾದ; **ದ್ರವಿಣಮ್**= ಧನವೂ [ನೀನಾಗಿರುವೆ] [ನಿನ್ನನ್ನು ಉಪಧಾನ ಮಾಡುತ್ತೇನೆ].

---

ಬುದ್ಧಿಯುಳ್ಳವನಾಗು. ಕೋಪಿಸಿಕೊಳ್ಳಬೇಡ. ಪ್ರಾಗ್ವಂಶ, ಸದಸ್ಸು, ಹಾಗೂ ಹವಿರ್ಧಾನವೆಂಬ ಮೂರು ಆಶ್ರಯದಲ್ಲಿದ್ದು, ಮಾಡಬೇಕಾದ ಕರ್ಮಗಳನ್ನು ಉತ್ಪಾದಿಸು. ನಮ್ಮನ್ನು ಲೋಕದಲ್ಲಿ ಪ್ರಕಾಶಪಡಿಸು. ನಿನ್ನ ಅನುಗ್ರಹದಿಂದ ನಾವು ಸುಖಿಗಳಾಗುವಂತೆ ಅನುಗ್ರಹಿಸು.

ಹೇ! ಅಗ್ನಿದೇವನೇ! ನೀನು ಹುಟ್ಟಿದುದೆಲ್ಲವನ್ನೂ ತಿಳಿದಿರುವವನು. ಹುಟ್ಟಿರುವ

**ಷೋಡಶಃ ಸ್ತೋಮ ಓಜೋ ದ್ರವಿಣಂ ಪೃಥಿವ್ಯಾಃ ಪುರೀಷಮಸ್ಯ[ಪುರೀಷಮಸಿ(೨೬)ಅಪ್ಸೋ]ಪ್ಸೋ ನಾಮ ॥**

---

ಷೋಡಶಃ । ಸ್ತೋಮಃ । ಓಜಃ । ದ್ರವಿಣಮ್ । ಪೃಥಿವ್ಯಾಃ । ಪುರೀಷಮ್ । ಅಸಿ । (೨೬) । ಅಪ್ಸಃ । ನಾಮ ।

---

| ಮಂತ್ರ | ವಿನಿಯೋಗ |
|---|---|
| **ಷೋಡಶಃ...ದ್ರವಿಣಮ್ ॥** | ಉತ್ತರಭಾಗದಲ್ಲಿ ಅಸಪತ್ನೇಷ್ಟಕೋಪಧಾನಕ್ಕಾಗಿ. |
| **ಪೃಥಿವ್ಯಾಃ...ಅಪ್ಸೋ ನಾಮ ॥** | ಪುರೀಷವತಿಯೆಂಬ ಅಸಪತ್ನೇಷ್ಟಕೋಪಧಾನಕ್ಕಾಗಿ. |

---

🔔 [ಎಲೈ! ಇಷ್ಟಕೆಯೇ! ನೀನು] **ಷೋಡಶಃ ಸ್ತೋಮಃ**=ಸಾಮಗಳ ಹದಿನಾರು ಆವೃತ್ತಿರೂಪವಾಗಿರುವ ಷೋಡಶಸ್ತೋಮವಾಗಿರುವೆ. **ಓಜಃ ದ್ರವಿಣಮ್**=ಅಷ್ಟಮ ಧಾತುರೂಪವಾದ ಧನವೂ [ನೀನಾಗಿರುವೆ] [ನಿನ್ನನ್ನು ಉಪಧಾನ ಮಾಡುತ್ತೇನೆ]. 🔔 [ಎಲೈ! ಇಷ್ಟಕೆಯೇ! ನೀನು] **ಪೃಥಿವ್ಯಾಃ ಪುರೀಷಮ್ ಅಸಿ**=ಚಿತಿರೂಪವಾದ ಭೂಮಿಯ ಪೂರಕವಾಗಿರುವೆ. **ಅಪ್ಸಃ ನಾಮ**=ನಾಶಪಡಿಸದವಳು ಎಂದು ಪ್ರಸಿದ್ಧ ವಾಗಿರುವೆ.

---

**ಮತ್ತು ಹುಟ್ಟಲಿರುವ ಶತ್ರುಗಳನ್ನು ದೂರ ಮಾಡು. ನಮ್ಮ ವಿಷಯದಲ್ಲಿ ಒಳ್ಳೆಯ ಮನಸ್ಸುಳ್ಳವನಾಗು. ನಿನ್ನ ಅನುಗ್ರಹದಿಂದ ನಾವು ಅಧಿಕರಾಗೋಣ. ನಮ್ಮೆಲ್ಲ ಶತ್ರುಗಳನ್ನೂ ದೂರಮಾಡು.**

**ದಕ್ಷಿಣಭಾಗದಲ್ಲಿ ಉಪಧಾನ ಮಾಡುವ ಇಷ್ಟಕೆಯೇ! ನೀನು ಚತುಶ್ಚತ್ವಾರಿಂಶ ಸ್ತೋಮರೂಪಳಾಗಿ ಬಲರೂಪವಾದ ದ್ರವಿಣವಾಗಿರುವೆ.**

**ಉತ್ತರದಲ್ಲಿ ಉಪಧಾನ ಮಾಡುವ ಇಷ್ಟಕೆಯೇ! ನೀನು ಷೋಡಶಸ್ತೋಮರೂಪ ಳಾಗಿ ಅಷ್ಟಮಧಾತುರೂಪವಾದ ಧನವಾಗಿರುವೆ.**

**ತುಂಬುವುದಕ್ಕಾಗಿ ಮರಳನ್ನು ಹಾಕಿ ಮಧ್ಯದಲ್ಲಿ ಉಪಧಾನ ಮಾಡುವ ಇಷ್ಟಕೆ ಪುರೀಷವತೀ. ಹೇ ಇಷ್ಟಕೆಯೇ! ನೀನು ಚಿತಿರೂಪವಾದ ಭೂಮಿಯ ರೂಪವಾಗಿರುವೆ.**

ಏವಶ್ಛಂದೋ ವರಿವಶ್ಛಂದಃ ಶಂಭೂಶ್ಛಂದಃ ಪರಿಭೂಶ್ಛಂದ

ಆಚ್ಛಚ್ಛಂದೋ ಮನಶ್ಛಂದೋ ವ್ಯಚಶ್ಛಂದಃ ಸಿಂಧುಶ್ಛಂದಃ

ಸಮುದ್ರಂ ಛಂದಃ ಸಲಿಲಂ ಛಂದಃ

---

ಏವಃ । ಛಂದಃ । ವರಿವಃ । ಛಂದಃ । ಶಂಭೂರಿತಿ ಶಮ್-ಭೂಃ । ಛಂದಃ ।

ಪರಿಭೂರಿತಿ ಪರಿ-ಭೂಃ । ಛಂದಃ । ಆಚ್ಛತ್ । ಛಂದಃ । ಮನಃ । ಛಂದಃ । ವ್ಯಚಃ ।

ಛಂದಃ । ಸಿಂಧುಃ । ಛಂದಃ । ಸಮುದ್ರಮ್ । ಛಂದಃ । ಸಲಿಲಮ್ । ಛಂದಃ ।

---

| ಮಂತ್ರ | ವಿನಿಯೋಗ |
|---|---|
| ಏವಶ್ಛಂದಃ...ಅಙ್ಕ್ಯಾಙ್ಕಙ್ಛಂದಃ ॥ | ನಲವತ್ತು ವಿರಾಜೇಷ್ಟಕೆಗಳನ್ನು ಉಪಧಾನ ಮಾಡಲು. |

---

🔔 [ಎಲೈ! ಇಷ್ಟಕೆಯೇ! ನೀನು] **ಏವಃ ಛಂದಃ**=ದೇವಛಂದಸವಾದ ಏವಛಂದೋ ರೂಪಳು. [ನಿನ್ನನ್ನು ಉಪಧಾನ ಮಾಡುತ್ತೇನೆ] **ವರಿವಃ ಛಂದಃ**=*ನೀನು ದೇವಛಂದ ಸವಾದ ವರಿವವೆಂಬ ಛಂದಸ್ಸು. [ನಿನ್ನನ್ನು ಉಪಧಾನ ಮಾಡುತ್ತೇನೆ]; **ಶಂಭೂಃ ಛಂದಃ** =ನೀನು ಶಂಭೂ ಎಂಬ ಛಂದಸ್ಸು; **ಪರಿಭೂಃ ಛಂದಃ**=ನೀನು ಪರಿಭೂಛಂದಸ್ಸು; **ಆಚ್ಛತ್ ಛಂದಃ**=ನೀನು ಆಚ್ಛತ್‌ಛಂದಸ್ಸು; **ಮನಃ ಛಂದಃ**=ನೀನು ಮನಸ್‌ಛಂದಸ್ಸು; **ವ್ಯಚಃ ಛಂದಃ**=ನೀನು ವ್ಯಚಶ್ಛಂದಳು; **ಸಿಂಧುಃ ಛಂದಃ**=ನೀನು ಸಿಂಧುಛಂದಸ್ಸು; **ಸಮುದ್ರಮ್ ಛಂದಃ**=ನೀನು ಸಮುದ್ರಛಂದಸ್ಸು; **ಸಲಿಲಮ್ ಛಂದಃ**=ನೀನು ಸಲಿಲ ಛಂದಸ್ಸು.

---

ನೀನು ನಾಶಪಡಿಸದವಳು.

---

* ಪ್ರತಿ ಮಂತ್ರದ ಅರ್ಥದಲ್ಲಿಯೂ ನೀನು ದೇವಛಂದಸವಾದ ಉಕ್ತರೂಪಳು. ನಿನ್ನನ್ನು ಉಪಧಾನ ಮಾಡು ತ್ತೇನೆ ಎಂದು ಅನ್ವಯಿಸಿಕೊಳ್ಳಬೇಕು.

ಸಂಯಚ್ಛಂದೋ ವಿಯಚ್ಛಂದೋ ಬೃಹಚ್ಛಂದೋ ರಥಂತರಂ ಛಂದೋ ನಿಕಾಯಶ್ಛಂದೋ ವಿವಧಶ್ಛಂದೋ ಗಿರಶ್ಛಂದೋ ಭ್ರಜಶ್ಛಂದಃ ಸಷ್ಟುಪ್ಛಂದೋಽನುಷ್ಟುಪ್ಛಂದಃ ಕಕುಚ್ಛಂದಸ್ತ್ರಿಕಕುಚ್ಛಂದಃ

---

ಸಂಯದಿತಿ ಸಮ್-ಯತ್ । ಛಂದಃ । ವಿಯದಿತಿ ವಿ-ಯತ್ । ಛಂದಃ । ಬೃಹತ್ । ಛಂದಃ । ರಥಂತರಮಿತಿ ರಥಮ್-ತರಮ್ । ಛಂದಃ । ನಿಕಾಯ ಇತಿ ನಿ-ಕಾಯಃ । ಛಂದಃ । ವಿವಧ ಇತಿ ವಿ-ವಧಃ । ಛಂದಃ । ಗಿರಃ । ಛಂದಃ । ಭ್ರಜಃ । ಛಂದಃ । ಸಷ್ಟುಬಿತಿ ಸ-ಸ್ತುಪ್ । ಛಂದಃ । ಅನುಷ್ಟುಬಿತ್ಯನು-ಸ್ತುಪ್ । ಛಂದಃ । ಕಕುತ್ । ಛಂದಃ । ತ್ರಿಕಕುದಿತಿ ತ್ರಿ-ಕಕುತ್ । ಛಂದಃ ।

---

**ಸಂಯತ್ ಛಂದಃ**=ನೀನು ಸಂಯತ್ ಛಂದಸ್ಸು; **ವಿಯತ್ ಛಂದಃ**=ನೀನು ವಿಯತ್ ಛಂದಸ್ಸು; **ಬೃಹತ್ ಛಂದಃ**=ನೀನು ಬೃಹತ್ ಛಂದಸ್ಸು; **ರಥಂತರಮ್ ಛಂದಃ**=ನೀನು ರಥಂತರಛಂದಸ್ಸು; **ನಿಕಾಯಃ ಛಂದಃ**=ನೀನು ನಿಕಾಯಛಂದಸ್ಸು; **ವಿವಧಃ ಛಂದಃ**=ನೀನು ವಿವಧಛಂದಸ್ಸು; **ಗಿರಃ ಛಂದಃ**=ನೀನು ಗಿರಛಂದಸ್ಸು; **ಭ್ರಜಃ ಛಂದಃ**=ನೀನು ಭ್ರಜಛಂದಸ್ಸು; **ಸಷ್ಟುಪ್ ಛಂದಃ**=ನೀನು ಸಷ್ಟುಪ್‌ಛಂದಸ್ಸು; **ಅನುಷ್ಟುಪ್ ಛಂದಃ**=ನೀನು ಅನುಷ್ಟುಪ್‌ಛಂದಸ್ಸು; **ಕಕುತ್ ಛಂದಃ**=ನೀನು ಕಕುತ್ ಛಂದಸ್ಸು; **ತ್ರಿಕಕುತ್ ಛಂದಃ**=ನೀನು ತ್ರಿಕಕುತ್‌ಛಂದಸ್ಸು;

---

ಮುಂದಿನ ಇಷ್ಟಕೆಗಳು ವಿರಾಜೇಷ್ಟಕೆಗಳು. ಇವು ನಲವತ್ತು. ನಾಲ್ಕು ದಿಕ್ಕುಗಳಲ್ಲಿ ಒಂದೊಂದು ದಿಕ್ಕಿನಲ್ಲಿ ಹತ್ತು ಇಷ್ಟಕೆಗಳನ್ನು ಅಡ್ಡಡ್ಡಲಾಗಿ ಉಪಧಾನ ಮಾಡಬೇಕು. **'ದಶಾಕ್ಷರಾ ವಿರಾಟ್'** ಎಂಬ ಶ್ರುತಿವಚನದಂತೆ ವಿರಾಟ್ ಶಬ್ದವು ಹತ್ತು ಎಂಬ

ಕಾವ್ಯಂ ಛಂದೋಽಙ್ಕುಪಂ ಛಂದಃ[(೨೭)]ಪದಪಙ್ಕ್ತಿ
ಶ್ಛಂದೋಽಕ್ಷರಪಙ್ಕ್ತಿಶ್ಛಂದೋ ವಿಷ್ಟಾರಪಙ್ಕ್ತಿಶ್ಛಂದಃ ಕ್ಷುರೋ
ಭೃಜ್ವಾಞ್ಛಂದಃ ಪ್ರಚ್ಛಚ್ಛಂದಃ ಪಕ್ಷಶ್ಛಂದ ಏವಶ್ಛಂದೋ
ವರಿವಶ್ಛಂದೋ ವಯಶ್ಛಂದೋ ವಯಸ್ಕೃಚ್ಛಂದೋ

---

ಕಾವ್ಯಮ್ । ಛಂದಃ । ಅಙ್ಕುಪಮ್ । ಛಂದಃ । (೨೭) । ಪದಪಙ್ಕ್ತಿರಿತಿ ಪದ-ಪಙ್ಕ್ತಿಃ । ಛಂದಃ । ಅಕ್ಷರಪಙ್ಕ್ತಿರಿತ್ಯಕ್ಷರ-ಪಙ್ಕ್ತಿಃ । ಛಂದಃ । ವಿಷ್ಟಾರಪಙ್ಕ್ತಿರಿತಿ ವಿಷ್ಟಾರ-ಪಙ್ಕ್ತಿಃ । ಛಂದಃ । ಕ್ಷುರಃ । ಭೃಜ್ವಾನ್ । ಛಂದಃ । ಪ್ರಚ್ಛತ್ । ಛಂದಃ । ಪಕ್ಷಃ । ಛಂದಃ । ಏವಃ । ಛಂದಃ । ವರಿವಃ । ಛಂದಃ । ವಯಃ । ಛಂದಃ । ವಯಸ್ಕೃದಿತಿ ವಯಃ-ಕೃತ್ । ಛಂದಃ ।

---

**ಕಾವ್ಯಮ್ ಛಂದಃ**=ನೀನು ಕಾವ್ಯಛಂದಸ್ಸು; **ಅಙ್ಕುಪಮ್ ಛಂದಃ**=ನೀನು ಅಂಕುಪ ಛಂದಸ್ಸು; **ಪದಪಙ್ಕ್ತಿಃ ಛಂದಃ**=ನೀನು ಪದಪಂಕ್ತಿಛಂದಸ್ಸು; **ಅಕ್ಷರಪಙ್ಕ್ತಿಃಛಂದಃ**=ನೀನು ಅಕ್ಷರಪಂಕ್ತಿಛಂದಸ್ಸು; **ವಿಷ್ಟಾರಪಙ್ಕ್ತಿಃ ಛಂದಃ**=ನೀನು ವಿಷ್ಟಾರಪಂಕ್ತಿ ಛಂದಸ್ಸು; **ಕ್ಷುರಃ ಭೃಜ್ವಾನ್ ಛಂದಃ**=ನೀನು ಕ್ಷುರೋ ಭೃಜ್ವಾನ್ ಎಂಬ ಛಂದಸ್ಸು; **ಪ್ರಚ್ಛತ್ ಛಂದಃ**=ನೀನು ಪ್ರಚ್ಛತ್‌ಛಂದಸ್ಸು; **ಪಕ್ಷಃ ಛಂದಃ**=ನೀನು ಪಕ್ಷಛಂದಸ್ಸು; ***ಏವಃ ಛಂದಃ**=ನೀನು ಏವಛಂದಸ್ಸು; ***ವರಿವಃ ಛಂದಃ**=ನೀನು ವರಿವಛಂದಸ್ಸು; **ವಯಃ ಛಂದಃ**=ನೀನು ವಯಛಂದಸ್ಸು; **ವಯಸ್ಕೃತ್ ಛಂದಃ**=ನೀನು ವಯಸ್ಕೃತ್ ಛಂದಸ್ಸು.

---

ಸಂಖ್ಯೆಗೆ ವಾಚಕವಾಗಿದೆ.

---

* ಹಿಂದೆ ಹೇಳಿದ ಛಂದಸ್ಸಿಗಿಂತಲೂ ಕೊಂಚ ಭೇದವಿರಬಹುದು. ಉಪಜಾತಿವೃತ್ತವೂ ಲೋಕದಲ್ಲಿ ಹೀಗೆ ಇದೆ.

ವಿಶಾಲಂ ಛಂದೋ ವಿಷ್ಪರ್ಧಾಶ್ಛಂದಶ್ಛದಿಶ್ಛಂದೋ

ದೂರೋಹಣಂ ಛಂದಸ್ತಂದ್ರಂ ಛಂದೋಽಙ್ಕಾಙ್ಕಂ

ಛಂದಃ ॥ ೨೮–12 ॥

[ಅಸ್ಯಙ್ಕುಪಂ ಛಂದಸ್ತ್ರಯಸ್ತ್ರಿಗ್‍ಂಶಚ್ಚ ॥]

---

ವಿಶಾಲಮಿತಿ ವಿ–ಶಾಲಮ್ । ಛಂದಃ । ವಿಷ್ಪರ್ಧಾ ಇತಿ ವಿ–ಸ್ಪರ್ಧಾಃ । ಛಂದಃ । ಛದಿಃ । ಛಂದಃ । ದೂರೋಹಣಮಿತಿ ದುಃ–ರೋಹಣಮ್ । ಛಂದಃ । ತಂದ್ರಮ್ । ಛಂದಃ । ಅಙ್ಕಾಙ್ಕಮ್ । ಛಂದಃ ॥ (೨೮) ॥

---

**ವಿಶಾಲಮ್ ಛಂದಃ**=ನೀನು ವಿಶಾಲಛಂದಸ್ಸು; **ವಿಷ್ಪರ್ಧಾಃ ಛಂದಃ**=ನೀನು ವಿಷ್ಪರ್ಧಾಛಂದಸ್ಸು; **ಛದಿಃ ಛಂದಃ**=ನೀನು ಛದಿಛಂದಸ್ಸು; **ದೂರೋಹಣಮ್ ಛಂದಃ**=ನೀನು ದೂರೋಹಣಛಂದಸ್ಸು; **ತಂದ್ರಮ್ ಛಂದಃ**=ನೀನು ತಂದ್ರ ಛಂದಸ್ಸು; **ಅಙ್ಕಾಙ್ಕಮ್ ಛಂದಃ**=ನೀನು ಅಂಕಾಂಕ ಛಂದಸ್ಸು. ನಿನ್ನನ್ನು ಉಪಧಾನ ಮಾಡುತ್ತೇನೆ.

---

ಈ ವಿರಾಜೇಷ್ಟಕೆಗಳನ್ನು ಛಂದೋರೂಪವಾಗಿ ಸ್ತುತಿಸಲಾಗಿದೆ. ಈ ಛಂದಸ್ಸುಗಳು ದೇವಛಂದಸ್ಸುಗಳು. ಕೆಲವು ಸಂಜ್ಞೆಗಳು ಲೋಕದಲ್ಲಿಯೂ ಇವೆ.

ಛಂದಸ್ಸುಗಳ ವಿಷಯದಲ್ಲಿ **'ಮಾ ಛಂದಃ'** ಎಂಬ ಹಿಂದಿನ ಏಳನೆಯ ಅನುವಾಕದಲ್ಲಿ ತಿಳಿಸಿರುವುದನ್ನು ಗಮನಿಸಬಹುದು.

---

## ವಿನಿಯೋಗಸಂಗ್ರಹ

ಪಂಚಮ್ಯಾಂ ತು ಚಿತಾವಗ್ನೇ1-5 ಹ್ಯಸಪತ್ನಾಸ್ತು ಪಂಚ ಚ ।
6-45 ಏವಶ್ಚತ್ವಾರಿಂಶದುಕ್ತಾ ವಿರಾಜೋ ದಿಕ್ಷು ವಕ್ರಗಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–45

## ॥ ತ್ರಯೋದಶೋಽನುವಾಕಃ ॥

ಅಗ್ನಿರ್ವೃತ್ರಾಣಿ ಜಂಘನದ್ದ್ರವಿಣಸ್ಯುರ್ವಿಪನ್ಯಯಾ ।

ಸಮಿದ್ಧಃ ಶುಕ್ರ ಆಹುತಃ ॥

---

ಅಗ್ನಿಃ । ವೃತ್ರಾಣಿ । ಜಂಘನತ್ । ದ್ರವಿಣಸ್ಯುಃ । ವಿಪನ್ಯಯೇತಿ ವಿ-ಪನ್ಯಯಾ ॥

ಸಮಿದ್ಧ ಇತಿ ಸಮ್-ಇದ್ಧಃ । ಶುಕ್ರಃ । ಆಹುತ ಇತ್ಯಾ-ಹುತಃ ॥

---

ಹನ್ನೆರಡನೆಯ ಅನುವಾಕದಲ್ಲಿ ಅಸಪತ್ನೇಷ್ಟಕೋಪಧಾನಾದಿಮಂತ್ರಗಳು ಉಕ್ತವಾಗಿವೆ. ಈ ಹದಿಮೂರನೆಯ ಅನುವಾಕದಲ್ಲಿ ಚಾತುರ್ಮಾಸ್ಯೇಷ್ಟಿಯ ತೃತೀಯ ಪರ್ವವಾದ ಸಾಕಮೇಧಪರ್ವದ 'ಅಗ್ನಯೇಽನೀಕವತೇ' ಮೊದಲಾದ ಯಾಗಗಳ ಯಾಜ್ಯಾ-ಪುರೋನುವಾಕ್ಯೆಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
| --- | --- |
| ಅಗ್ನಿರ್ವೃತ್ರಾಣಿ...ಆಹುತಃ ॥ | ಮೊದಲನೆಯ ಆಗ್ನೇಯಾಜ್ಯಭಾಗದ ಪುರೋನುವಾಕ್ಯೆ. |

---

▲ **ಅಗ್ನಿಃ**=ಅಗ್ನಿದೇವನು; **ವೃತ್ರಾಣಿ**=ಕರ್ಮಪ್ರತಿಬಂಧಕವಾದ ಪಾಪಗಳನ್ನು; **ಜಂಘನತ್**=ಹೋಗಲಾಡಿಸುತ್ತಾನೆ. **ವಿಪನ್ಯಯಾ**=[ನಾವು ಮಾಡಿದ] ವಿಶಿಷ್ಟವಾದ ಸ್ತುತಿಯಿಂದ [ಪ್ರಸನ್ನನಾಗಿ]; **ದ್ರವಿಣಸ್ಯುಃ**=ನಮಗೆ ಧನವನ್ನು ಕೊಡಲು ಇಚ್ಛಿಸುವವನು. **ಸಮಿದ್ಧಃ**=[ನಮ್ಮಿಂದ] ಪ್ರಜ್ವಾಲಿತನಾದವನು. **ಶುಕ್ರಃ**=ಪ್ರಕಾಶಮಾನನು. **ಆಹುತಃ**=[ನಮ್ಮಿಂದ] ಆಹ್ವಾನಿತನಾಗಿರುತ್ತಾನೆ.

ತ್ವಗ್ಂ ಸೋಮಾಸಿ ಸತ್ಪತಿಸ್ತ್ವಗ್ಂ ರಾಜೋತ ವೃತ್ರಹಾ । ತ್ವಂ ಭದ್ರೋ ಅಸಿ ಕ್ರತುಃ ॥ ಭದ್ರಾ ತೇ ಅಗ್ನೇ ಸ್ವನೀಕ ಸಂದೃಗ್ಘೋರಸ್ಯ ಸತೋ ವಿಷುಣಸ್ಯ ಚಾರುಃ ।

---

ತ್ವಮ್ । ಸೋಮ । ಅಸಿ । ಸತ್ಪತಿರಿತಿ ಸತ್-ಪತಿಃ । ತ್ವಮ್ । ರಾಜಾ । ಉತ । ವೃತ್ರಹೇತಿ ವೃತ್ರ-ಹಾ ॥ ತ್ವಮ್ । ಭದ್ರಃ । ಅಸಿ । ಕ್ರತುಃ ॥ ಭದ್ರಾ । ತೇ । ಅಗ್ನೇ । ಸ್ವನೀಕೇತಿ ಸು-ಅನೀಕ । ಸಂದೃಗಿತಿ ಸಮ್-ದೃಕ್ । ಘೋರಸ್ಯ । ಸತಃ । ವಿಷುಣಸ್ಯ । ಚಾರುಃ ॥

---

| ಮಂತ್ರ | ವಿನಿಯೋಗ |
|---|---|
| ತ್ವಗ್ಂ ಸೋಮ...ಅಸಿ ಕ್ರತುಃ ॥ | ಎರಡನೆಯ ಆಜ್ಯಭಾಗದ ಪುರೋನುವಾಕ್ಯ. |
| ಭದ್ರಾ ತೇ...ಆ ಧುಃ ॥ | ಪ್ರಧಾನಯಾಗವಾದ ಅನೀಕವದಗ್ನಿಯಾಗದ ಪುರೋನುವಾಕ್ಯ. |

---

▲ **ಸೋಮ**=ಹೇ! ಸೋಮದೇವನೇ!; **ತ್ವಮ್**=ನೀನು; **ಸತ್ಪತಿಃ ಅಸಿ**=ಚೆನ್ನಾಗಿ ಮಾಡಿರುವ ಕರ್ಮಗಳ ಪಾಲಕನಾಗಿದ್ದೀಯೆ. **ತ್ವಮ್ ರಾಜಾ**=ನೀನು ಪ್ರಕಾಶಮಾನ ನಾಗಿದ್ದೀಯೆ. **ಉತ**=ಮತ್ತು; **ವೃತ್ರಹಾ**=ಪಾಪಪರಿಹಾರಕನೂ ಆಗಿರುತ್ತೀಯೆ. **ತ್ವಮ್**=ನೀನು; **ಭದ್ರಃ**=ಮಂಗಳಕರವಾದ; **ಕ್ರತುಃ ಅಸಿ**=ಯಾಗನಿಷ್ಪಾದಕನೂ ಆಗಿರುತ್ತೀಯೆ. [ನೀನು ನಮ್ಮನ್ನು ಅನುಗ್ರಹಿಸು]. ▲ **ಅಗ್ನೇ ಸ್ವನೀಕ**=[ಜ್ವಾಲಾರೂಪವಾದ] ಒಳ್ಳೆಯ ಸೇನೆಯನ್ನು ಹೊಂದಿರುವ ಅಗ್ನಿದೇವನೇ! **ತೇ**=ನಿನ್ನ [ಚರಿತ್ರಗಳು] **ಭದ್ರಾ**=ಮಂಗಳಕರವಾಗಿವೆ; [ನೀನು] **ಸಂದೃಕ್**=[ಯಜಮಾನಾದಿಗಳನ್ನು] ಚೆನ್ನಾಗಿ ನೋಡಿಕೊಳ್ಳುವೆ/[ಯಜಮಾನಾದಿಗಳಿಂದ] ಚೆನ್ನಾಗಿ ನೋಡಿಕೊಳ್ಳಲ್ಪಡುವೆ. **ಘೋರಸ್ಯ ಸತಃ**=ಉಗ್ರವಾಗಿರುವ; **ವಿಷುಣಸ್ಯ**=ಸುತ್ತಲೂ ವ್ಯಾಪಿಸಿರುವ ಜ್ವಾಲೆಯ; **ಚಾರುಃ**=ಚೆನ್ನಾದ ಪ್ರವರ್ತಕನು.

ನ ಯತ್ತೇ ಶೋಚಿಸ್ತಮಸಾ ವರಂತ ನ ಧ್ವಸ್ಮಾನಸ್ತನುವಿ ರೇಪ ಆ ಧುಃ ॥ ಭದ್ರಂ ತೇ ಅಗ್ನೇ ಸಹಸಿನ್ನನೀಕಮುಪಾಕ ಆ ರೋಚತೇ ಸೂರ್ಯಸ್ಯ ॥ [(೨೯)]

---

ನ । ಯತ್ । ತೇ । ಶೋಚಿಃ । ತಮಸಾ । ವರಂತ । ನ । ಧ್ವಸ್ಮಾನಃ । ತನುವಿ । ರೇಪಃ । ಏತಿ । ಧುಃ ॥ ಭದ್ರಮ್ । ತೇ । ಅಗ್ನೇ । ಸಹಸಿನ್ । ಅನೀಕಮ್ । ಉಪಾಕೇ । ಏತಿ । ರೋಚತೇ । ಸೂರ್ಯಸ್ಯ ॥ (೨೯) ।

---

| ಮಂತ್ರ | ವಿನಿಯೋಗ |
|---|---|
| ಭದ್ರಂ ತೇ...ಅನ್ನಮ್ ॥ | ಅನೀಕವದಗ್ನಿಯ ಹವಿಸ್ಸಿನ ಯಾಜ್ಯೆ. |

---

**ತೇ**=ನಿನ್ನ; **ಯತ್ ಶೋಚಿಃ**=ಪ್ರಕಾಶವಿದೆಯೋ [ಅದು] **ತಮಸಾ**=ಕತ್ತಲಿನಿಂದ/ಹೊಗೆಯಿಂದ; **ನ ವರಂತ**=ವ್ಯಾಪ್ತವಾಗದಿರಲಿ. **ಧ್ವಸ್ಮಾನಃ**=ಯಾಗಧ್ವಂಸ ಮಾಡುವ ರಾಕ್ಷಸರು; **ತನುವಿ**=ನಮ್ಮ ದೇಹದಲ್ಲಿ; **ರೇಪಃ**=ಪ್ರಹಾರರೂಪವಾದ ಪಾಪವನ್ನು; **ನ ಆ ಧುಃ**=ಸಂಪಾದಿಸದಿರಲಿ/ಮಾಡದಿರಲಿ. 🔔 **ಸಹಸಿನ್ ಅಗ್ನೇ**=ಬಲವಂತನಾದ ಅಗ್ನಿಯೇ! **ಸೂರ್ಯಸ್ಯ**=ಸೂರ್ಯಸದೃಶನಾದ; **ತೇ**=ನಿನ್ನ; **ಭದ್ರಮ್**=ಮಂಗಳ ಕರವಾದ; **ಅನೀಕಮ್**=ಜ್ವಾಲಾರೂಪವಾಗಿರುವ ಸೇನೆಯು; **ಉಪಾಕೇ**=ಸಮೀಪ ದಲ್ಲಿ; **ಆ ರೋಚತೇ**=ಪ್ರಕಾಶಿಸುತ್ತದೆ.

---

ಅಗ್ನಿದೇವನು ಕರ್ಮಕ್ಕೆ ಪ್ರತಿಬಂಧಕವಾದ ಪಾಪಗಳನ್ನು ಹೋಗಲಾಡಿಸುತ್ತಾನೆ. ನಮ್ಮ ಸ್ತೋತ್ರದಿಂದ ಸುಪ್ರೀತನಾಗಿ ನಮಗೆ ಐಶ್ವರ್ಯವನ್ನು ನೀಡಬಯಸುತ್ತಾನೆ. ನಮ್ಮಿಂದ ಆಜ್ಯಾದಿಗಳ ಆಹುತಿಗಳಿಂದ ಆರಾಧಿತನಾಗಿರುತ್ತಾನೆ. ಇಂತಹ ಅಗ್ನಿಯು ನಮ್ಮನ್ನು ಅನುಗ್ರಹಿಸಲಿ.

ಹೇ! ಸೋಮದೇವನೇ! ನೀನು ಕರ್ಮಗಳ ಪಾಲಕನಾಗಿದ್ದೀಯೆ. ನೀನು ಪ್ರಕಾಶಮಾನನೂ,

ರುಶದ್ದೃಶೇ ದದೃಶೇ ನಕ್ತಯಾ ಚಿದರೂಕ್ಷಿತಂ ದೃಶ ಆ ರೂಪೇ ಅನ್ನಮ್ ॥ ಸೈನಾಽನೀಕೇನ ಸುವಿದತ್ರೋ ಅಸ್ಮೇ ಯಷ್ಟಾ ದೇವಾಗ್ಂ ಆಯಜಿಷ್ಠಃ ಸ್ವಸ್ತಿ ।

---

ರುಶತ್ । ದೃಶೇ । ದದೃಶೇ । ನಕ್ತಯಾ । ಚಿತ್ । ಅರೂಕ್ಷಿತಮ್ । ದೃಶೇ । ಏತಿ । ರೂಪೇ । ಅನ್ನಮ್ ॥ ಸಃ । ಏನಾ । ಅನೀಕೇನ । ಸುವಿದತ್ರ ಇತಿ ಸು-ವಿದತ್ರಃ । ಅಸ್ಮೇ ಇತಿ । ಯಷ್ಟಾ । ದೇವಾನ್ । ಆಯಜಿಷ್ಠ ಇತ್ಯಾ-ಯಜಿಷ್ಠಃ । ಸ್ವಸ್ತಿ ॥

---

| ಮಂತ್ರ | ವಿನಿಯೋಗ |
| --- | --- |
| ಸೈನಾನೀಕೇನ...ದಿದೀಹಿ ॥ | ಈ ಯಾಗಕ್ಕೆ ವಿಕಲ್ಪಿತವಾದ ಮತ್ತೊಂದು ಯಾಜ್ಯೆ. |

---

**ನಕ್ತಯಾ ಚಿತ್**=ರಾತ್ರಿಯಲ್ಲಿಯೂ ಕೂಡ; **ರುಶತ್**=ಹಿಂಸೆಯನ್ನು ಮಾಡುವ ಸರ್ಪಾದಿಗಳನ್ನು; **ದೃಶೇ**=[ಮಾರ್ಗದಲ್ಲಿ] ನೋಡಲು; **ದದೃಶೇ**=[ಪ್ರಾಣಿಗಳಿಗೆ] ಕಾಣಿಸುತ್ತದೆ; **ರೂಪೇ**=ಎದುರಿಗಿರುವ [ಪಾತ್ರೆಯಲ್ಲಿ] **ಅರೂಕ್ಷಿತಮ್**=ಹಿಂಸೆ ಮಾಡುವ ನೊಣ ಮುಂತಾದವು ಇಲ್ಲದಂತೆ; **ಅನ್ನಮ್**=ಅನ್ನವನ್ನು; **ಆ ದೃಶೇ**= ಚೆನ್ನಾಗಿ ನೋಡಲು ಪ್ರಕಾಶಿಸುತ್ತದೆ. ▲ **ಅಗ್ನೇ**=ಅಗ್ನಿದೇವನೇ! **ಸಃ**=ಪ್ರಸಿದ್ಧನಾದ ನೀನು; **ಏನಾ**=ಈ; **ಅನೀಕೇನ**=ಜ್ವಾಲಾರೂಪವಾದ ಸೇನೆಯಿಂದ; **ಸುವಿದತ್ರಃ**= ಎಲ್ಲವನ್ನೂ ಚೆನ್ನಾಗಿ ತಿಳಿದವನು; **ಅಸ್ಮೇ**=ನಮಗಾಗಿ; **ಯಷ್ಟಾ**=ಯಾಗನಿಷ್ಪಾದಕ ನಾದ ನೀನು; **ದೇವಾನ್**=ದೇವತೆಗಳಿಗೆ; **ಸ್ವಸ್ತಿ**=ತೊಂದರೆಯು ಇಲ್ಲದಂತೆ/ಕ್ಷೇಮ ವಾಗಿರುವಂತೆ; **ಆಯಜಿಷ್ಠಃ**=ಉದ್ದೇಶಿಸಿ ಯಾಗವನ್ನು ಮಾಡಲು ಸಾಧನವಾದವನು.

---

ಪಾಪನಿವಾರಕನೂ ಆಗಿರುವೆ. ನೀನು ಮಂಗಳಕರವಾದ ಯಾಗನಿಷ್ಪಾದಕನು. ನೀನು ನಮ್ಮನ್ನು ಹರಸು.

ಎಲೈ! ಅಗ್ನಿಯೇ! ನೀನು ಮಂಗಳಕರವಾದ ಜ್ವಾಲಾರೂಪವಾದ ಸೈನ್ಯವುಳ್ಳವನು.

ಅದಬ್ಧೋ ಗೋಪಾ ಉತ ನಃ ಪರಸ್ಪಾ ಅಗ್ನೇ ದ್ಯುಮದುತ ರೇವದ್ದಿದೀಹಿ ॥ ಸ್ವಸ್ತಿ ನೋ ದಿವೋ ಅಗ್ನೇ ಪೃಥಿವ್ಯಾ ವಿಶ್ವಾಯುರ್ಧೇಹಿ ಯಜಥಾಯ ದೇವ । ಯತ್ಸೀಮಹಿ ದಿವಿಜಾತ ಪ್ರಶಸ್ತಂ

---

ಅದಬ್ಧಃ । ಗೋಪಾ ಇತಿ ಗೋ-ಪಾಃ । ಉತ । ನಃ । ಪರಸ್ಪಾ ಇತಿ ಪರಃ-ಪಾಃ । ಅಗ್ನೇ । ದ್ಯುಮದಿತಿ ದ್ಯು-ಮತ್ । ಉತ । ರೇವತ್ । ದಿದೀಹಿ ॥ ಸ್ವಸ್ತಿ । ನಃ । ದಿವಃ । ಅಗ್ನೇ । ಪೃಥಿವ್ಯಾಃ । ವಿಶ್ವಾಯುರಿತಿ ವಿಶ್ವ-ಆಯುಃ । ಧೇಹಿ । ಯಜಥಾಯ । ದೇವ ॥ ಯತ್ । ಸೀಮಹಿ । ದಿವಿಜಾತೇತಿ ದಿವಿ-ಜಾತ । ಪ್ರಶಸ್ತಮಿತಿ ಪ್ರ-ಶಸ್ತಮ್ ।

---

| ಮಂತ್ರ | ವಿನಿಯೋಗ |
|---|---|
| ಸ್ವಸ್ತಿ ನೋ...ಚಿತ್ರಮ್ ॥ | ಈ ಹವಿಸ್ಸಿನ ಸ್ವಿಷ್ಟಕೃದ್ಯಾಗದ ಪುರೋನುವಾಕ್ಯೆ. |

---

**ಅದಬ್ಧಃ**=ಯಾರಿಂದಲೂ ಹಿಂಸಿಸಲು ಅಶಕ್ಯನು; **ಗೋಪಾಃ**=ಯಜ್ಞರಕ್ಷಕನು; **ಉತ**=ಮತ್ತು; **ನಃ**=ನಮ್ಮನ್ನು; **ಪರಸ್ಪಾಃ**=ಅತಿಶಯವಾಗಿ ಪಾಲಿಸುವವನು; **ದ್ಯುಮತ್**=ಪ್ರಕಾಶಮಾನವಾದ/ವೃದ್ಧಿಹೊಂದುವ; **ಉತ**=ಮತ್ತು; **ರೇವತ್**=ಬಹುಧನಯುಕ್ತವಾದ ಗೃಹಕ್ಷೇತ್ರಾದಿಗಳನ್ನು; **ದಿದೀಹಿ**=ಪ್ರಕಾಶಿಸುವಂತೆ ಮಾಡು. ▲ **ದಿವಿಜಾತ**=ಸ್ವರ್ಗದಲ್ಲಿ ಹುಟ್ಟಿರುವ; **ಅಗ್ನೇ ದೇವ**=ಅಗ್ನಿದೇವನೇ! **ಯಜಥಾಯ**=ಯಾಗಗಳನ್ನು ಮಾಡುವುದಕ್ಕಾಗಿ; **ನಃ**=ನಮಗೆ; **ದಿವಃ**=ದ್ಯುಲೋಕದಲ್ಲಿ; **ಪೃಥಿವ್ಯಾಃ**=ಭೂಲೋಕದಲ್ಲಿ; **ಸ್ವಸ್ತಿ**=ಕ್ಷೇಮಯುಕ್ತವಾದ; **ವಿಶ್ವಾಯುಃ**=ಸಂಪೂರ್ಣ ಆಯುಸ್ಸನ್ನು; **ಧೇಹಿ**=ಉಂಟುಮಾಡು. **ಯತ್**=ಯಾವ; **ಪ್ರಶಸ್ತಮ್**=ಶ್ರೇಷ್ಠವಾದ; **ದ್ರವಿಣಮ್**=ಧನವನ್ನು; **ಸೀಮಹಿ**=ಸೇವಿಸುತ್ತೇವೆಯೋ;

ತದಸ್ಮಾಸು ದ್ರವಿಣಂ ಧೇಹಿ ಚಿತ್ರಮ್ ॥ ಯಥಾ ಹೋತ
ಮನುಷೋ [ರ್ಮನುಷಃ (೩೦)] ದೇವತಾತಾ ಯಜ್ಞೇಭಿಃ
ಸೂನೋ ಸಹಸೋ ಯಜಾಸಿ। ಏವಾ ನೋ ಅದ್ಯ ಸಮನಾ
ಸಮಾನಾನುಶನ್ನಗ್ನ ಉಶತೋ ಯಕ್ಷಿ ದೇವಾನ್ ॥

---

ತತ್ । ಅಸ್ಮಾಸು । ದ್ರವಿಣಮ್ । ಧೇಹಿ । ಚಿತ್ರಮ್ ॥ ಯಥಾ । ಹೋತಃ । ಮನುಷಃ । (೩೦) । ದೇವತಾತೇತಿ ದೇವ-ತಾತಾ । ಯಜ್ಞೇಭಿಃ । ಸೂನೋ ಇತಿ । ಸಹಸಃ । ಯಜಾಸಿ ॥ ಏವಾ । ನಃ । ಅದ್ಯ । ಸಮನಾ । ಸಮಾನಾನ್ । ಉಶನ್ । ಅಗ್ನೇ । ಉಶತಃ । ಯಕ್ಷಿ । ದೇವಾನ್ ॥

---

| ಮಂತ್ರ | ವಿನಿಯೋಗ |
|---|---|
| ಯಥಾ ಹೋತಃ...ದೇವಾನ್ ॥ | ಸ್ವಿಷ್ಟಕೃದ್ಯಾಗದ ಯಾಜ್ಯಾನುವಾಕ್ಯೆ. |

---

ತತ್ ಚಿತ್ರಮ್=ಮಣಿಮುಕ್ತಾದಿ ಬಹುವಿಧವಾದ; ದ್ರವಿಣಮ್=ಧನವನ್ನು; ಅಸ್ಮಾಸು ಧೇಹಿ=ನಮಗೆ ಕೊಡು. ▲ ಸಹಸಃ ಸೂನೋ=ಮಂಥನಬಲದಿಂದ ಉತ್ಪನ್ನನಾದ; ಹೋತಃ=ದೇವತೆಗಳನ್ನೂ ಆಹ್ವಾನಿಸುವ; ಅಗ್ನೇ=ಅಗ್ನಿದೇವನೇ! ಯಥಾ=ಹೇಗೆ; ಮನುಷಃ=ಮನುಷ್ಯರನ್ನು [ಪಾಲಿಸುತ್ತೀಯೋ] ಯಜ್ಞೇಭಿಃ=ಯಾಗಗಳಿಂದ; ದೇವತಾತಾ=ದೇವತೆಗಳನ್ನು; ಯಥಾ=ಹೇಗೆ; ಯಜಾಸಿ=ಪೂಜಿಸುತ್ತೀಯೋ; ಏವಾ =ಹಾಗೆಯೇ; ನಃ=ನಮಗೆ; ಅದ್ಯ=ಈಗ; ಸಮನಾ=ದೇವತೆಗಳಿಗೆ ಸಮಾನನಾದ; ಉಶನ್=[ನಮ್ಮಲ್ಲಿ] ಆಸ್ಥೆಯುಳ್ಳ ನೀನು; ಉಶತಃ=ನಿನ್ನಲ್ಲಿ ಪ್ರೀತಿಯುಳ್ಳ; ಸಮಾನಾನ್ ದೇವಾನ್=ದೇವತೆಗಳನ್ನು; ಯಕ್ಷಿ=ಯಾಗದಿಂದ ಆರಾಧಿಸುತ್ತೀಯೆ.

# ಅಗ್ನಿಮೀಡೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಮ್ ।
# ಹೋತಾರಗ್ಂ ರತ್ನಧಾತಮಮ್ ॥

---

ಅಗ್ನಿಮ್ । ಈಡೇ । ಪುರೋಹಿತಮಿತಿ ಪುರಃ-ಹಿತಮ್ । ಯಜ್ಞಸ್ಯ । ದೇವಮ್ । ಋತ್ವಿಜಮ್ ॥ ಹೋತಾರಮ್ । ರತ್ನಧಾತಮಮಿತಿ ರತ್ನ-ಧಾತಮಮ್ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನಿಮ್...ರತ್ನಧಾತಮಮ್ ॥ | ಸಾಂತಪನಯಾಗದ ಪ್ರಥಮ ಆಜ್ಯಭಾಗದ ಪುರೋನುವಾಕ್ಯೆ. |

---

**ಪುರೋಹಿತಮ್**=ಪೂರ್ವಭಾಗದಲ್ಲಿ ಆಹವನೀಯಸ್ಥಾನದಲ್ಲಿರುವ; **ದೇವಮ್**=ಪ್ರಕಾಶಮಾನನಾದ; **ಯಜ್ಞಸ್ಯ**=ಯಾಗದ; **ಋತ್ವಿಜಮ್**=ಋತ್ವಿಕ್ತ್ವವನ್ನು ಸಂಪಾದಿಸಿಕೊಡುವ; **ಹೋತಾರಮ್**=ದೇವತೆಗಳನ್ನು ಆಹ್ವಾನಿಸುವ; **ರತ್ನಧಾತಮಮ್**=ರತ್ನಾದಿಯಾದ ಶ್ರೇಷ್ಠವಸ್ತುಗಳನ್ನು ಕೊಡುವ; **ಅಗ್ನಿಮ್**=ಅಗ್ನಿದೇವನನ್ನು; **ಈಡೇ**=ಸ್ತುತಿಸುತ್ತೇನೆ.

---

ನೀನು ಯಜಮಾನರನ್ನು ಚೆನ್ನಾಗಿ ನೋಡಿಕೊಳ್ಳುವೆ. ಯಜಮಾನರು ನಿನ್ನನ್ನು ಚೆನ್ನಾಗಿ ನೋಡಿಕೊಳ್ಳುತ್ತಾರೆ. ನಿನ್ನ ಆಚರಣೆಯು ಮಂಗಳಕರವಾಗಿದೆ. ಉಗ್ರವಾಗಿ ಎಲ್ಲೆಲ್ಲೂ ವ್ಯಾಪಿಸಿರುವ ನಿನ್ನ ಜ್ವಾಲೆಗಳು ನಮ್ಮ ಅನಿಷ್ಟಪರಿಹಾರಕಗಳಾಗಲಿ. ನಮ್ಮನ್ನು ಹಿಂಸಿಸದಿರಲಿ. ಕತ್ತಲೆಯು ನಮ್ಮನ್ನು ವ್ಯಾಪಿಸದಿರುವಂತೆ ಮಾಡು. ನಿನ್ನನ್ನು ರಾಕ್ಷಸರು ಅಡ್ಡಿಪಡಿಸದಿರಲಿ. ನಮಗೂ ತೊಂದರೆಯನ್ನು ಉಂಟುಮಾಡದಿರಲಿ.

ಅಗ್ನಿಯು ಬಲವಂತನು. ಅವನ ಪ್ರಕಾಶವು ನಮಗೆ ಸಮೀಪದಲ್ಲಿಯೇ ದಾರಿಯನ್ನು ತೋರಿಸುತ್ತದೆ. ರಾತ್ರಿಯಲ್ಲಿ ಹಿಂಸ್ರಪ್ರಾಣಿಗಳಾದ ಸರ್ಪಾದಿಗಳನ್ನು ನೋಡುವುದಕ್ಕಾಗಿ ಅದು ಸಹಾಯಕವಾಗುತ್ತದೆ. ಅನ್ನದಲ್ಲಿ ಬಿದ್ದು ಅನ್ನವನ್ನು ಹಾಳು ಮಾಡುವ ನೊಣ ಮುಂತಾದ ಕ್ರಿಮಿಗಳನ್ನು ನೋಡಲು ನಿಮಿತ್ತವಾಗುತ್ತದೆ.

ಹೇ! ಅಗ್ನಿಯೇ! ನೀನು ಜ್ವಾಲೆಗಳಿಂದ ಎಲ್ಲವನ್ನೂ ತಿಳಿದಿರುವೆ. ದೇವತೆಗಳಿಗಾಗಿ ನಾವು ಅನುಷ್ಠಿಸುವ ಯಾಗವನ್ನು ನಿಷ್ಪಾದಿಸುವವನು ನೀನು. ನೀನು ನಮ್ಮ ರಕ್ಷಕನು.

**ವೃಷಾ ಸೋಮ ದ್ಯುಮಾಗ್ಂ ಅಸಿ ವೃಷಾ ದೇವ ವೃಷವ್ರತಃ । ವೃಷಾ ಧರ್ಮಾಣಿ ದಧಿಷೇ ॥**

ವೃಷಾ । ಸೋಮ । ದ್ಯುಮಾನಿತಿ ದ್ಯು-ಮಾನ್ । ಅಸಿ । ವೃಷಾ । ದೇವ । ವೃಷವ್ರತ ಇತಿ ವೃಷ-ವ್ರತಃ ॥ ವೃಷಾ । ಧರ್ಮಾಣಿ । ದಧಿಷೇ ॥

| ಮಂತ್ರ | ವಿನಿಯೋಗ |
| --- | --- |
| **ವೃಷಾ...ದಧಿಷೇ ॥** | ಅದೇ ಯಾಗದ ದ್ವಿತೀಯಾಜ್ಯಭಾಗದ ಪುರೋನುವಾಕ್ಯೆ. |

**ಸೋಮ ದೇವ**=ಸೋಮದೇವನೇ! [ನೀನು] **ವೃಷಾ ಅಸಿ**=ಕಾಮನೆಗಳನ್ನು ಸುರಿಸುವವನಾಗಿದ್ದೀಯೆ. **ದ್ಯುಮಾನ್** ಅಸಿ=ದೀಪ್ತಿಮಂತನೂ ಆಗಿದ್ದೀಯೆ; [ಯಾವ ಕಾರಣದಿಂದ ನೀನು]; **ವೃಷಾ**=ಕಾಮನೆಗಳನ್ನು ಸುರಿಸುವವನಾಗಿರುವೆಯೋ [ಅದಕ್ಕಾಗಿ]; **ವೃಷವ್ರತಃ**=ಕಾಮವರ್ಷಣನಿಮಿತ್ತವಾಗಿ ಕರ್ಮಗಳನ್ನು ಅಪೇಕ್ಷಿಸುತ್ತೀಯೆ. **ವೃಷಾ**=[ನೀನು] ಕಾಮನೆಗಳ ವರ್ಷಕನಾದುದರಿಂದಲೇ; **ಧರ್ಮಾಣಿ**=ಪುಣ್ಯವನ್ನು; **ದಧಿಷೇ**=ಕೊಡುವವನೂ ಆಗಿದ್ದೀಯೆ.

ನೀನು ಯಜ್ಞಪಾಲಕನು. ನಮ್ಮ ಈ ಯಾಗವನ್ನು ನಿರ್ವಿಘ್ನವಾಗಿ ಸಮಾಪ್ತಿ ಹೊಂದುವಂತೆ ಮಾಡು.

ಅಗ್ನಿದೇವನೇ! ಭೂಲೋಕದಲ್ಲಿ ನಾವು ಸುಖವಾಗಿರಲು ಮತ್ತು ಸ್ವರ್ಗವನ್ನು ಪಡೆಯುವುದಕ್ಕಾಗಿಯೂ, ಯಾಗಗಳನ್ನು ಮಾಡುವುದಕ್ಕಾಗಿಯೂ ದೀರ್ಘಾಯುಸ್ಸನ್ನು ಕೊಡು. ಸುಖವಾಗಿ ಬಾಳಲು ಬೇಕಾದ ಬಹುವಿಧವಾದ ಧನವನ್ನೂ ಕೊಡು.

ಅಗ್ನಿಯು ಅರಣಿಗಳಲ್ಲಿ ಬಲವಾದ ಮಂಥನದಿಂದ ಉತ್ಪನ್ನನಾದವನು. ಆತನು ದೇವತೆಗಳನ್ನು ಆಹ್ವಾನಿಸತಕ್ಕವನು. ಯಜ್ಞಗಳಿಂದ ಮನುಷ್ಯರನ್ನು ರಕ್ಷಿಸುವವನು. ಯಾಗಗಳಿಂದ ದೇವತೆಗಳನ್ನು ಪ್ರೀತರಾಗುವಂತೆ ಮಾಡುವವನು. ಹೀಗೆಯೇ ತನಗೆ ಸಮಾನರಾದ ದೇವತೆಗಳನ್ನು ನಮ್ಮ ಯಾಗಗಳಿಂದ ನಮ್ಮಲ್ಲಿ ಪ್ರೀತರಾಗುವಂತೆ ಮಾಡಲಿ.

**ಸಾಂತಪನಾ ಇದಗ್ಂ ಹವಿರ್ಮರುತಸ್ತಜ್ಜುಜುಷ್ಟನ ।**

**ಯುಷ್ಮಾಕೋತೀ ರಿಶಾದಸಃ ॥**

---

ಸಾಂತಪನಾ ಇತಿ ಸಾಮ್-ತಪನಾಃ । ಇದಮ್ । ಹವಿಃ । ಮರುತಃ । ತತ್ ।

ಜುಜುಷ್ಟನ ॥ ಯುಷ್ಮಾಕ । ಊತೀ । ರಿಶಾದಸ ಇತಿ ರಿಶ-ಅದಸಃ ॥

---

| ಮಂತ್ರ | ವಿನಿಯೋಗ |
|---|---|
| **ಸಾಂತಪನಾ...ರಿಶಾದಸಃ ॥** | ಸಾಂತಪನಯಾಗದ ಪ್ರಧಾನಹವಿಸ್ಸಿನ ಪುರೋನುವಾಕ್ಯೆ. |

---

**ಸಾಂತಪನಾಃ**=ಶತ್ರುಗಳನ್ನು ಚೆನ್ನಾಗಿ ಸಂತಾಪಗೊಳಿಸುವುದರಿಂದ ಸಾಂತಪನರಾಗಿರುವ; **ಮರುತಃ**=ಮರುದ್ದೇವತೆಗಳೇ! **ಇದಮ್ ಹವಿಃ**=[ಯಾವ] ಈ ಚರುರೂಪ ಹವಿಸ್ಸು [ನಿಮ್ಮದಾಗಿದೆಯೋ] **ತತ್**=ಅದನ್ನು; **ಜುಜುಷ್ಟನ**=[ನೀವು] ಸೇವಿಸಿರಿ. **ರಿಶಾದಸಃ**=ನಮ್ಮನ್ನು ಹಿಂಸಿಸುವ ದ್ರೋಹಿಗಳನ್ನು ನಾಶಪಡಿಸುವವರೇ! [ಇದು]; **ಯುಷ್ಮಾಕ**=ನಿಮ್ಮ; **ಊತೀ**=[ಹಸಿವಿನಿಂದ ನಿಮ್ಮ] ರಕ್ಷಣೆಗಾಗಿ [ಸಮರ್ಥವಾಗಲಿ].

---

ಸಾಂತಪನಯಾಗವು 'ಮರುದ್ಭ್ಯಃ ಸಾಂತಪನೇಭ್ಯೋ ಮಧ್ಯಂದಿನೇ ಚರುಮ್' ಎಂದು ವಿಹಿತವಾಗಿದೆ. ಅಲ್ಲಿಯ ಅಗ್ನಿಯ ಸ್ತೋತ್ರವಿದು.

ಪೂರ್ವಭಾಗದ ಆಹವನೀಯಸ್ಥಾನದಲ್ಲಿ ಇರುವ, ದೀಪ್ಯಮಾನನಾದ, ಯಾಗದ ಆರ್ತ್ವಿಜ್ಯವನ್ನು ಅನುಗ್ರಹಿಸುವ ದೇವತೆಗಳ ಆಹ್ವಾನಕರ್ತನಾದ, ಪ್ರಶಸ್ತವಸ್ತುಗಳನ್ನು ಈಯುವ ಅಗ್ನಿಯನ್ನು ಸ್ತುತಿಸುತ್ತೇನೆ.

ಈ ಮಂತ್ರಾರ್ಥದಲ್ಲಿ ಪುರೋಹಿತ, ದೇವ, ಈ ಪದಗಳಿಗೆ ರೂಢಿಯ ಅರ್ಥವನ್ನು ಬಿಟ್ಟು ಅವಯವಾರ್ಥದಂತೆ ವಿವರಿಸಿದ್ದಾರೆ.

ಶತ್ರುಗಳನ್ನು ಚೆನ್ನಾಗಿ ಸಂತಾಪಿಸುವುದರಿಂದ ಸಾಂತಪನರಾಗಿರುವ ಹೇ! ಮರುದ್ದೇವತೆಗಳೇ! ನೀವು ಚರುರೂಪ ಹವಿಸ್ಸನ್ನು ಸೇವಿಸಿರಿ. ಇದು ನಿಮ್ಮ ಹಸಿವೆಯ ಬಾಧೆಯನ್ನು ರಕ್ಷಿಸಲು ಸಮರ್ಥವಾಗಲಿ.

ಯೋ ನೋ ಮರ್ತೋ ವಸವೋ ದುರ್‌ಹೃಣಾಯುಸ್ತಿರಃ

ಸತ್ಯಾನಿ ಮರುತೋ [ಮರುತಃ(೩೧)]ಜಿಘಾಗ್‌ಂಸಾತ್ ।

ದ್ರುಹಃ ಪಾಶಂ ಪ್ರತಿ ಸ ಮುಚೀಷ್ಟ ತಪಿಷ್ಠೇನ ತಪಸಾ

ಹಂತನಾ ತಮ್ ॥

---

ಯಃ । ನಃ । ಮರ್ತಃ । ವಸವಃ । ದುರ್‌ಹೃಣಾಯುರಿತಿ ದುಃ–ಹೃಣಾಯುಃ । ತಿರಃ ।

ಸತ್ಯಾನಿ । ಮರುತಃ ।(೩೧)। ಜಿಘಾಗ್‌ಂಸಾತ್ ॥ ದ್ರುಹಃ । ಪಾಶಮ್ । ಪ್ರತೀತಿ । ಸಃ ।

ಮುಚೀಷ್ಟ । ತಪಿಷ್ಠೇನ । ತಪಸಾ । ಹಂತನ । ತಮ್ ॥

---

| ಮಂತ್ರ | ವಿನಿಯೋಗ |
| --- | --- |
| **ಯೋ ನೋ...ಹಂತನಾ ತಮ್ ॥** | ಸಾಂತಪನ ಪ್ರಧಾನಹವಿಸ್ಸಿನ ಯಾಜ್ಯೆ. |

---

▲ **ವಸವಃ**=ಸುಖವಾಗಿ ವಾಸಿಸುವಂತೆ ಮಾಡಬಲ್ಲ; **ಮರುತಃ**=ಮರುದ್ದೇವತೆಗಳೇ! **ಯಃ ಮರ್ತಃ**=ಯಾವ ಮನುಷ್ಯನು; **ನಃ**=ನಮ್ಮ ವಿಷಯದಲ್ಲಿ; **ದುರ್‌ಹೃಣಾಯುಃ**=ಅತ್ಯಂತಪಾಪಬುದ್ಧಿಯುಳ್ಳವನಾಗಿ; **ಸತ್ಯಾನಿ**=ಸತ್ಯವಾಗಿ [ನಿಮಗೆ ದ್ರೋಹ ಬಗೆಯುವುದಿಲ್ಲವೆಂದು ಮಾಡಿರುವ] ಪ್ರತಿಜ್ಞೆಗಳನ್ನು; **ತಿರಃ**=ತಿರಸ್ಕರಿಸಿ; **ಜಿಘಾಗ್‌ಂಸಾತ್**=ದ್ರೋಹ ಮಾಡಲು ಬಯಸುತ್ತಾನೆಯೋ; **ಸಃ ದ್ರುಹಃ**=ಆ ದ್ರೋಹಿಯು; **ಪಾಶಮ್**=ನೀವು ಹಾಕಿರುವ ಪಾಶವನ್ನು; **ಪ್ರತಿ ಮುಚೀಷ್ಟ**=ಕಂಠದಲ್ಲಿ ಧರಿಸಿರಲಿ/ಬಂಧಮುಕ್ತನಾಗದಿರಲಿ. **ತಪಿಷ್ಠೇನ ತಪಸಾ**=ಅತ್ಯಂತ ತಾಪದಿಂದ/ಬಿಸಿಯಿಂದ; **ತಮ್**=ಅವನನ್ನು; **ಹಂತನ**=ನೀವು ನಾಶಪಡಿಸಿ.

---

ಈ ಸಾಂತಪನವಿಧಿಯ ಅರ್ಥವಾದದಲ್ಲಿ ದ್ಯಾವಾಪೃಥಿವಿಗಳಲ್ಲಿ ಅಡಗಿಕೊಂಡಿರುವ ಅಸುರರನ್ನು ದೇವತೆಗಳು ಈ ಹವಿಸ್ಸಿನಿಂದ ಚೆನ್ನಾಗಿ ಸಂತಾಪಗೊಳಿಸಿ, ನಾಶಗೊಳಿ

**ಸಂವತ್ಸರೀಣಾ ಮರುತಃ ಸ್ವರ್ಕಾ ಉರುಕ್ಷಯಾಃ ಸಗಣಾ ಮಾನುಷೇಷು । ತೇಽಸ್ಮತ್ಪಾಶಾನ್ಪ್ರ ಮುಂಚನ್ತ್ವಗ್ಂಹಸಃ ಸಾಂತಪನಾ ಮದಿರಾ ಮಾದಯಿಷ್ಣವಃ ॥**

---

ಸಂವತ್ಸರೀಣಾ ಇತಿ ಸಮ್-ವತ್ಸರೀಣಾಃ । ಮರುತಃ । ಸ್ವರ್ಕಾ ಇತಿ ಸು-ಅರ್ಕಾಃ । ಉರುಕ್ಷಯಾ ಇತ್ಯುರು-ಕ್ಷಯಾಃ । ಸಗಣಾ ಇತಿ ಸ-ಗಣಾಃ । ಮಾನುಷೇಷು ॥ ತೇ । ಅಸ್ಮತ್ । ಪಾಶಾನ್ । ಪ್ರೇತಿ । ಮುಂಚಂತು । ಅಗ್ಂಹಸಃ । ಸಾಂತಪನಾ ಇತಿ ಸಾಮ್ -ತಪನಾಃ । ಮದಿರಾಃ । ಮಾದಯಿಷ್ಣವಃ ॥

---

| ಮಂತ್ರ | ವಿನಿಯೋಗ |
|---|---|
| **ಸಂವತ್ಸರೀಣಾ...ಮಾದಯಿಷ್ಣವಃ ॥** | ಸಾಂತಪನ ಪ್ರಧಾನಹವಿಸ್ಸಿನ ವಿಕಲ್ಪಿತ ಯಾಜ್ಯೆ. |

---

**ಸಂವತ್ಸರೀಣಾಃ**=[ಒಂದು ಸಲ ಮಾಡಿದ ಯಾಗದಿಂದ] ತೃಪ್ತರಾಗಿ ಸಂವತ್ಸರದ ವರೆಗೂ ರಕ್ಷಿಸುವ; **ಸ್ವರ್ಕಾಃ**=ಚೆನ್ನಾಗಿ ಪೂಜಿಸಲ್ಪಡುವ; **ಉರುಕ್ಷಯಾಃ**=ವಿಸ್ತೀರ್ಣ ವಾದ ಗೃಹವುಳ್ಳ; **ಸಗಣಾಃ**=ಏಳು ಗಣಗಳಾಗಿರುವ; **ಸಾಂತಪನಾಃ**=ಶತ್ರುಗಳನ್ನು ಸಂತಾಪಗೊಳಿಸುವ; **ಮದಿರಾಃ**=ಸಂತುಷ್ಟರಾಗಿರುವ; **ಮಾದಯಿಷ್ಣವಃ**=ನಮ್ಮನ್ನೂ ಸಂತೋಷಪಡಿಸುವ; **ಮರುತಃ**=[ಯಾವ] ಮರುದ್ದೇವತೆಗಳು ಇರುವರೋ; **ತೇ**= ಅವರು; **ಅಸ್ಮತ್**=ನಮ್ಮಿಂದ; **ಅಗ್ಂಹಸಃ**=ಅತ್ಯಂತಕ್ಲೇಶಕರವಾದ; **ಪಾಶಾನ್**= ಪಾಶಗಳನ್ನು [ತೆಗೆದು ಹಾಕಿ]; **ಮಾನುಷೇಷು**=[ನಮ್ಮ]ಶತ್ರುಜನರಲ್ಲಿ; **ಪ್ರಮುಂಚಂತು** =ಹಾಕಿ ಬಲವಾಗಿ ಬಂಧಿಸಲಿ.

---

**ಸಿದರೆಂದು ಉಕ್ತವಾಗಿದೆ.**

**ಮರುದ್ದೇವತೆಗಳು ನಮ್ಮನ್ನು ಸುಖವಾಗಿ ವಾಸಿಸುವಂತೆ ಮಾಡಬಲ್ಲವರು. ಅವರು**

ಪಿಪ್ರೀಹಿ ದೇವಾಗ್ಂ ಉಶತೋ ಯವಿಷ್ಠ ವಿದ್ವಾಗ್ಂ

ಋತೂಗ್ಂರ್‌ಋತುಪತೇ ಯಜೇಹ । ಯೇ ದೈವ್ಯಾ

ಋತ್ವಿಜಸ್ತೇಭಿರಗ್ನೇ ತ್ವಗ್ಂ ಹೋತೄಣಾಮಸ್ಯಾಯಜಿಷ್ಠಃ ॥

---

ಪಿಪ್ರೀಹಿ । ದೇವಾನ್ । ಉಶತಃ । ಯವಿಷ್ಠ । ವಿದ್ವಾನ್ । ಋತೂನ್ । ಋತುಪತ ಇತ್ಯೃತು–ಪತೇ । ಯಜ । ಇಹ ॥ ಯೇ । ದೈವ್ಯಾಃ । ಋತ್ವಿಜಃ । ತೇಭಿಃ । ಅಗ್ನೇ । ತ್ವಮ್ । ಹೋತೄಣಾಮ್ । ಅಸಿ । ಆಯಜಿಷ್ಠ ಇತ್ಯಾ–ಯಜಿಷ್ಠಃ ॥

---

| ಮಂತ್ರ | ವಿನಿಯೋಗ |
| --- | --- |
| ಪಿಪ್ರೀಹಿ...ಆಯಜಿಷ್ಠಃ ॥ | ಈ ಯಾಗದ ಸ್ವಿಷ್ಟಕೃತ್ ಹವಿಸ್ಸಿನ ಪುರೋನುವಾಕ್ಯೆ. |

---

**ಯವಿಷ್ಠ**=ಅತ್ಯಂತ ಯುವಕನಾದ; **ಋತುಪತೇ**=[ಸೂರ್ಯರೂಪದಿಂದ] ಕಾಲಕ್ಕೆ ಪಾಲಕನಾಗಿರುವ; **ಅಗ್ನೇ**=ಅಗ್ನಿದೇವನೇ! [ನೀನು] **ಋತೂನ್**=ಕಾಲವಿಶೇಷಗಳನ್ನು; **ವಿದ್ವಾನ್**=ತಿಳಿದವನಾಗಿರುತ್ತೀಯೆ. **ಉಶತಃ**=ಹವಿಸ್ಸನ್ನು ಅಪೇಕ್ಷಿಸುವ; **ದೇವಾನ್**=ದೇವತೆಗಳನ್ನು; **ಪಿಪ್ರೀಹಿ**=ಹವಿರ್ದಾನದಿಂದ ಸಂತೃಪ್ತಿಪಡಿಸು. **ಇಹ**=ತಕ್ಕುದಾದ ಈ ಕಾಲದಲ್ಲಿ; **ಯಜ**=ಯಾಗದಿಂದ ದೇವತೆಗಳನ್ನು ಪೂಜಿಸು; **ದೈವ್ಯಾಃ**=ದೇವತೆಗಳಿಗೆ ಸಂಬಂಧಿಸಿದ; **ಯೇ ಋತ್ವಿಜಃ**=[ಅಶ್ವಿನೀದೇವತೆಗಳು, ತ್ವಷ್ಟೃ ಮುಂತಾದ] ಯಾವ ಋತ್ವಿಜರಿದ್ದಾರೆಯೋ; **ತೇಭಿಃ**=ಅವರೊಡನೆ; **ಹೋತೄಣಾಮ್**=[ಈ ಯಜಮಾನನ/ಯಾಗದ] ಋತ್ವಿಜರ ಮಧ್ಯೆ; **ತ್ವಮ್**=ನೀನು; **ಆಯಜಿಷ್ಠಃ ಅಸಿ**=ಅತಿಶಯವಾಗಿ ಯಾಗ ಮಾಡುವವನಾಗಿರುವೆ.

---

**ನಮ್ಮ ಪ್ರಚ್ಛನ್ನದ್ರೋಹಿಗಳನ್ನು ಅಂದರೆ ದ್ರೋಹ ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಿ ಬಳಿಕ ದ್ರೋಹ ಮಾಡಲು ಬಯಸುವವರನ್ನು ಮರುತರು ಪಾಶದಿಂದ ಬಂಧಿಸಿ, ಸಂತಾಪಗೊಳಿಸಿ ನಾಶಪಡಿಸಲಿ.**

ಅಗ್ನೇ ಯದದ್ಯ ವಿಶೋ ಅಧ್ವರಸ್ಯ ಹೋತಃ ಪಾವಕ

[(೩೨) ಶೋಚೇ] ಶೋಚೇ ವೇಷ್ಟ್ವಗ್ಂ ಹಿ ಯಜ್ವಾ ।

ಋತಾ ಯಜಾಸಿ ಮಹಿನಾ ವಿ ಯದ್ಭೂರ್ ಹವ್ಯಾ ವಹ

ಯವಿಷ್ಠ ಯಾ ತೇ ಅದ್ಯ ॥

---

ಅಗ್ನೇ । ಯತ್ । ಅದ್ಯ । ವಿಶಃ । ಅಧ್ವರಸ್ಯ । ಹೋತಃ । ಪಾವಕ ।(೩೨)। ಶೋಚೇ । ವೇಃ । ತ್ವಮ್ । ಹಿ । ಯಜ್ವಾ ॥ ಋತಾ । ಯಜಾಸಿ । ಮಹಿನಾ । ವೀತಿ । ಯತ್ । ಭೂಃ । ಹವ್ಯಾ । ವಹ । ಯವಿಷ್ಠ । ಯಾ । ತೇ । ಅದ್ಯ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇ ಯತ್...ಅದ್ಯ ॥ | ಈ ಸಾಂತಪನಯಾಗದ ಸ್ವಿಷ್ಟಕೃದ್ಧವಿಸ್ಸಿನ ಯಾಜ್ಯೆ. |

---

▲ **ಹೋತಃ**=ಯಾಗಕರ್ತನಾದ; **ಪಾವಕ**=ಶುದ್ಧಿಗೊಳಿಸುವವನಾದ; **ಶೋಚೇ**=ಪ್ರಕಾಶಮಾನನಾದ; **ಅಗ್ನೇ**=ಸ್ವಿಷ್ಟಕೃದಗ್ನಿಯೇ! **ವಿಶಃ**=ಪ್ರವೇಶಿಸಿರುವ/ಅನುಷ್ಠಿತವಾದ; **ಅಧ್ವರಸ್ಯ**=ಯಾಗದ; **ಯತ್**=ಯಾವ ಹವಿಸ್ಸು ಇದೆಯೋ; **ಅದ್ಯ**=ಈಗ; **ವೇಃ**=ಭಕ್ಷಿಸು. **ಹಿ**=ಏತಕ್ಕೆಂದರೆ; **ತ್ವಮ್**=ನೀನು; **ಯಜ್ವಾ**=ಯಾಗಕರ್ತನಾಗಿರುವೆಯಷ್ಟೆ; **ಯವಿಷ್ಠ**=ಅತಿತರುಣನಾದ ಅಗ್ನಿಯೇ!; **ಋತಾ**=ಯಜ್ಞದಲ್ಲಿ; **ಮಹಿನಾ**=ಮಹಿಮೆಯಿಂದ; **ಯಜಾಸಿ**=ದೇವತೆಗಳನ್ನು ಯಾಗದಿಂದ ಆರಾಧಿಸುತ್ತೀಯೆ; **ಯತ್**=ಯಾವ ಕಾರಣದಿಂದ; **ವಿ ಭೂಃ**=ವಿಶಿಷ್ಟನಾಗಿದ್ದೀಯೋ [ಆ ಕಾರಣದಿಂದ]; **ಅದ್ಯ**=ಈಗ; **ತೇ**=ನಿನಗೆ/ನಿನ್ನಲ್ಲಿ; **ಯಾ ಹವ್ಯಾ**=ಯಾವ ಹವಿಸ್ಸುಗಳು[ಹುತವಾಗಿವೆಯೋ] [ಆ ಹವ್ಯಗಳನ್ನು]; **ವಹ**=[ದೇವತೆಗಳಿಗಾಗಿ] ವಹಿಸು [ಒಯ್ದು ಮುಟ್ಟಿಸು].

---

**ಚೆನ್ನಾಗಿ ಪೂಜಿಸಲ್ಪಡುವ, ಸಪ್ತಗಣಗಳಿಂದ ಕೂಡಿರುವ, ಶತ್ರುಗಳನ್ನು ನಾಶಪಡಿಸುವ,**

ಅಗ್ನಿನಾ ರಯಿಮಶ್ನವತ್ಪೋಷಮೇವ ದಿವೇದಿವೇ ।

ಯಶಸಂ ವೀರವತ್ತಮಮ್ ॥

ಅಗ್ನಿನಾ । ರಯಿಮ್ । ಅಶ್ನವತ್ । ಪೋಷಮ್ । ಏವ । ದಿವೇದಿವ ಇತಿ ದಿವೇ-ದಿವೇ ॥ ಯಶಸಮ್ । ವೀರವತ್ತಮಮಿತಿ ವೀರವತ್-ತಮಮ್ ॥

| ಮಂತ್ರ | ವಿನಿಯೋಗ |
|---|---|
| ಅಗ್ನಿನಾ...ವೀರವತ್ತಮಮ್ ॥ | ಗೃಹಮೇಧಿಯಾಗದ ಪ್ರಥಮಾಜ್ಯಭಾಗದ ಪುರೋನುವಾಕ್ಯೆ. |

[ಈ ಯಾಗ ಮಾಡುವ ಜನವು[ಜನರು]; **ಅಗ್ನಿನಾ**=ಅಗ್ನಿದೇವನಿಂದ; **ದಿವೇದಿವೇ**=ಪ್ರತಿದಿನವೂ; **ಪೋಷಮ್ ಏವ**=ಪುಷ್ಟಿಯನ್ನೇ/ವೃದ್ಧಿಯನ್ನೇ [ಹೊಂದುತ್ತಿರುವ]; **ಯಶಸಮ್**=ಯಶಸ್ಕರವಾದ; **ವೀರವತ್ತಮಮ್**=ಸಮರ್ಥರಾದ ಪುತ್ರರಿಂದಲೂ ಯುಕ್ತವಾದ; **ರಯಿಮ್**=ಧನವನ್ನು; **ಅಶ್ನವತ್**=ಹೊಂದುತ್ತದೆ/ಹೊಂದುತ್ತಾರೆ.

ನಮ್ಮನ್ನು ಸಂತೋಷಪಡಿಸುವ ಮರುತರು ತಮ್ಮ ಪಾಶಗಳಿಂದ ನಮ್ಮನ್ನು ಬಂಧಿಸದಿರಲಿ. ನಮ್ಮ ಶತ್ರುಗಳನ್ನು ಬಂಧಿಸಲಿ. **'ಸಪ್ತಗಣಾ ವೈ ಮರುತಃ'** ಎಂಬ ಶ್ರುತ್ಯಂತರವಿದೆ. ಮರುತರು ಏಳು ಗಣಗಳಲ್ಲಿ ಇರುವವರು.

**'ಅಗ್ನಿರ್ ಹೋತಾ । ಅಶ್ವಿನಾಧ್ವರ್ಯೂ । ತ್ವಷ್ಟಾಗ್ನೀತ್ ।'** ಮೊದಲಾಗಿ ಶ್ರುತಿಯಲ್ಲಿ ದೇವತೆಗಳಿಗೆ ಸಂಬಂಧಿಸಿದ ಋತ್ವಿಜರನ್ನು ಹೇಳಲಾಗಿದೆ. ಅತ್ಯಂತ ಯುವಕನಾದ ಅಗ್ನಿಯು ಕಾಲವನ್ನು ತಿಳಿದವನು. ದೇವತೆಗಳನ್ನು ತೃಪ್ತಿಪಡಿಸುವವನು. ಇಂತಹ ಸ್ವಿಷ್ಟಕೃದಗ್ನಿಯು ನಮ್ಮ ಯಾಗವನ್ನು ಅನುಗ್ರಹಿಸಲಿ.

ಅಗ್ನಿಯು ಶೋಧಕನು. ಯಾವಾಗಲೂ ತರುಣನು. ಆತನು ನಾವು ಸಮರ್ಪಿಸಿದ ಹವಿಸ್ಸುಗಳನ್ನು ಸ್ವೀಕರಿಸಲಿ. ತನ್ನ ಮಹಿಮೆಯ ಬಲದಿಂದ ದೇವತೆಗಳಿಗಾಗಿ ಹವಿಸ್ಸನ್ನು ಒಯ್ಯಲಿ.

ಗಯಸ್ಫಾನೋ ಅಮೀವಹಾ ವಸುವಿತ್ಪುಷ್ಟಿವರ್ಧನಃ । ಸುಮಿತ್ರಃ ಸೋಮ ನೋ ಭವ ॥ ಗೃಹಮೇಧಾಸ ಆ ಗತ ಮರುತೋ ಮಾಽಪ ಭೂತನ । ಪ್ರಮುಂಚಂತೋ ನೋ ಅಗ್ಂಹಸಃ ॥

---

ಗಯಸ್ಫಾನ ಇತಿ ಗಯ-ಸ್ಫಾನಃ । ಅಮೀವಹೇತ್ಯಮೀವ-ಹಾ । ವಸುವಿದಿತಿ ವಸು-ವಿತ್ । ಪುಷ್ಟಿವರ್ಧನ ಇತಿ ಪುಷ್ಟಿ-ವರ್ಧನಃ ॥ ಸುಮಿತ್ರ ಇತಿ ಸು-ಮಿತ್ರಃ । ಸೋಮ । ನಃ । ಭವ ॥ ಗೃಹಮೇಧಾಸ ಇತಿ ಗೃಹ-ಮೇಧಾಸಃ । ಏತಿ । ಗತ । ಮರುತಃ । ಮಾ । ಅಪೇತಿ । ಭೂತನ ॥ ಪ್ರಮುಂಚಂತ ಇತಿ ಪ್ರ-ಮುಂಚಂತಃ । ನಃ । ಅಗ್ಂಹಸಃ ॥

---

| ಮಂತ್ರ | ವಿನಿಯೋಗ |
| --- | --- |
| ಗಯಸ್ಫಾನೋ...ನೋ ಭವ ॥ | ಗೃಹಮೇಧಿಯಾಗದ ದ್ವಿತೀಯಾಜ್ಯಭಾಗದ ಪುರೋನುವಾಕ್ಯೆ. |
| ಗೃಹಮೇಧಾಸಃ...ಅಗ್ಂಹಸಃ ॥ | ಗೃಹಮೇಧೀಯ ಪ್ರಧಾನಯಾಗದ ಪುರೋನುವಾಕ್ಯೆ. |

---

▲ **ಸೋಮ**=ಸೋಮದೇವನೇ! **ನಃ**=ನಮ್ಮನ್ನು ಕುರಿತು/ನಮ್ಮ ವಿಷಯದಲ್ಲಿ; **ಗಯಸ್ಫಾನಃ**=ಮನೆಗಳನ್ನು ವೃದ್ಧಿಗೊಳಿಸುವವನೂ; **ಅಮೀವಹಾ**=ರೋಗಪರಿಹಾರಕನೂ; **ವಸುವಿತ್**=ಧನವನ್ನು ಹೊಂದುವಂತೆ ಮಾಡುವವನೂ; **ಪುಷ್ಟಿವರ್ಧನಃ**=ಗವಾದಿಗಳ ಪುಷ್ಟಿಯನ್ನು ವೃದ್ಧಿಗೊಳಿಸುವವನೂ; **ಸುಮಿತ್ರಃ**=[ಯಜಮಾನರನ್ನು] ಒಳ್ಳೆಯ ಮಿತ್ರರಂತೆ ಭಾವಿಸುವವನೂ; **ಭವ**=ಆಗು. ▲ **ಗೃಹಮೇಧಾಸಃ**=ಮನೆಗಳಲ್ಲಿ ಯಾವಾಗಲೂ ಯಾಗಗಳು ನಡೆಯುವಂತೆ ಮಾಡುವ; **ಮರುತಃ**=ಮರುದ್ದೇವತೆಗಳೇ! **ಆ ಗತ**=ಈ ಯಜ್ಞದಲ್ಲಿ ಆಗಮಿಸಿರಿ; **ಮಾ ಅಪ ಭೂತನ**=ಹೊರಟು ಹೋಗದಿರಿ; **ನಃ**=ನಮ್ಮನ್ನು; **ಅಗ್ಂಹಸಃ**=ಪಾಪದಿಂದ; **ಪ್ರಮುಂಚಂತಃ**=ಚೆನ್ನಾಗಿ ಬಿಡಿಸುವವರಾಗಿ [ಆಗಿರಿ].

ಪೂರ್ವೀಭಿರ್ ಹಿ ದದಾಶಿಮ ಶರದ್ಭಿರ್ಮರುತೋ

ವಯಮ್ । ಮಹೋಭಿ [ಮಹೋಭಿಃ(೩೩)

ಚರ್ಷಣೀನಾಮ್] ಶ್ಚರ್ಷಣೀನಾಮ್ ॥

---

ಪೂರ್ವೀಭಿಃ । ಹಿ । ದದಾಶಿಮ । ಶರದ್ಭಿರಿತಿ ಶರತ್-ಭಿಃ । ಮರುತಃ । ವಯಮ್ ॥

ಮಹೋಭಿರಿತಿ ಮಹಃ-ಭಿಃ । (೩೩) ಚರ್ಷಣೀನಾಮ್ ॥

---

| ಮಂತ್ರ | ವಿನಿಯೋಗ |
|---|---|
| ಪೂರ್ವೀಭಿಃ...ಚರ್ಷಣೀನಾಮ್ ॥ | ಗೃಹಮೇಧೀಯ ಪ್ರಧಾನಹವಿಸ್ಸಿನ ಯಾಜ್ಯೆ. |

---

**ಮರುತಃ**=ಮರುದ್ದೇವತೆಗಳೇ! **ಪೂರ್ವೀಭಿಃ**=ಪ್ರಾಚೀನಕಾಲದಿಂದಲೂ ಪ್ರವೃತ್ತವಾಗಿರುವ; **ಮಹೋಭಿಃ**=ವ್ರೀಹ್ಯಾದಿಗಳಿಂದ ಯುಕ್ತವಾಗಿ ಶ್ಲಾಘ್ಯವಾಗಿರುವ; **ಶರದ್ಭಿಃ**=ಸಂವತ್ಸರಗಳಿಂದ; **ವಯಮ್**=ನಾವು; **ಚರ್ಷಣೀನಾಮ್**=ಋತ್ವಿಜರ ಮಧ್ಯದಲ್ಲಿ ಇದ್ದುಕೊಂಡು; **ದದಾಶಿಮ ಹಿ**=ಹವಿಸ್ಸುಗಳನ್ನು ಕೊಡುತ್ತೇವಷ್ಟೆ. [ಅದಕ್ಕಾಗಿ ನೀವು ಆಗಮಿಸಿರಿ].

---

**'ಮರುದ್ಭ್ಯೋ ಗೃಹಮೇಧಿಭ್ಯಃ ಸರ್ವಾಸಾಂ ದುಗ್ಧೇ ಸಾಯಂ ಚರುಮ್'** ಎಂದು ವಿಹಿತವಾಗಿರುವ ಗೃಹಮೇಧೀಯಯಾಗವಿದು.

ಜನರು ಅಗ್ನಿಯ ಅನುಗ್ರಹದಿಂದ ಐಶ್ವರ್ಯವನ್ನು ಪಡೆಯುತ್ತಾರೆ. ಅರ್ಥವು ದಿನೇದಿನೇ ಅಭಿವೃದ್ಧಿಯನ್ನು ಹೊಂದುತ್ತದೆ. ಯಶಸ್ಸನ್ನು ಉಂಟುಮಾಡುತ್ತದೆ. ಒಳ್ಳೆಯ ಮಕ್ಕಳಿಂದಲೂ ಯುಕ್ತವಾಗಿರುತ್ತದೆ. ಇಂತಹ ಧನವನ್ನು ಹೊಂದುತ್ತಾರೆ.

ಹೇ! ಸೋಮದೇವನೇ! ನಮ್ಮ ವಿಷಯದಲ್ಲಿ ಮನೆಗಳನ್ನು ವೃದ್ಧಿಗೊಳಿಸುವವನೂ, ರೋಗನಿವಾರಕನೂ, ಗವಾದಿಸಮೃದ್ಧಿಯನ್ನು ತರುವವನೂ, ಒಳ್ಳೆಯ ಮೈತ್ರಿಯುಳ್ಳವನೂ ಆಗು.

ಪ್ರ ಬುಧ್ನಿಯಾ ಈರತೇ ವೋ ಮಹಾಗ್ಂಸಿ ಪ್ರ ಣಾಮಾನಿ ಪ್ರಯಜ್ಯವಸ್ತಿರಧ್ವಮ್ । ಸಹಸ್ರಿಯಂ ದಮ್ಯಂ ಭಾಗಮೇತಂ ಗೃಹಮೇಧೀಯಂ ಮರುತೋ ಜುಷಧ್ವಮ್ ॥

---

ಪ್ರೇತಿ । ಬುಧ್ನಿಯಾ । ಈರತೇ । ವಃ । ಮಹಾಗ್ಂಸಿ । ಪ್ರೇತಿ । ನಾಮಾನಿ । ಪ್ರಯಜ್ಯವ ಇತಿ ಪ್ರ-ಯಜ್ಯವಃ । ತಿರಧ್ವಮ್ ॥ ಸಹಸ್ರಿಯಮ್ । ದಮ್ಯಮ್ । ಭಾಗಮ್ । ಏತಮ್ । ಗೃಹಮೇಧೀಯಮಿತಿ ಗೃಹ-ಮೇಧೀಯಮ್ । ಮರುತಃ । ಜುಷಧ್ವಮ್ ॥

---

| ಮಂತ್ರ | ವಿನಿಯೋಗ |
|---|---|
| ಪ್ರ ಬುಧ್ನಿಯಾ...ಜುಷಧ್ವಮ್ ॥ | ಗೃಹಮೇಧೀಯಯಾಗದ ವಿಕಲ್ಪಿತ ಯಾಜ್ಯೆ. |

---

▲ **ಮರುತಃ**=ಹೇ! ಮರುದ್ದೇವತೆಗಳೇ! **ಬುಧ್ನಿಯಾ**=ಅನಾದಿಕಾಲದಿಂದಲೂ ಪ್ರವೃತ್ತವಾಗಿರುವ; **ವಃ**=ನಿಮ್ಮ; **ಮಹಾಗ್ಂಸಿ**=ತೇಜಸ್ಸುಗಳು; **ಪ್ರ ಈರತೇ**= ಎಲ್ಲೆಡೆಯಲ್ಲಿಯೂ ಹರಡಿಕೊಳ್ಳುತ್ತವೆ; **ಪ್ರಯಜ್ಯವಃ**=ಶ್ರೇಷ್ಠವಾದ ಯಾಗಗಳುಳ್ಳ ಮರುತರೇ! **ವಃ ನಾಮಾನಿ**=[ಗೃಹಮೇಧಿಗಳು, ಮರುತರು ಮೊದಲಾದ] ನಿಮ್ಮ ನಾಮಧೇಯಗಳನ್ನು; **ಪ್ರ ತಿರಧ್ವಮ್**=ಪ್ರಸಿದ್ಧಿಪಡಿಸಿರಿ; [ಹೇ ಮರುತರೇ!] **ಸಹಸ್ರಿಯಮ್**=ಸಹಸ್ರವರ್ಷಗಳಿಗೆ ಅರ್ಹವಾದ; **ದಮ್ಯಮ್**=ನಾವು ಅರ್ಪಿಸುವ; **ಏತಮ್**=ಈ; **ಗೃಹಮೇಧೀಯಮ್**=ಗೃಹಮೇಧಿಯಾಗಸಂಬಂಧಿಯಾದ; **ಭಾಗಮ್** =ಚರುರೂಪಹವಿಸ್ಸನ್ನು; **ಜುಷಧ್ವಮ್**=ಸೇವಿಸಿರಿ.

---

ಮರುತರು ಮನೆಗಳಲ್ಲಿ ಯಜ್ಞಗಳು ನಡೆಯುತ್ತಿರುವಂತೆ ಮಾಡುವವರು. ನಮ್ಮ ಯಜ್ಞಕ್ಕೆ ಅವರು ಆಗಮಿಸಲಿ. ಯಾವಾಗಲೂ ಹೊರಟುಹೋಗದಿರಲಿ. ನಮ್ಮ ಪಾಪಗಳನ್ನು ಪರಿಹರಿಸುತ್ತಿರಲಿ.

ಉಪ ಯಮೇತಿ ಯುವತಿಃ ಸುದಕ್ಷಂ ದೋಷಾ ವಸ್ತೋರ್

ಹವಿಷ್ಮತೀ ಘೃತಾಚೀ। ಉಪ ಸ್ವೈನಮರಮತಿರ್ವಸೂಯುಃ ॥

ಇಮೋ ಅಗ್ನೇ ವೀತತಮಾನಿ ಹವ್ಯಾಽಜಸ್ರೋ ವಕ್ಷಿ

ದೇವತಾತಿಮಚ್ಛ ।

---

ಉಪೇತಿ । ಯಮ್ । ಏತಿ । ಯುವತಿಃ । ಸುದಕ್ಷಮಿತಿ ಸು-ದಕ್ಷಮ್ । ದೋಷಾ । ವಸ್ತೋಃ । ಹವಿಷ್ಮತೀ । ಘೃತಾಚೀ ॥ ಉಪೇತಿ । ಸ್ವಾ । ಏನಮ್ । ಅರಮತಿಃ । ವಸೂಯುರಿತಿ ವಸು-ಯುಃ ॥ ಇಮೋ ಇತಿ । ಅಗ್ನೇ । ವೀತತಮಾನೀತಿ ವೀತ-ತಮಾನಿ । ಹವ್ಯಾ । ಅಜಸ್ರಃ । ವಕ್ಷಿ । ದೇವತಾತಿಮಿತಿ ದೇವ-ತಾತಿಮ್ । ಅಚ್ಛ ॥

---

| ಮಂತ್ರ | ವಿನಿಯೋಗ |
|---|---|
| ಉಪ...ವಸೂಯುಃ ॥ | ಗೃಹಮೇಧೀಯಯಾಗದ ಸ್ವಿಷ್ಟಕೃದ್ಧವಿಸ್ಸಿನ ಪುರೋನುವಾಕ್ಯೆ. |
| ಇಮೋ...ವಿಯಂತು ॥ | ಗೃಹಮೇಧೀಯಯಾಗದ ಸ್ವಿಷ್ಟಕೃದ್ಧವಿಸ್ಸಿನ ಯಾಜ್ಯೆ. |

---

▲ **ಯುವತಿಃ**=ಮಂತ್ರಯುಕ್ತವಾದ; **ಹವಿಷ್ಮತೀ**=ಹವಿಸ್ಸುಗಳಿಂದ ಕೂಡಿರುವ; **ಘೃತಾಚೀ**=ಆಜ್ಯಮಿಶ್ರವಾದ [ಆಹುತಿಯು] **ಸುದಕ್ಷಮ್**=ಕಾರ್ಯಕುಶಲನಾದ; **ಯಮ್**=ಯಾವ ಸ್ವಿಷ್ಟಕೃದಗ್ನಿಯನ್ನು; **ದೋಷಾ**=ರಾತ್ರಿಯಲ್ಲಿಯೂ; **ವಸ್ತೋಃ**=ಹಗಲಿನಲ್ಲಿಯೂ; **ಉಪ ಏತಿ**=ಹೊಂದುತ್ತದೆಯೋ; [ಆ] **ಅರಮತಿಃ**=ವಿಶ್ರಾಂತಿರಹಿತನಾಗಿರುವ; **ವಸೂಯುಃ**=ಧನಾಪೇಕ್ಷಿಯಾದ ಯಜಮಾನನು; **ಸ್ವಾ**=ತನ್ನ ಹವಿಸ್ಸಿನಿಂದ; **ಏನಮ್**=ಈ ಸ್ವಿಷ್ಟಕೃದಗ್ನಿಯನ್ನು; **ಉಪ** ಏತಿ=ಹೊಂದುತ್ತಾನೆ/ಸೇವಿಸುತ್ತಾನೆ. ▲ **ಅಗ್ನೇ**=ಹೇ! ಸ್ವಿಷ್ಟಕೃದಗ್ನಿಯೇ! **ವೀತತಮಾನಿ**=ಅತ್ಯಂತ ಮನೋಹರವಾಗಿರುವ; **ಇಮೋ**=ಈ; **ಹವ್ಯಾ**=ಹವ್ಯಗಳನ್ನು; **ದೇವತಾತಿಮ್ ಅಚ್ಛ**=ದೇವತೆಗಳನ್ನು ಹೊಂದುವುದಕ್ಕಾಗಿ; **ಅಜಸ್ರಃ**=ವಿರತಿ ಇಲ್ಲದವನಾಗಿ/ಯಾವಾಗಲೂ; **ವಕ್ಷಿ**=ಒಯ್ಯುವವನಾಗು.

ಪ್ರತಿ ನ ಈಗ್ಂ ಸುರಭೀಣಿ ವಿಯಂತು ॥ ಕ್ರೀಡಂ ವಃ

ಶರ್ಧೋ ಮಾರುತಮನರ್ವಾಣಗ್ಂ ರಥೇಶುಭಮ್ ॥

[(೩೪)] ಕಣ್ವಾ ಅಭಿ ಪ್ರ ಗಾಯತ ॥

---

ಪ್ರತೀತಿ । ನಃ । ಈಮ್ । ಸುರಭೀಣಿ । ವಿಯಂತು ॥ ಕ್ರೀಡಮ್ । ವಃ । ಶರ್ಧಃ ।

ಮಾರುತಮ್ । ಅನರ್ವಾಣಮ್ । ರಥೇಶುಭಮಿತಿ ರಥೇ-ಶುಭಮ್ ॥ (೩೪) ।

ಕಣ್ವಾಃ । ಅಭಿ । ಪ್ರೇತಿ । ಗಾಯತ ॥

---

| ಮಂತ್ರ | ವಿನಿಯೋಗ |
|---|---|
| ಕ್ರೀಡಂ ವಃ...ಗಾಯತ ॥ | ಕ್ರೀಡಿಯಾಗದ ಪ್ರಧಾನಹವಿಸ್ಸಿನ ಪುರೋನುವಾಕ್ಯೆ. |

---

ನಃ=ನಮ್ಮ; ಸುರಭೀಣಿ=ಸುಗಂಧಯುಕ್ತವಾದ ಹವಿಸ್ಸುಗಳನ್ನು; ಪ್ರತಿ ಈಮ್= ಪ್ರತ್ಯೇಕವಾಗಿಯೇ; ವಿಯಂತು=ದೇವತೆಗಳು ಭಕ್ಷಿಸಲಿ. ▲ಕಣ್ವಾಃ=ಕಣ್ವಾದಿ ವೇದಾ ಚಾರ್ಯರೇ! ವಃ=ನಿಮ್ಮ [ಮರುತರ] ಕ್ರೀಡಮ್=ಕ್ರೀಡೆಗೆ ಕಾರಣವಾದ; ಅನರ್ವಾಣಮ್=ಶತ್ರುಗಳು ತಿರಸ್ಕರಿಸಲಾಗದ; ರಥೇಶುಭಮ್=ರಥಪ್ರೇರಣೆಯಲ್ಲಿ ಸಮರ್ಥವಾದ; ಮಾರುತಮ್=ಮರುದ್ದೇವತೆಗಳಿಗೆ ಸಂಬಂಧಿಸಿದ; ಶರ್ಧಃ=ಬಲವನ್ನು; ಅಭಿ ಪ್ರ ಗಾಯತ=ಸುತ್ತಲೂ ವೇದಮಂತ್ರಗಳಿಂದ ಸ್ತುತಿಸಿ ಹಾಡಿರಿ.

---

ಯಜಮಾನರು ಪೂರ್ವಕಾಲದಿಂದಲೂ ಪ್ರವೃತ್ತವಾಗಿ, ಪೂಜ್ಯವಾಗಿರುವ ಸಂವತ್ಸರಗಳಲ್ಲಿ ಋತ್ವಿಜರಿಂದ ಕೂಡಿಕೊಂಡು ಮರುದ್ದೇವತೆಗಳಿಗೆ ಹವ್ಯಗಳನ್ನು ಸಮರ್ಪಿಸುತ್ತಾರೆ. ಆ ಯಜ್ಞಗಳಿಗೆ ಮರುತರು ಆಗಮಿಸಲಿ ಎಂದು ಪ್ರಾರ್ಥನೆ.

ಹೇ ಮರುತರೇ! ನಿಮ್ಮ ತೇಜಸ್ಸುಗಳು ಅನಾದಿಕಾಲದಿಂದಲೂ ಪ್ರವೃತ್ತವಾಗಿವೆ. ನೀವು ಶ್ರೇಷ್ಠಯಾಗಸಂಬಂಧಿಗಳು. ನಿಮ್ಮ ಗೃಹಮೇಧಿ ಮುಂತಾದ ಹೆಸರುಗಳು ಲೋಕದಲ್ಲಿ ಪ್ರಖ್ಯಾತವಾಗುವಂತೆ ಮಾಡಿರಿ. ನಾವು ಸಮರ್ಪಿಸುವ ಸಂವತ್ಸರಾರ್ಹವಾದ ಹವಿಸ್ಸನ್ನು ಸ್ವೀಕರಿಸಿರಿ.

ಅತ್ಯಾಸೋ ನ ಯೇ ಮರುತಃ ಸ್ವಂಚೋ ಯಕ್ಷದೃಶೋ ನ ಶುಭಯಂತ ಮರ್ಯಾಃ । ತೇ ಹರ್ಮ್ಯೇಷ್ಠಾಃ ಶಿಶವೋ ನ ಶುಭ್ರಾ ವಥ್ಸಾಸೋ ನ ಪ್ರಕ್ರೀಡಿನಃ ಪಯೋಧಾಃ ॥

ಅತ್ಯಾಸಃ । ನ । ಯೇ । ಮರುತಃ । ಸ್ವಂಚಃ । ಯಕ್ಷದೃಶ ಇತಿ ಯಕ್ಷ–ದೃಶಃ । ನ । ಶುಭಯಂತ । ಮರ್ಯಾಃ ॥ ತೇ । ಹರ್ಮ್ಯೇಷ್ಠಾ ಇತಿ ಹರ್ಮ್ಯೇ–ಸ್ಥಾಃ । ಶಿಶವಃ । ನ । ಶುಭ್ರಾಃ । ವಥ್ಸಾಸಃ । ನ । ಪ್ರಕ್ರೀಡಿನ ಇತಿ ಪ್ರ–ಕ್ರೀಡಿನಃ । ಪಯೋಧಾ ಇತಿ ಪಯಃ–ಧಾಃ ॥

| ಮಂತ್ರ | ವಿನಿಯೋಗ |
|---|---|
| ಅತ್ಯಾಸಃ...ಪಯೋಧಾಃ ॥ | ಕ್ರೀಡಿಯಾಗದ ಯಾಜ್ಯಾನುವಾಕ್ಯೆ. |

▲ **ಯೇ ಮರುತಃ**=ಯಾವ ಮರುದ್ದೇವತೆಗಳು; **ಅತ್ಯಾಸಃ ನ**=ಯಾವಾಗಲೂ ಸಂಚರಣಶೀಲವಾದ ಅಶ್ವಾದಿಗಳಂತೆ; **ಸ್ವಂಚಃ**=ಶೋಭನಗತಿಯುಳ್ಳವರೋ; **ಯಕ್ಷ ದೃಶಃ**=ಯಾಗವನ್ನು ನೋಡಲು ಕುತೂಹಲದಿಂದ ಬಂದಿರುವ; **ಮರ್ಯಾಃ ನ**= ಮಾನವರಂತೆ ಇರುವವರೋ; **ಹರ್ಮ್ಯೇಷ್ಠಾಃ**=ಉಪ್ಪರಿಗೆಯನ್ನು ಏರಿರುವ; **ಶಿಶವಃ ನ**=ರಾಜಕುಮಾರರಂತೆ; **ಶುಭ್ರಾಃ**=ಶುಭ್ರವರ್ಣರಾಗಿ [ಪರ್ವತಗಳಲ್ಲಿ ಸಂಚರಿಸುವರೋ] **ಪ್ರಕ್ರೀಡಿನಃ**=ಆಟವಾಡುತ್ತಿರುವ; **ವತ್ಸಾಸಃ ನ**=ಕರುಗಳಂತೆ ಇರುತ್ತಾರೆಯೋ; **ಪಯೋಧಾಃ**=ಮೋಡಗಳಲ್ಲಿ ನೀರನ್ನು ಇಡುವವರೋ; **ತೇ**=ಆ; **ಮರುತಃ**=ಮರುದ್ದೇವತೆಗಳು; **ಶುಭಯಂತ**=ಜಗತ್ತನ್ನು ಅಲಂಕರಿಸುತ್ತಾರೆ.

ಸ್ವಿಷ್ಟಕೃದ್ಧೋಮವು ಹಗಲು–ರಾತ್ರಿಗಳಲ್ಲಿ ಎಲ್ಲ ಯಾಗಗಳಲ್ಲಿಯೂ ವಿಹಿತವಾಗಿದೆ. ಯಜಮಾನರು ಮಾಡುವ ಮಂತ್ರಯುಕ್ತವಾದ ಹವಿಸ್ಸುಗಳಿಂದ ಕೂಡಿರುವ ಘೃತಾಕ್ತವಾದ ಆಹುತಿಗಳು ಸ್ವಿಷ್ಟಕೃದಗ್ನಿಯನ್ನು ಹೊಂದುತ್ತವೆ. ವಿಶ್ರಾಂತಿಯಿಲ್ಲದ,

ಪ್ರೈಷಾಮಜ್ಮೇಷು ವಿಥುರೇವ ರೇಜತೇ ಭೂಮಿರ್ಯಾಮೇಷು ಯದ್ಧ ಯುಂಜತೇ ಶುಭೇ । ತೇ ಕ್ರೀಡಯೋ ಧುನಯೋ ಭ್ರಾಜದೃಷ್ಟಯಃ ಸ್ವಯಂ ಮಹಿತ್ವಂ ಪನಯಂತ ಧೂತಯಃ ॥

---

ಪ್ರೇತಿ । ಏಷಾಮ್ । ಅಜ್ಮೇಷು । ವಿಥುರಾ । ಇವ । ರೇಜತೇ । ಭೂಮಿಃ । ಯಾಮೇಷು । ಯತ್ । ಹ । ಯುಂಜತೇ । ಶುಭೇ ॥ ತೇ । ಕ್ರೀಡಯಃ । ಧುನಯಃ । ಭ್ರಾಜದೃಷ್ಟಯ ಇತಿ ಭ್ರಾಜತ್-ಋಷ್ಟಯಃ । ಸ್ವಯಮ್ । ಮಹಿತ್ವಮಿತಿ ಮಹಿ-ತ್ವಮ್ । ಪನಯಂತ । ಧೂತಯಃ ॥

---

| ಮಂತ್ರ | ವಿನಿಯೋಗ |
|---|---|
| ಪ್ರೈಷಾಮ್..ಧೂತಯಃ ॥ | ಕ್ರೀಡಿಯಾಗದಲ್ಲಿ ಪ್ರಧಾನಹವಿಸ್ಸಿನ ವಿಕಲ್ಪಿತ ಪುರೋನುವಾಕ್ಯೆ. |

---

🔔 **ಯತ್ ಹ**=ಯಾವ ಮರುದ್ದೇವತೆಗಳು; **ಶುಭೇ**=ಒಳ್ಳೆಯ ವೃಷ್ಟಿನಿಮಿತ್ತವಾಗಿ; **ಯಾಮೇಷು**=ಜಲನಿಯಾಮಕಮೇಘಗಳಲ್ಲಿ; **ಯುಂಜತೇ**=ನೀರನ್ನು ಹೊಂದಿಸುತ್ತಾರೆಯೋ; **ಏಷಾಮ್**=ಈ ವಾಯುದೇವತೆಗಳ; **ಅಜ್ಮೇಷು**=ಚಲನಗಳಲ್ಲಿ; **ಭೂಮಿಃ**=ಭೂಮಿಯು; **ವಿಥುರಾ ಇವ**=ವಿಧವೆಯಾಗಿ ರಕ್ಷಕರಿಲ್ಲದ ಸ್ತ್ರೀಯಂತೆ; **ಪ್ರ ರೇಜತೇ**=ಹೆಚ್ಚಾಗಿ ನಡುಗುತ್ತದೆ; **ತೇ**=ಅಂತಹ; **ಕ್ರೀಡಯಃ**=ಆಟವಾಡುತ್ತಿರುವಂತೆ ಇರುವ; **ಧುನಯಃ**=ಕಂಪನ/ಚಲನಯುಕ್ತರಾದ; **ಭ್ರಾಜದೃಷ್ಟಯಃ**=ಬೆಳಗುತ್ತಿರುವ ಮಿಂಚೇ ಕಣ್ಣಾಗಿರುವ; **ಧೂತಯಃ**=ಶತ್ರುಗಳನ್ನು ಭಯದಿಂದ ನಡುಗುವಂತೆ ಮಾಡುವ [ಮರುತರು]; **ಮಹಿತ್ವಮ್**=ತಮ್ಮ ಮಹಿಮೆಯನ್ನು; **ಸ್ವಯಮ್**=ತಾವಾಗಿಯೇ; **ಪನಯಂತ**=ಹೇಳುತ್ತಾರೆ.

---

ಧನಾಪೇಕ್ಷಿಗಳಾದ ಯಜಮಾನರು ತಮ್ಮ ಆಹುತಿಗಳಿಂದ ಸ್ವಿಷ್ಟಕೃದಗ್ನಿಯನ್ನು ತೃಪ್ತಿಪಡಿಸುತ್ತಾರೆ.

ಉಪಹ್ವರೇಷು ಯದಚಿಧ್ವಂ ಯಯಿಂ ವಯ ಇವ ಮರುತಃ
ಕೇನ [(೩೫)ಚಿತ್ಪಥಾ] ಚಿತ್ಪಥಾ। ಶ್ಚೋತಂತಿ ಕೋಶಾ ಉಪ
ವೋ ರಥೇಷ್ವಾ ಘೃತಮುಕ್ಷತಾ ಮಧುವರ್ಣಮರ್ಚತೇ ॥

---

ಉಪಹ್ವರೇಷ್ವಿತ್ಯುಪ-ಹ್ವರೇಷು । ಯತ್ । ಅಚಿಧ್ವಮ್ । ಯಯಿಮ್ । ವಯಃ । ಇವ । ಮರುತಃ । ಕೇನ । (೩೫) । ಚಿತ್ । ಪಥಾ ॥ ಶ್ಚೋತಂತಿ । ಕೋಶಾಃ । ಉಪೇತಿ । ವಃ । ರಥೇಷು । ಏತಿ । ಘೃತಮ್ । ಉಕ್ಷತ । ಮಧುವರ್ಣಮಿತಿ ಮಧು-ವರ್ಣಮ್ । ಅರ್ಚತೇ ॥

---

| ಮಂತ್ರ | ವಿನಿಯೋಗ |
|---|---|
| ಉಪಹ್ವರೇಷು...ಅರ್ಚತೇ ॥ | ಕ್ರೀಡಿಯಾಗದ ಪ್ರಧಾನಹವಿಸ್ಸಿನ ವಿಕಲ್ಪಿತ ಯಾಜ್ಯೆ. |

---

▲ **ಮರುತಃ**=ವಾಯುದೇವತೆಗಳೇ! **ಯತ್**=ಯಾವಾಗ; **ವಯಃ ಇವ**=ಹಕ್ಕಿಗಳಂತೆ; **ಕೇನ ಚಿತ್**=ಯಾವುದಾದರೊಂದು; **ಪಥಾ**=ಮಾರ್ಗದಿಂದ; **ಉಪಹ್ವರೇಷು**=ಸಮೀಪಕ್ಕೆ ಬಂದು ಪ್ರೇರಿಸಬೇಕಾಗಿರುವ [ಮೋಡಗಳಲ್ಲಿ]; **ಯಯಿಮ್**=ಮಾರ್ಗವನ್ನು; **ಅಚಿಧ್ವಮ್**=ಸಂಪಾದಿಸಿದರೋ [ಆಗ]; **ವಃ ರಥೇಷು**=ನಿಮ್ಮ ರಥಗಳು; **ಉಪ** [ಗತೇಷು]=ಸಮೀಪಿಸಲಾಗಿ; **ಕೋಶಾಃ**=ಧನಪೂರ್ಣವಾದ ಖಜಾನೆಯಂತೆ/ ಜಲಪೂರ್ಣವಾದ ಮೋಡಗಳು; **ಶ್ಚೋತಂತಿ**=ನೀರನ್ನು ಸುರಿಸುತ್ತವೆ. [ನೀವು] **ಅರ್ಚತೇ**=ನಿಮ್ಮನ್ನು ಪೂಜಿಸುವ ಯಜಮಾನನಿಗೆ; **ಮಧುವರ್ಣಮ್ ಘೃತಮ್**=ಘೃತದಂತೆ ಮಧುರವಾದ ನೀರನ್ನು; **ಆ ಉಕ್ಷತ**=ಸುತ್ತಲೂ ಸುರಿಸುತ್ತೀರಿ.

---

ಹೇ! ಸ್ವಿಷ್ಟಕೃದಗ್ನಿಯೇ! ದೇವತೆಗಳು ಸ್ವೀಕರಿಸುವುದಕ್ಕಾಗಿ ಅತ್ಯಂತ ಮನೋಹರವಾಗಿರುವ ನಮ್ಮ ಈ ಹವಿಸ್ಸುಗಳನ್ನು ನೀನು ಯಾವಾಗಲೂ ಒಯ್ಯುವವನಾಗು.

ಅಗ್ನಿಮಗ್ನಿಗ್ಂ ಹವೀಮಭಿಃ ಸದಾ ಹವಂತ ವಿಶ್ಪತಿಮ್ ।

ಹವ್ಯವಾಹಂ ಪುರುಪ್ರಿಯಮ್ ॥

---

ಅಗ್ನಿಮಗ್ನಿಮಿತ್ಯಗ್ನಿಮ್-ಅಗ್ನಿಮ್ । ಹವೀಮಭಿರಿತಿ ಹವೀಮ-ಭಿಃ । ಸದಾ । ಹವಂತ । ವಿಶ್ಪತಿಮ್ ॥ ಹವ್ಯವಾಹಮಿತಿ ಹವ್ಯ-ವಾಹಮ್ । ಪುರುಪ್ರಿಯಮಿತಿ ಪುರು-ಪ್ರಿಯಮ್ ॥

---

| ಮಂತ್ರ | ವಿನಿಯೋಗ |
| --- | --- |
| ಅಗ್ನಿಮ್...ಪುರುಪ್ರಿಯಮ್ ॥ | ಕ್ರೀಡಿಯಾಗದ ಸ್ವಿಷ್ಟಕೃದ್ಧವಿಸ್ಸಿನ ಪುರೋನುವಾಕ್ಯೆ. |

---

[ಯಜಮಾನರು] **ವಿಶ್ಪತಿಮ್**=ಪ್ರಜಾಪಾಲಕನಾದ; **ಹವ್ಯವಾಹಮ್**=ದೇವತೆಗಳಿಗೆ ಹವಿಸ್ಸನ್ನು ಒಯ್ಯುವ; **ಪುರುಪ್ರಿಯಮ್**=ಮಾನವರಿಗೆ ಪ್ರಿಯನಾದ; **ಅಗ್ನಿಮ್ ಅಗ್ನಿಮ್**=ಆಯಾ ಸ್ವಿಷ್ಟಕೃದಗ್ನಿಗಳನ್ನು; **ಹವೀಮಭಿಃ**=ಆಹ್ವಾನಪರವಾದ ಮಂತ್ರಗಳಿಂದ; **ಸದಾ ಹವಂತ**=ಯಾವಾಗಲೂ ಆಹ್ವಾನಿಸುತ್ತಾರೆ.

---

ದೇವತೆಗಳು ಪ್ರತ್ಯೇಕವಾಗಿಯೇ ಈ ಸುಗಂಧಯುಕ್ತವಾದ ಹವಿಸ್ಸುಗಳನ್ನು ಭಕ್ಷಿಸಲಿ.

ಕಣ್ವಾದಿವೇದಾಚಾರ್ಯರೇ! ಮರುದ್ದೇವತೆಗಳ ಬಲವು ಕ್ರೀಡೆಗೆ ಕಾರಣವಾಗಿದೆ. ಈ ಬಲವನ್ನು ಶತ್ರುಗಳು ಎದುರಿಸಲಾರರು. ಈ ಬಲವು ರಥಚಾಲನೆಯಲ್ಲಿ ಸಮರ್ಥವಾದುದು. ವೇದಮಂತ್ರಗಳಿಂದ ಈ ಮಾರುತಬಲವನ್ನು ಹಾಡಿ ಹೊಗಳಿರಿ.

ಯಾವ ಮರುದ್ದೇವತೆಗಳು ಅಶ್ವಗಳಂತೆ ಸಂಚಾರಶೀಲರಾಗಿರುವರೋ, ಯಜ್ಞವನ್ನು ನೋಡಲು ಬಂದಿರುವ ಕುತೂಹಲಿಗಳಾದ ಮಾನವರಂತೆ ಇರುವರೋ, ಉಪ್ಪರಿಗೆಯಲ್ಲಿರುವ ರಾಜಕುಮಾರರಂತೆ ಇರುವರೋ, ಮೋಡಗಳಲ್ಲಿ ನೀರನ್ನು ಇಡುವರೋ ಅಂತಹ ಮರುತರು ನಮ್ಮನ್ನು ಅನುಗ್ರಹಿಸಲಿ. ಮರುತರನ್ನು ಅನೇಕ ಹೋಲಿಕೆಗಳಿಂದ ಹೊಗಳಲಾಗಿದೆ.

ಮರುದ್ದೇವತೆಗಳ ಬೀಸುವಿಕೆಯಿಂದ ಭೂಮಿಯು ರಕ್ಷಕರಿಲ್ಲದ ವಿಧವೆಯಂತೆ ನಡುಗುತ್ತದೆ. ಮರುತರು ಕ್ರೀಡಾಪರರು. ಸರ್ವದಾ ಚಲನಶೀಲರು. ಜಲನಿಯಾಮಕವಾದ

**ತಗ್ಂ ಹಿ ಶಶ್ವಂತ ಈಡತೇ ಸ್ರುಚಾ ದೇವಂ ಘೃತಶ್ಚುತಾ ।**

**ಅಗ್ನಿಗ್ಂ ಹವ್ಯಾಯ ವೋಢವೇ ॥**

---

ತಮ್ । ಹಿ । ಶಶ್ವಂತಃ । ಈಡತೇ । ಸ್ರುಚಾ । ದೇವಮ್ । ಘೃತಶ್ಚುತೇತಿ ಘೃತ-ಶ್ಚುತಾ ॥ ಅಗ್ನಿಮ್ । ಹವ್ಯಾಯ । ವೋಢವೇ ॥

---

| ಮಂತ್ರ | ವಿನಿಯೋಗ |
|---|---|
| ತಗ್ಂ ಹಿ...ವೋಢವೇ ॥ | ಸ್ವಿಷ್ಟಕೃದ್ಯಾಗದ ಯಾಜ್ಯಾನುವಾಕ್ಯೆ. |

---

**ಶಶ್ವಂತಃ**=ಯಾವಾಗಲೂ ಅನುಷ್ಠಾನಪರರಾದ ಋತ್ವಿಜರು; **ಘೃತಶ್ಚುತಾ**=ತುಪ್ಪವನ್ನು ಸುರಿಸುವ/ಸಮರ್ಪಿಸುವ; **ಸ್ರುಚಾ**=ಹೋಮಪಾತ್ರದಿಂದ [ತುಪ್ಪವನ್ನು ಸುರಿಸಿ]; **ಹವ್ಯಾಯ**=[ದೇವತೆಗಳಿಗೆ] ಹವಿಸ್ಸನ್ನು; **ವೋಢವೇ**=ಒಯ್ಯುವುದಕ್ಕಾಗಿ; **ತಮ್**=ಆ ಪ್ರಸಿದ್ಧನಾದ; **ದೇವಮ್ ಅಗ್ನಿಮ್**=ಸ್ವಿಷ್ಟಕೃದಗ್ನಿದೇವನನ್ನು; **ಈಡತೇ ಹಿ**=ಸ್ತುತಿಸುತ್ತಾರಷ್ಟೆ.

---

ಮೋಡಗಳಲ್ಲಿ ನೀರನ್ನು ಸೇರಿಸತಕ್ಕವರು. ಅವರಿಗೆ ಮಿಂಚುತ್ತಿರುವ ಮಿಂಚೇ ಕಣ್ಣು. ಅವರು ಶತ್ರುಗಳನ್ನು ನಡುಗಿಸುತ್ತಿರುವವರು. ಇಂತಹ ಮರುತರು ತಮ್ಮ ಮಹಿಮೆಯನ್ನು ತಾವೇ ಪ್ರಸಿದ್ಧಿಪಡಿಸಿಕೊಳ್ಳುತ್ತಾರೆ. ಅದನ್ನು ಹೇಳಬೇಕಾಗಿಯೇ ಇಲ್ಲ. ಇಂತಹ ಮರುತರು ನಮ್ಮನ್ನು ಅನುಗ್ರಹಿಸಲಿ.

ಮರುದ್ದೇವತೆಗಳು ಪ್ರೇರಿಸಬೇಕಾದ ಮೋಡಗಳಲ್ಲಿ ಹಕ್ಕಿಗಳಂತೆ ಯಾವುದಾದರೂ ಮಾರ್ಗದಿಂದ ಪ್ರವೇಶವನ್ನು ಹೊಂದುತ್ತಾರೆ. ಇಂತಹ ವಾಯುಗಳು ಸಮೀಪಿಸಿದಾಗ ನೀರಿನ ಖಜಾನೆಯಂತಿರುವ ಮೋಡಗಳು ಧನದಂತಿರುವ ನೀರನ್ನು ಸುರಿಸುತ್ತವೆ. ಮರುತರು ತಮ್ಮನ್ನು ಪೂಜಿಸುವ ಯಜಮಾನನಿಗೆ ಮಧುವಿನಂತೆ ಮಧುರವಾದ ಘೃತದಂತಿರುವ ನೀರನ್ನು ಎಲ್ಲೆಡೆ ಸುರಿಯುವಂತೆ ಮಾಡಿ ಅನುಗ್ರಹಿಸುತ್ತಾರೆ.

ಯಾಗಾನುಷ್ಠಾನ ಮಾಡುವ ಯಜಮಾನರು-ಪ್ರಜಾಪಾಲಕರೂ, ದೇವತೆಗಳಿಗೆ ಹವಿಸ್ಸನ್ನು ಒಯ್ಯುವವರಾದ, ಪ್ರತಿಯಾಗದಲ್ಲಿಯೂ ಸಾಮಾನ್ಯವಾಗಿ ಸ್ವಿಷ್ಟಕೃದ್ಧೋಮವು

# *ಇಂದ್ರಾಗ್ನೀ ರೋಚನಾ ದಿವಃ ಶ್ನಥದ್ವೃತ್ರ+ಮಿಂದ್ರಂ ವೋ ವಿಶ್ವತಸ್ಪರೀಂದ್ರಂ ನರೋ

---

ಇಂದ್ರಾಗ್ನೀ ಇತೀಂದ್ರ-ಅಗ್ನೀ । ರೋಚನಾ । ದಿವಃ । ಶ್ನಥತ್ । ವೃತ್ರಮ್ । ಇಂದ್ರಮ್ । ವಃ । ವಿಶ್ವತಃ । ಪರೀತಿ । ಇಂದ್ರಮ್ । ನರಃ ।

---

ಇಂದ್ರಂ ವೋ ವಿಶ್ವತಸ್ಪರಿ ಹವಾಮಹೇ ಜನೇಭ್ಯಃ । ಅಸ್ಮಾಕಮಸ್ತು ಕೇವಲಃ ॥

ಇಂದ್ರಂ ನರೋ ನೇಮಧಿತಾ ಹವಂತೇ ಯತ್ಪಾರ್ಯಾ ಯುನಜತೇ ಧಿಯಸ್ತಾಃ ।

ಶೂರೋ ನೃಷಾತಾ ಶವಸಶ್ಚಕಾನ ಆ ಗೋಮತಿ ವ್ರಜೇ ಭಜಾ ತ್ವಂ ನಃ ॥

---

ಈ ಸಾಕಮೇಧಪರ್ವದಲ್ಲಿ ಮೂರು ಹವಿಸ್ಸುಗಳು 'ಐಂದ್ರಾಗ್ನಮೇಕಾದಶಕಪಾಲಮ್, ಐಂದ್ರಂ ಚರುಮ್, ವೈಶ್ವಕರ್ಮಣಮೇಕಕಪಾಲಮ್' ಎಂಬ ಶ್ರುತಿವಾಕ್ಯದಿಂದ ಉಕ್ತವಾಗಿವೆ. ಈ ಮೂರು ಹವಿಸ್ಸುಗಳಿಗೆ ಸಂಬಂಧಿಸಿದ ಯಾಜ್ಯಾ-ಪುರೋನುವಾಕ್ಯೆಗಳು ಇಲ್ಲಿ ಪಠಿತವಾಗಿವೆ.

| ಮಂತ್ರ | ವಿನಿಯೋಗ |
|---|---|
| * ಇಂದ್ರಾಗ್ನೀ...ವೀರ್ಯಮ್ ॥ | ಐಂದ್ರಾಗ್ನಹವಿಸ್ಸಿನ ಪುರೋನುವಾಕ್ಯೆ. |
| ಶ್ನಥದ್ವೃತ್ರಂ...ವಾಜಯಂತಾ ॥ | ಐಂದ್ರಾಗ್ನಹವಿಸ್ಸಿನ ಯಾಜ್ಯಾನುವಾಕ್ಯೆ. |
| +ಇಂದ್ರಂ ವೋ...ಕೇವಲಃ ॥ | ಐಂದ್ರಯಾಗದ ಪುರೋನುವಾಕ್ಯೆ. |
| ಇಂದ್ರಂ ನರಃ...ತ್ವಂ ನಃ ॥ | ಐಂದ್ರಯಾಗದ ಯಾಜ್ಯಾನುವಾಕ್ಯೆ. |

---

* ಈ ಮಂತ್ರಗಳು 4-2-11 ನೆಯ ಅನುವಾಕದಲ್ಲಿ ಇದೇ ಸಂಪುಟದ ಪುಟಸಂಖ್ಯೆ 141-142 ರಲ್ಲಿವೆ. ಇಲ್ಲಿ ಅವುಗಳ ಪ್ರತೀಕಗಳಿವೆ.

+ ಈ ಮಂತ್ರಗಳು ಸಂಪುಟ 4 ರಲ್ಲಿ 1-6-12 ನೆಯ ಅನುವಾಕದಲ್ಲಿವೆ. ಮೊದಲೆರಡು ಮಂತ್ರಗಳು ಈ ಸಂಪುಟದಲ್ಲಿಯೇ ಇರುವುದರಿಂದ ಮೂರು ಮತ್ತು ನಾಲ್ಕನೆಯ ಮಂತ್ರಗಳ ತಾತ್ಪರ್ಯವನ್ನು ಮಾತ್ರ ಮುಂದೆ ನೀಡಿದೆ.

# *ವಿಶ್ವಕರ್ಮನ್, ಹವಿಷಾ ವಾವೃಧಾನೋ

ವಿಶ್ವಕರ್ಮನ್ನಿತಿ ವಿಶ್ವ-ಕರ್ಮನ್ನ್। ಹವಿಷಾ। ವಾವೃಧಾನಃ।

ವಿಶ್ವಕರ್ಮನ್, ಹವಿಷಾ ವಾವೃಧಾನಃ ಸ್ವಯಂ ಯಜಸ್ವ ತನುವಂ ಜುಷಾಣಃ।
ಮುಹ್ಯಂತ್ವನ್ಯೇ ಅಭಿತಸ್ಸಪತ್ನಾ ಇಹಾಸ್ಮಾಕಂ ಮಘವಾ ಸೂರಿರಸ್ತು॥

ವಿಶ್ವಕರ್ಮನ್ನಿತಿ ವಿಶ್ವ-ಕರ್ಮನ್ನ್। ಹವಿಷಾ। ವಾವೃಧಾನಃ। ಸ್ವಯಮ್। ಯಜಸ್ವ। ತನುವಮ್। ಜುಷಾಣಃ॥ ಮುಹ್ಯಂತು। ಅನ್ಯೇ। ಅಭಿತಃ। ಸಪತ್ನಾಃ। ಇಹ। ಅಸ್ಮಾಕಮ್। ಮಘವೇತಿ ಮಘ-ವಾ। ಸೂರಿಃ। ಅಸ್ತು॥

| ಮಂತ್ರ | ವಿನಿಯೋಗ |
|---|---|
| ವಿಶ್ವಕರ್ಮನ್...ಅಸ್ತು॥ | ವೈಶ್ವಕರ್ಮಣ ಏಕಕಪಾಲಯಾಗದ ಪುರೋನುವಾಕ್ಯೆ. |

🔔 **ವಿಶ್ವಕರ್ಮನ್**=ಹೇ! ವಿಶ್ವಕರ್ಮದೇವನೇ! **ಹವಿಷಾ**=[ನಾವು ಸಮರ್ಪಿಸುವ] ಹವಿಸ್ಸಿನಿಂದ; **ವಾವೃಧಾನಃ**=ಅತಿಶಯವಾಗಿ ವರ್ಧಿಸಿದವನಾಗಿ; **ತನುವಮ್**=ಶರೀರವನ್ನು; **ಜುಷಾಣಃ**=ಧರಿಸಿದವನಾಗಿ; **ಸ್ವಯಮ್**=ನೀನಾಗಿಯೇ; **ಯಜಸ್ವ**=ಯಾಗಾನುಷ್ಠಾನ ಮಾಡಿಸು. **ಅನ್ಯೇ**=[ನಮ್ಮ] ಉಳಿದ; **ಅಭಿತಃ**=ಸುತ್ತಲಿನ; **ಸಪತ್ನಾಃ**=ಶತ್ರುಗಳು; **ಇಹ**=ಈ ಅನುಷ್ಠಾನದ ವಿಷಯದಲ್ಲಿ; **ಮುಹ್ಯಂತು**=ಗೊಂದಲಕ್ಕೀಡಾಗಲಿ; **ಅಸ್ಮಾಕಮ್**=[ಅನುಷ್ಠಾನವನ್ನು] ಮಾಡುವ ನಮಗೆ; **ಮಘವಾ**=ಅನ್ನದಿಂದ ಕೂಡಿದ; **ಸೂರಿಃ**=ವಿದ್ವಾಂಸನಾದ [ಮಗನು]; **ಅಸ್ತು**=ಉಂಟಾಗಲಿ.

ಇರುವುದರಿಂದ-ಆಯಾ ಸ್ವಿಷ್ಟಕೃದಗ್ನಿಗಳನ್ನು ಆಹ್ವಾನಪರವಾದ ಮಂತ್ರಗಳಿಂದ ಯಾವಾಗಲೂ ಆಹ್ವಾನಿಸುತ್ತಾರೆ. ಅಂತಹ ಅಗ್ನಿಯು ನೀನಾಗಿರುವೆ.

* ಈ ಎರಡು ಮಂತ್ರಗಳು 4.6.2 ನೆಯ ಅನುವಾಕದಲ್ಲಿವೆ.

# *ವಿಶ್ವಕರ್ಮನ್, ಹವಿಷಾ ವರ್ಧನೇನ ॥ ೩೬-13 ॥

[ಸೂರ್ಯಸ್ಯ ಮನುಷೋ ಮರುತಃ ಪಾವಕ ಮಹೋಭೀ ರಥೇಶುಭಂ

ಕೇನ ಷಟ್ಚತ್ವಾರಿಗ್ಂಶಚ್ಚ ॥]

---

ವಿಶ್ವಕರ್ಮನ್ನಿತಿ ವಿಶ್ವ-ಕರ್ಮನ್ನ್। ಹವಿಷಾ। ವರ್ಧನೇನ॥ (೩೬)॥

---

ವಿಶ್ವಕರ್ಮನ್, ಹವಿಷಾ ವರ್ಧನೇನ ತ್ರಾತಾರಮಿಂದ್ರಮಕೃಣೋರವಧ್ಯಮ್ ।

ತಸ್ಮೈ ವಿಶಸ್ಸಮನಮಂತ ಪೂರ್ವೀರಯಮುಗ್ರೋ ವಿಹವ್ಯೋ ಯಥಾಽಸತ್ ॥

---

ವಿಶ್ವಕರ್ಮನ್ನಿತಿ ವಿಶ್ವ-ಕರ್ಮನ್ನ್ । ಹವಿಷಾ । ವರ್ಧನೇನ । ತ್ರಾತಾರಮ್ ।

ಇಂದ್ರಮ್ । ಅಕೃಣೋಃ । ಅವಧ್ಯಮ್ ॥ ತಸ್ಮೈ । ವಿಶಃ । ಸಮಿತಿ । ಅನಮಂತ ।

ಪೂರ್ವೀಃ । ಅಯಮ್ । ಉಗ್ರಃ । ವಿಹವ್ಯ ಇತಿ ವಿ-ಹವ್ಯಃ । ಯಥಾ । ಅಸತ್ ॥

---

| ಮಂತ್ರ | ವಿನಿಯೋಗ |
|---|---|
| ವಿಶ್ವಕರ್ಮನ್...ಯಥಾಽಸತ್ ॥ | ಅದೇ ಯಾಗದ ಯಾಜ್ಯಾನುವಾಕ್ಯೆ. |

---

🔔 **ವಿಶ್ವಕರ್ಮನ್**=ಹೇ! ವಿಶ್ವಕರ್ಮದೇವನೇ! **ಹವಿಷಾ**=[ನಾವು ಸಮರ್ಪಿಸಿದ] ಹವಿಸ್ಸಿನಿಂದ [ಉಂಟಾದ]; **ವರ್ಧನೇನ**=ಬೆಳವಣಿಗೆಯಿಂದ [ಕೂಡಿದ] [ನೀನು] [ಈ ಯಜಮಾನನನ್ನು] **ತ್ರಾತಾರಮ್**=ಬೇರೆಯವರನ್ನು ರಕ್ಷಿಸುವವನನ್ನಾಗಿಯೂ; **ಇಂದ್ರಮ್**=ಪರಮೈಶ್ವರ್ಯದಿಂದ ಕೂಡಿರುವವನನ್ನಾಗಿಯೂ; **ಅವಧ್ಯಮ್**=ಯಾರಿಂದಲೂ ಹಿಂಸಿಸಲು ಸಾಧ್ಯವಾಗದವನನ್ನಾಗಿಯೂ; **ಅಕೃಣೋಃ**=ಮಾಡು. **ತಸ್ಮೈ**=ಅಂತಹ ಆ ಯಜಮಾನನಿಗೆ [ಯಜಮಾನನ ವಿಷಯದಲ್ಲಿ]; **ಪೂರ್ವೀಃ**=ಪೂರ್ವೋಕ್ತವಾದ ವರ್ಧನದಿಂದ ವಿಸ್ತೃತರಾಗಿರುವ; **ವಿಶಃ**=ಪ್ರಜೆಗಳು; **ಸಮನಮಂತ**=ಚೆನ್ನಾಗಿ ವಿಧೇಯರಾಗಲಿ. **ಅಯಮ್**=ಈ ಯಜಮಾನನು; **ಉಗ್ರಃ**=ತೀವ್ರವಾದ ಬಲವುಳ್ಳವನಾಗಿ; **ವಿಹವ್ಯಃ**=ಬಗೆಬಗೆಯ ಯಾಗಗಳನ್ನು ಅನುಷ್ಠಿಸಲು ಯೋಗ್ಯನಾಗಿ; **ಯಥಾ**= ಹೇಗೆ; **ಅಸತ್**=ಆಗುವನೋ [ಹಾಗೆ ಅನುಗ್ರಹಿಸು].

ಅಗ್ನಿಯು ದೇವತೆಗಳಿಗೆ ಹವಿಸ್ಸುಗಳನ್ನು ಒಯ್ಯುವವನು. ಆದಕ್ಕಾಗಿ ಋತ್ವಿಜರು ಸ್ರುಕ್ಕಿನಿಂದ ಹವಿಸ್ಸನ್ನು ಸಮರ್ಪಿಸಿ ಪ್ರಾರ್ಥಿಸಿಕೊಳ್ಳುತ್ತಾರೆ. ಆ ಸ್ವಿಷ್ಟಕೃದಗ್ನಿಯು ಈ ಹೋಮದಿಂದ ಪ್ರಸನ್ನನಾಗಲಿ.

ತಾ ||ಇಂದ್ರಂ ವೋ-ಎಲ್ಲೈ! ಋತ್ವಿಗ್ಯಜಮಾನರೇ! ನಿಮ್ಮ ಮತ್ತು ನಮ್ಮ ಪುತ್ರಭೃತ್ಯಾದಿಗಳಿಗಾಗಿ ಎಲ್ಲರಿಗಿಂತಲೂ ಮೇಲಿರುವ/ಸರ್ವೋತ್ಕೃಷ್ಟನಾದ ಇಂದ್ರನನ್ನು ಹವಿಸ್ಸಿನ ಸ್ವೀಕಾರಕ್ಕಾಗಿ ಆಹ್ವಾನಿಸುತ್ತೇವೆ. ಆ ಇಂದ್ರನು ನಮ್ಮ ವಿಷಯದಲ್ಲಿ ಇತರರಿಗಿಂತಲೂ ಹೆಚ್ಚಾಗಿ ಅನುಗ್ರಹ ಮಾಡಲಿ/ನಮಗೆ ಮಾತ್ರವೇ ಹೆಚ್ಚಾಗಿ ಅನುಗ್ರಹ ಮಾಡಲಿ.

ಇಂದ್ರಂ ನರಃ-ಇಂದ್ರನೇ! ಅಗ್ನಿಷ್ಟೋಮಾದಿಯಾಗಗಳನ್ನು ಮಾಡುವ ಯಜಮಾನರು ಅಗ್ನಿಚಯನದಲ್ಲಿ ಅಗ್ನ್ಯಾದಿದೇವತೆಗಳೊಡನೆ ಹವಿಸ್ಸಿನ ಅರ್ಧವನ್ನು ಸ್ವೀಕರಿಸುವುದಕ್ಕಾಗಿ ನಿನ್ನನ್ನು ಆಹ್ವಾನಿಸುತ್ತಾರೆ. ನೀನು ಶೂರನು. ಮಾನವರಿಗೆ ಧನವನ್ನು ನೀಡತಕ್ಕವನು. ಬಲವನ್ನು ಕೊಡತಕ್ಕವನು. ನೀನು ತೃಪ್ತಿಶೀಲನು. ನಮ್ಮ ಬಲವನ್ನು ವೃದ್ಧಿಗೊಳಿಸುವವನಾಗು. ನಮಗೆ ಗವಾದಿಪಶುಸಂಪತ್ತಿಯನ್ನು ನೀಡು/ನಮ್ಮ ಕೊಟ್ಟಿಗೆಯು ಗೋವುಗಳಿಂದ ತುಂಬಿರುವಂತೆ ಮಾಡು.

ಹೇ! ವಿಶ್ವಕರ್ಮದೇವನೇ! ನಾವು ಸಮರ್ಪಿಸುವ ಹವಿಸ್ಸನ್ನು ಸ್ವೀಕರಿಸಿ, ನಮ್ಮಿಂದ ಅನುಷ್ಠಾನವನ್ನು ಮಾಡಿಸು. ನಮ್ಮ ಶತ್ರುಗಳು ಭ್ರಾಂತರಾಗಲಿ. ನಮಗೆ ವಿವಿಧ ಸಂಪತ್ತಿನಿಂದ ತುಂಬಿರುವ ಸಂತತಿಯಾಗಲಿ.

ಹೇ! ವಿಶ್ವಕರ್ಮದೇವನೇ! ನಾವು ಅರ್ಪಿಸುವ ಈ ಹವಿಸ್ಸಿನಿಂದ ನೀನು ಸಂತುಷ್ಟನಾಗಿ, ಈ ಯಜಮಾನನನ್ನು ರಕ್ಷಕನನ್ನಾಗಿಯೂ, ಐಶ್ವರ್ಯಯುಕ್ತನನ್ನಾಗಿಯೂ, ಬಲಿಷ್ಠನನ್ನಾಗಿಯೂ ಮಾಡು. ಅವನಿಗೆ ಪ್ರಜೆಗಳು ವಿಧೇಯರಾಗುವಂತೆ ಮಾಡು. ಈ ಯಜಮಾನನು ಅನೇಕ ಬಗೆಯ ಯಾಗಗಳನ್ನು ಅನುಷ್ಠಿಸುವಂತೆ ಆಗಲಿ. ನೀನು ಆ ರೀತಿ ಅನುಗ್ರಹಿಸು.

---

## ವಿನಿಯೋಗಸಂಗ್ರಹ

ಅಥ ಯಾಜ್ಯಾ ಸಾಕಮೇಧೇ ಹ್ಯನೀಕವತಿಯಾಗಕೇ ।
ಆಜ್ಯಭಾಗಾನುವಾಕ್ಯೇ ದ್ವೇ ಹ್ಯಗ್ನಿರ್ವೃತ್ರೇತಿ1-2 ವರ್ಣಿತೇ ॥
2-5ಭದ್ರಾ ತಿಸ್ರಃ ಪ್ರಧಾನೇ ಸ್ಯುಃ 6-7ಸ್ವಸ್ತಿ ಸ್ವಿಷ್ಟಕೃತಿ ದ್ವಯಮ್ ।
ಅಗ್ನಿಂ8-9 ಸಾಂತಪನೀಯಾಜ್ಯಭಾಗಯೋರ್ದ್ವೇ ಪ್ರಧಾನಕೇ ॥
10-12ಸಾಂತ ತಿಸ್ರಃ ಪಿಪ್ರೀಹ್ಯಗ್ನೇ 13-14ದ್ವಯಂ ಸ್ವಿಷ್ಟಕೃತೀರಿತಮ್ ।

15-16ಅಗ್ನಿನಾ ಗೃಹಮೇಧೀಯೇ ದ್ವೇ ಸ್ಯಾತಾಮಾಜ್ಯಭಾಗಯೋಃ ॥
17-19ಗೃಹ ಪ್ರಧಾನೇ ತಿಸ್ರಃ ಸ್ಯುರುಪ20-21 ಸ್ವಿಷ್ಟಕೃತಿ ದ್ವಯಮ್ ।
22-25ಕ್ರೀಡಂ ಚತುಷ್ಟಯಂ ಕ್ರೀಡಿಯಾಗೇ ಹ್ಯಗ್ನಿಮಿತಿ26-27 ದ್ವಯಮ್ ॥
ಸಂಯಾಜ್ಯೇ ಸ್ಯಾಮಥೇಂದ್ರಾಗ್ನೀ28-29 ಶ್ಲಥಚ್ಛೈಂದ್ರಾಗ್ನಯಾಗಕೇ ।
30ಇಂದ್ರಮಿಂದ್ರಂ31 ಚೈಂದ್ರಯಾಗೇ 32-33ವಿಶ್ವ ದ್ವೇ ವೈಶ್ವಕರ್ಮಣೇ ।
ತ್ರಯಸ್ತ್ರಿಂಶದೃಚಃ ಪ್ರೋಕ್ತಾ ಅನುವಾಕ ಇಹಾಂತಿಮೇ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-33

---

ಅಪಾಂ ತ್ವೇಮನ್ನಯಂ ಪುರಃ ಪ್ರಾಚೀ ಧ್ರುವಕ್ಷಿತಿಸ್ತ್ರ್ಯವಿರಿಂದ್ರಾಗ್ನೀ ಮಾ ಛಂದ ಆಶುಸ್ತ್ರಿವೃದಗ್ನೇರ್ಭಾಗೋऽಸ್ಯೇಕಯೇಯಮೇವ ಸಾ ಯಾऽಗ್ನೇ ಜಾತಾನಗ್ನಿರ್ವೃತ್ರಾಣಿ ಜಂಘನತ್ತ್ರಯೋದಶ ॥ ೧೩ ॥

ಅಪಾಂ ತ್ವೇಂದ್ರಾಗ್ನೀ ಇಯಮೇವ ಸಾ ದೇವತಾತಾ ಷಟ್ತ್ರಿಗ್‌ಂಶತ್ ॥ ೩೬ ॥

ಅಪಾಂ ತ್ವೇಮನ್, ಹವಿಷಾ ವರ್ಧನೇನ ॥

॥ ಹರಿಃ ಓಮ್ ॥

ಶ್ರೀ ಕೃಷ್ಣಾರ್ಪಣಮಸ್ತು

ಇತಿ ಚತುರ್ಥಕಾಂಡೇ ತೃತೀಯಃ ಪ್ರಶ್ನಃ

# ತೈತ್ತಿರೀಯ ಸಂಹಿತಾ

## ಚತುರ್ಥಃ ಕಾಂಡಃ ಚತುರ್ಥಃ ಪ್ರಶ್ನಃ

## ॥ ಪ್ರಥಮೋಽನುವಾಕಃ ॥

**ರಶ್ಮಿರಸಿ ಕ್ಷಯಾಯ ತ್ವಾ ಕ್ಷಯಂ ಜಿನ್ವ**

---

ರಶ್ಮಿಃ । ಅಸಿ । ಕ್ಷಯಾಯ । ತ್ವಾ । ಕ್ಷಯಮ್ । ಜಿನ್ವ ।

---

ಮೂರನೆಯ ಪ್ರಶ್ನದಲ್ಲಿ ಐದು ಚಿತಿಗಳು ಹೇಳಲ್ಪಟ್ಟವು ಈ ನಾಲ್ಕನೆಯ ಪ್ರಶ್ನದಲ್ಲಿ ಐದನೆಯ ಚಿತಿಯ ಶೇಷಭಾಗವು ಹೇಳಲ್ಪಡುತ್ತದೆ. ಅದರಲ್ಲಿ ಮೊದಲನೆಯ ಅನುವಾಕದಲ್ಲಿ ಸ್ತೋಮಭಾಗೇಷ್ಟಕೋಪಧಾನಮಂತ್ರಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
|---|---|
| ೧) ರಶ್ಮಿರಸಿ.. ೨) ಪ್ರೇತಿರಸಿ.. | |
| ೩) ಅನ್ವಿತಿರಸಿ.. ೪) ಸಂಧಿರಸಿ.. | ಪೂರ್ವಭಾಗದಲ್ಲಿ ಇಡಬೇಕಾದ ಏಳು ಸ್ತೋಮಭಾಗೇಷ್ಟಕೆಗಳ ಉಪಧಾನಕ್ಕಾಗಿ. |
| ೫) ಪ್ರತಿಧಿರಸಿ.. ೬) ವಿಷ್ಟಂಭೋಽಸಿ.. | |
| ೭) ಪ್ರವಾಽಸಿ.. ॥ | |

---

▲ [ಎಲೈ! ಇಷ್ಟಕೆಯೇ!] ರಶ್ಮಿಃ ಅಸಿ=ನೀನು ಆದಿತ್ಯರಶ್ಮಿರೂಪಳಾಗಿರುವೆ. ಕ್ಷಯಾಯ =ನಿವಾಸಸಿದ್ಧಿಗಾಗಿ; ತ್ವಾ=ನಿನ್ನನ್ನು [* ಉಪದಧಾಮಿ=ಉಪಧಾನ ಮಾಡುತ್ತೇನೆ] ಕ್ಷಯಮ್=[ನೀನು ನಮಗೆ] ನಿವಾಸಸ್ಥಾನವನ್ನು; ಜಿನ್ವ=ಸಂಪಾದಿಸಿಕೊಡು.

---

* ಉಪದಧಾಮಿ ಎಂಬ ಪದವನ್ನು ಅನುವಾಕದ ಎಲ್ಲ ಮಂತ್ರಗಳಲ್ಲಿಯೂ ಅಧ್ಯಾಹಾರ ಮಾಡಿ ಅರ್ಥವನ್ನು ಪೂರ್ಣಗೊಳಿಸಬೇಕು. ಎಲ್ಲ ಪರ್ಯಾಯಗಳಲ್ಲಿಯೂ ಹೇ! ಇಷ್ಟಕೆಯೇ! ಎಂದು ಅನ್ವಯಿಸಬೇಕು.

ಪ್ರೇತಿರಸಿ ಧರ್ಮಾಯ ತ್ವಾ ಧರ್ಮಂ ಜಿನ್ವಾನ್ವಿತಿರಸಿ ದಿವೇ ತ್ವಾ ದಿವಂ ಜಿನ್ವ ಸಂಧಿರಸ್ಯಂತರಿಕ್ಷಾಯ ತ್ವಾಽಂತರಿಕ್ಷಂ ಜಿನ್ವ ಪ್ರತಿಧಿರಸಿ ಪೃಥಿವ್ಯೈ ತ್ವಾ ಪೃಥಿವೀಂ ಜಿನ್ವ

---

ಪ್ರೇತಿರಿತಿ ಪ್ರ–ಇತಿಃ । ಅಸಿ । ಧರ್ಮಾಯ । ತ್ವಾ । ಧರ್ಮಮ್ । ಜಿನ್ವ । ಅನ್ವಿತಿರಿತ್ಯನು–ಇತಿಃ । ಅಸಿ । ದಿವೇ । ತ್ವಾ । ದಿವಮ್ । ಜಿನ್ವ । ಸಂಧಿರಿತಿ ಸಮ್–ಧಿಃ । ಅಸಿ । ಅಂತರಿಕ್ಷಾಯ । ತ್ವಾ । ಅಂತರಿಕ್ಷಮ್ । ಜಿನ್ವ । ಪ್ರತಿಧಿರಿತಿ ಪ್ರತಿ–ಧಿಃ । ಅಸಿ । ಪೃಥಿವ್ಯೈ । ತ್ವಾ । ಪೃಥಿವೀಮ್ । ಜಿನ್ವ ।

---

▲ **ಪ್ರೇತಿಃ ಅಸಿ**=ನೀನು ಪ್ರಕೃಷ್ಟಗತಿಯುಳ್ಳವಳಾಗಿರುವೆ; **ಧರ್ಮಾಯ ತ್ವಾ**=ವಿಹಿತ ಕರ್ಮಾನುಷ್ಠಾನರೂಪವಾದ ಧರ್ಮದ ಸಿದ್ಧಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; **ಧರ್ಮಮ್ ಜಿನ್ವ**=[ನಮಗೆ] ಧರ್ಮವನ್ನು ಸಂಪಾದಿಸಿಕೊಡು. ▲ **ಅನ್ವಿತಿಃ ಅಸಿ**=[ನೀನು] ಅನುಕೂಲಗತಿಯುಳ್ಳ ದ್ಯುಲೋಕಸ್ವರೂಪಳು; **ದಿವೇ ತ್ವಾ**=ಸ್ವರ್ಗ ಸಿದ್ಧಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]. **ದಿವಮ್ ಜಿನ್ವ**=[ನಮಗೆ] ಸ್ವರ್ಗ ಪ್ರಾಪ್ತಿಯನ್ನು ಮಾಡಿಕೊಡು. ▲ **ಸಂಧಿಃ ಅಸಿ**=ನೀನು ದ್ಯಾವಾಪೃಥಿವಿಗಳ ಸಂಧಿ ರೂಪವಾದ ಅಂತರಿಕ್ಷವಾಗಿರುವೆ. **ಅಂತರಿಕ್ಷಾಯ ತ್ವಾ**=ಗಂಧರ್ವಲೋಕಾದಿ ಪ್ರಾಪ್ತಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]. **ಅಂತರಿಕ್ಷಮ್ ಜಿನ್ವ**=ಅಂತರಿಕ್ಷ ಲೋಕಗಳನ್ನು ಸಂಪಾದಿಸಿಕೊಡು. ▲ **ಪ್ರತಿಧಿಃ ಅಸಿ**=ನೀನು ಪ್ರತಿಧಿಶಬ್ದವಾಚ್ಯಳಾದ ಭೂಲೋಕರೂಪಳು; **ಪೃಥಿವ್ಯೈ ತ್ವಾ**=ಒಳ್ಳೆಯ ಭೂಮಿಯ ಪ್ರಾಪ್ತಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; **ಪೃಥಿವೀಮ್ ಜಿನ್ವ**=[ನಾವು] ಒಳ್ಳೆಯ ಭೂಮಿಯನ್ನು ಹೊಂದುವಂತೆ ಮಾಡು.

---

ಹೇ! ಸ್ತೋಮಭಾಗೇಷ್ಟಕೆಗಳೇ! ನಿಮ್ಮನ್ನು ನಿವಾಸಸಿದ್ಧಿಗಾಗಿಯೂ, ಧರ್ಮದ ಸಿದ್ಧಿಗಾಗಿಯೂ, ಸ್ವರ್ಗಸಿದ್ಧಿಗಾಗಿಯೂ, ಗಂಧರ್ವಾದಿಲೋಕಪ್ರಾಪ್ತಿಗಾಗಿಯೂ, ಒಳ್ಳೆಯ

**ವಿಷ್ಟಂಭೋಽಸಿ ವೃಷ್ಟ್ಯೈ ತ್ವಾ ವೃಷ್ಟಿಂ ಜಿನ್ವ ಪ್ರವಾಽಸ್ಯಹ್ನೇ ತ್ವಾಽಹರ್ಜಿನ್ವಾನುವಾಽಸಿ ರಾತ್ರಿಯೈ ತ್ವಾ ರಾತ್ರಿಂ ಜಿನ್ವೋ-**

---

ವಿಷ್ಟಂಭ ಇತಿ ವಿ-ಸ್ತಂಭಃ । ಅಸಿ । ವೃಷ್ಟ್ಯೈ । ತ್ವಾ । ವೃಷ್ಟಿಮ್ । ಜಿನ್ವ । ಪ್ರವೇತಿ ಪ್ರ-ವಾ । ಅಸಿ । ಅಹ್ನೇ । ತ್ವಾ । ಅಹಃ । ಜಿನ್ವ । ಅನುವೇತ್ಯನು-ವಾ । ಅಸಿ । ರಾತ್ರಿಯೈ । ತ್ವಾ । ರಾತ್ರಿಮ್ । ಜಿನ್ವ ।

---

| ಮಂತ್ರ | ವಿನಿಯೋಗ |
|---|---|
| ೧) ಅನುವಾಸಿ.. ೨) ಉಶಿಗಸಿ..<br>೩) ಪ್ರಕೇತೋಽಸಿ.. ೪) ಸುದೀತಿರಸಿ..<br>೫) ಓಜೋಽಸಿ.. ೬) ತಂತುರಸಿ..<br>೭) ಪೃತನಾಷಾಡಸಿ.. ॥ | ದಕ್ಷಿಣದಿಕ್ಕಿನಲ್ಲಿ ಇಡಬೇಕಾದ ಏಳು ಸ್ತೋಮಭಾಗೇಷ್ಟಕೆಗಳ ಉಪಧಾನಕ್ಕಾಗಿ. |

---

▲ **ವಿಷ್ಟಂಭಃ ಅಸಿ**=ನೀನು ನೀರನ್ನು ತಡೆದಿಟ್ಟುಕೊಳ್ಳುವ ಮೋಡರೂಪವಾದ ವಿಷ್ಟಂಭ ವಾಗಿದ್ದೀಯೆ. **ವೃಷ್ಟ್ಯೈ ತ್ವಾ**=ವೃಷ್ಟಿಪ್ರಾಪ್ತಿಗಾಗಿ ನಿನ್ನನ್ನು[ಉಪಧಾನ ಮಾಡುತ್ತೇನೆ] **ವೃಷ್ಟಿಮ್ ಜಿನ್ವ**=[ನಮಗೆ] ಒಳ್ಳೆಯ ವೃಷ್ಟಿಯು ಒದಗುವಂತೆ ಮಾಡು; ▲ **ಪ್ರವಾ ಅಸಿ**=ಮೊದಲು ಪ್ರವೃತ್ತಳಾಗುವ ಉಷಾರೂಪಳಾದುದರಿಂದ ಪ್ರವೆಯಾಗಿದ್ದೀಯೆ; **ಅಹ್ನೇ ತ್ವಾ**=ಒಳ್ಳೆಯ ದಿನವನ್ನು ಪಡೆಯುವುದಕ್ಕಾಗಿ ನಿನ್ನನ್ನು [ಇಲ್ಲಿ ಇಡುತ್ತೇನೆ]; **ಅಹಃ ಜಿನ್ವ**=ನಮಗೆ ಒಳ್ಳೆಯ ದಿನವನ್ನು ಅನುಗ್ರಹಿಸು. ▲ [ಎಲೈ! ಇಷ್ಟಕೆಯೇ!] **ಅನುವಾ ಅಸಿ**=ಸೂರ್ಯಾಸ್ತಮಯಾನಂತರ ಬರುವ ಸಾಯಂಸಂಧ್ಯಾರೂಪವಾದ ಅನುವೆಯಾಗಿರುವೆ. **ರಾತ್ರಿಯೈ ತ್ವಾ**=ಒಳ್ಳೆಯ ರಾತ್ರಿಯ ಸಿದ್ಧಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; **ರಾತ್ರಿಮ್ ಜಿನ್ವ**=ಶೋಭನರಾತ್ರಿಯನ್ನುಂಟುಮಾಡು.

---

ಭೂಮಿಯ ಪ್ರಾಪ್ತಿಗಾಗಿಯೂ, ವೃಷ್ಟಿಪ್ರಾಪ್ತಿಗಾಗಿಯೂ, ಒಳ್ಳೆಯ ದಿನವನ್ನು

ಉಶಿಗಸಿ[..ಉಶಿಗಸಿ(೧)]ವಸುಭ್ಯಸ್ತ್ವಾ ವಸೂಞ್ಜಿನ್ವ ಪ್ರಕೇತೋಽಸಿ ರುದ್ರೇಭ್ಯಸ್ತ್ವಾ ರುದ್ರಾಞ್ಜಿನ್ವ ಸುದೀತಿರಸ್ಯಾದಿತ್ಯೇಭ್ಯಸ್ತ್ವಾಽಽದಿತ್ಯಾಞ್ಜಿನ್ವೌಜೋಽಸಿ ಪಿತೃಭ್ಯಸ್ತ್ವಾ ಪಿತೄಞ್ಜಿನ್ವ

---

ಉಶಿಕ್ । ಅಸಿ ।(೧)। ವಸುಭ್ಯ ಇತಿ ವಸು-ಭ್ಯಃ । ತ್ವಾ । ವಸೂನ್ । ಜಿನ್ವ । ಪ್ರಕೇತ ಇತಿ ಪ್ರ-ಕೇತಃ । ಅಸಿ । ರುದ್ರೇಭ್ಯಃ । ತ್ವಾ । ರುದ್ರಾನ್ । ಜಿನ್ವ । ಸುದೀತಿರಿತಿ ಸು-ದೀತಿಃ । ಅಸಿ । ಆದಿತ್ಯೇಭ್ಯಃ । ತ್ವಾ । ಆದಿತ್ಯಾನ್ । ಜಿನ್ವ । ಓಜಃ । ಅಸಿ । ಪಿತೃಭ್ಯ ಇತಿ ಪಿತೃ-ಭ್ಯಃ । ತ್ವಾ । ಪಿತೄನ್ । ಜಿನ್ವ ।

---

▲ **ಉಶಿಕ್ ಅಸಿ**=ವಸುಗಳಿಗೆ ಪ್ರಿಯವಾಗಿ 'ಉಶಿಕ್' ಎನಿಸಿಕೊಂಡಿರುವೆ. **ವಸುಭ್ಯಃ ತ್ವಾ**=ವಸುಗಳ ಪ್ರೀತ್ಯರ್ಥವಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; **ವಸೂನ್ ಜಿನ್ವ**=ವಸುಗಳನ್ನು ಪ್ರೀತರನ್ನಾಗಿ ಮಾಡು. ▲ **ಪ್ರಕೇತಃ ಅಸಿ**=ರುದ್ರರ ಕೋರಿಕೆಯ ರೂಪವಾಗಿ 'ಪ್ರಕೇತ' ಎಂದು ಪ್ರಸಿದ್ಧಳಾಗಿದ್ದೀಯೆ. **ರುದ್ರೇಭ್ಯಃ ತ್ವಾ**=ರುದ್ರಪ್ರೀತ್ಯರ್ಥವಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; **ರುದ್ರಾನ್ ಜಿನ್ವ**=ರುದ್ರದೇವತೆಗಳನ್ನು ಸಂತೋಷಪಡಿಸು. ▲ **ಸುದೀತಿಃ ಅಸಿ**=ನೀನು ಶೋಭನದೀಪ್ತಿರೂಪಳಾಗಿರುವೆ; **ಆದಿತ್ಯೇಭ್ಯಃ ತ್ವಾ**=ಆದಿತ್ಯರನ್ನು ಸಂತೋಷಪಡಿಸಲು ನಿನ್ನನ್ನು [ಉಪಧಾನ ಮಾಡುತ್ತೇನೆ]; **ಆದಿತ್ಯಾನ್ ಜಿನ್ವ**=ಆದಿತ್ಯರನ್ನು ನಮ್ಮ ವಿಷಯದಲ್ಲಿ ಸುಪ್ರೀತರಾಗುವಂತೆ ಮಾಡು. ▲ **ಓಜಃ ಅಸಿ**=ಅನುಗ್ರಹಸಮರ್ಥವಾದ ಪಿತೃಗಳ ಬಲರೂಪವಾಗಿರುವೆ; **ಪಿತೃಭ್ಯಃ ತ್ವಾ**=ಪಿತೃಗಳ ಪ್ರೀತ್ಯರ್ಥವಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; **ಪಿತೄನ್ ಜಿನ್ವ**=ಪಿತೃಗಳನ್ನು ಸಂತೋಷಪಡಿಸು.

---

**ಪಡೆಯುವುದಕ್ಕಾಗಿಯೂ ಪೂರ್ವದಿಕ್ಕಿನಲ್ಲಿ ಉಪಧಾನ ಮಾಡುತ್ತೇನೆ. ನೀವು ಅವು ಲಭಿಸುವಂತೆ ಮಾಡಿರಿ.**

ತಂತುರಸಿ ಪ್ರಜಾಭ್ಯಸ್ತ್ವಾ ಪ್ರಜಾ ಜಿನ್ವ ಪೃತನಾಷಾಡಸಿ ಪಶುಭ್ಯಸ್ತ್ವಾ ಪಶೂಞ್ಜಿನ್ವ ರೇವದಸ್ಯೋಷಧೀಭ್ಯಸ್ತ್ವೌಷಧೀರ್ಜಿನ್ವಾ-

---

ತಂತುಃ । ಅಸಿ । ಪ್ರಜಾಭ್ಯ ಇತಿ ಪ್ರ-ಜಾಭ್ಯಃ । ತ್ವಾ । ಪ್ರಜಾ ಇತಿ ಪ್ರ-ಜಾಃ । ಜಿನ್ವ । ಪೃತನಾಷಾಟ್ । ಅಸಿ । ಪಶುಭ್ಯ ಇತಿ ಪಶು-ಭ್ಯಃ । ತ್ವಾ । ಪಶೂನ್ । ಜಿನ್ವ । ರೇವತ್ । ಅಸಿ । ಓಷಧೀಭ್ಯ ಇತ್ಯೋಷಧಿ-ಭ್ಯಃ । ತ್ವಾ । ಓಷಧೀಃ । ಜಿನ್ವ ।

---

| ಮಂತ್ರ | ವಿನಿಯೋಗ |
|---|---|
| ೧) ರೇವದಸಿ.. ೨) ಅಭಿಜಿದಸಿ.. ೩) ಅಧಿಪತಿರಸಿ.. ೪) ಯಂತಾಸಿ.. ೫) ಸಗ್ಂಸರ್ಪೋಽಸಿ.. ೬) ವಯೋಧಾ ಅಸಿ.. ೭) ತ್ರಿವೃದಸಿ ॥ | ಪಶ್ಚಿಮದಿಕ್ಕಿನಲ್ಲಿ ಇಡಬೇಕಾದ ಏಳು ಸ್ತೋಮಭಾಗೇಷ್ಟಕೆಗಳ ಉಪಧಾನಕ್ಕಾಗಿ. |

---

🔔 **ತಂತುಃ ಅಸಿ**=ನೀನು ಪುತ್ರಪೌತ್ರಸಾಂತತ್ಯರೂಪಳಾಗಿರುವೆ. **ಪ್ರಜಾಭ್ಯಃ ತ್ವಾ**=ಪುತ್ರಪೌತ್ರಾದಿಪ್ರಾಪ್ತಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; **ಪ್ರಜಾಃ ಜಿನ್ವ**=ಪುತ್ರಪೌತ್ರಾದಿಗಳನ್ನು ಹೊಂದುವಂತೆ ಮಾಡು. 🔔 **ಪೃತನಾಷಾಟ್ ಅಸಿ**=ಪಶುಗಳನ್ನು ಅಪಹರಿಸಲು ಬರುವ ಶತ್ರುಸೇನೆಯನ್ನು ತಡೆಯಲು ಶಕ್ತಳಾಗಿದ್ದೀಯೆ. **ಪಶುಭ್ಯಃ ತ್ವಾ**=ಗವಾದಿಪಶುಪ್ರಾಪ್ತ್ಯರ್ಥವಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; **ಪಶೂನ್ ಜಿನ್ವ**=ಗವಾದಿಪಶುಗಳನ್ನು ಕೊಟ್ಟು ಸಂತೋಷಪಡಿಸು. 🔔 [ಎಲೈ! ಇಷ್ಟಕೆಯೇ!] [ನೀನು] **ರೇವತ್ ಅಸಿ**=ಓಷಧಿಗಳಿಂದ ಪ್ರಾಪ್ತವಾಗುವ ಧನರೂಪವಾದ ಜೀವನವಾಗಿರುವೆ. **ಓಷಧೀಭ್ಯಃ ತ್ವಾ**=ಓಷಧಿಗಳ ಸಿದ್ಧಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; **ಓಷಧೀಃ ಜಿನ್ವ**=ಓಷಧಿಗಳು ಪ್ರಾಪ್ತವಾಗುವಂತೆ ಮಾಡು.

ಭಿಜಿದಸಿ ಯುಕ್ತಗ್ರಾವೇಂದ್ರಾಯ ತ್ವೇಂದ್ರಂ ಜಿನ್ವಾಧಿಪತಿರಸಿ ಪ್ರಾಣಾಯ [(೨) ತ್ವಾ ಪ್ರಾಣಂ] ತ್ವಾ ಪ್ರಾಣಂ ಜಿನ್ವ ಯಂತಾಽಸ್ಯಪಾನಾಯ ತ್ವಾಽಪಾನಂ ಜಿನ್ವ

---

ಅಭಿಜಿದಿತ್ಯಭಿ-ಜಿತ್ । ಅಸಿ । ಯುಕ್ತಗ್ರಾವೇತಿ ಯುಕ್ತ-ಗ್ರಾವಾ । ಇಂದ್ರಾಯ । ತ್ವಾ । ಇಂದ್ರಮ್ । ಜಿನ್ವ । ಅಧಿಪತಿರಿತ್ಯಧಿ-ಪತಿಃ । ಅಸಿ । ಪ್ರಾಣಾಯೇತಿ ಪ್ರ-ಅನಾಯ । (೨) । ತ್ವಾ । ಪ್ರಾಣಮಿತಿ ಪ್ರ-ಅನಮ್ । ಜಿನ್ವ । ಯಂತಾ । ಅಸಿ । ಅಪಾನಾಯೇತ್ಯಪ-ಅನಾಯ । ತ್ವಾ । ಅಪಾನಮಿತ್ಯಪ-ಅನಮ್ । ಜಿನ್ವ ।

---

▲ **ಯುಕ್ತಗ್ರಾವಾ ಅಭಿಜಿತ್ ಅಸಿ**=ಶತ್ರುಗಳನ್ನು ಜಯಿಸುವ ಕಲ್ಲಿನಂತೆ ಕಠಿನವಾದ ವಜ್ರಾಯುಧವನ್ನು ಕೈಯಲ್ಲಿ ಧರಿಸಿರುವವಳು; **ಇಂದ್ರಾಯ ತ್ವಾ**=ವಜ್ರಹಸ್ತನಾದ ಇಂದ್ರನ ಪ್ರೀತಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; **ಇಂದ್ರಮ್ ಜಿನ್ವ**=ಕಣ್ಣೇ ಮೊದಲಾದ ಇಂದ್ರಿಯಗಳನ್ನು ಪಾಲಿಸುವ ಇಂದ್ರನನ್ನು ಸಂತೋಷಪಡಿಸು. ▲ **ಅಧಿಪತಿಃ ಅಸಿ**=ಶ್ವಾಸರೂಪವಾದ ಪ್ರಾಣವಾಗಿದ್ದೀಯೆ; **ಪ್ರಾಣಾಯ ತ್ವಾ**=ಪ್ರಾಣಕ್ಕಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; **ಪ್ರಾಣಮ್ ಜಿನ್ವ**=ಪ್ರಾಣವನ್ನು ಸ್ಥಿರವಾಗಿರುವಂತೆ ಮಾಡು. ▲ **ಯಂತಾ ಅಸಿ**=ಹೊರಕ್ಕೆ ಹೋಗಿರುವ ಶ್ವಾಸವು ಮತ್ತೆ ಒಳಗೆ ಬರುವಂತೆ ನಿಯಂತ್ರಿಸುವ ಅಪಾನವು ನೀನಾಗಿರುವೆ; **ಅಪಾನಾಯ ತ್ವಾ**=ಅಪಾನವಾಯುವು ಚೆನ್ನಾಗಿರುವುದಕ್ಕಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; **ಅಪಾನಮ್ ಜಿನ್ವ**=ಅಪಾನವನ್ನು ತನ್ನ ಕಾರ್ಯದಲ್ಲಿ ಸ್ಥಿರವಾಗಿರುವಂತೆ ಮಾಡು.

---

**ಹೇ! ಸ್ತೋಮಭಾಗೇಷ್ಟಕೆಗಳೇ! ನಿಮ್ಮನ್ನು ಒಳ್ಳೆಯ ರಾತ್ರಿಯ ಸಿದ್ಧಿಗಾಗಿಯೂ, ವಸುಗಳ ಪ್ರೀತಿಗಾಗಿಯೂ, ರುದ್ರರ ಪ್ರೀತಿಗಾಗಿಯೂ, ಆದಿತ್ಯರ ಪ್ರೀತ್ಯರ್ಥವಾಗಿಯೂ, ಪಿತೃಗಳ ಪ್ರೀತ್ಯರ್ಥವಾಗಿಯೂ, ಪುತ್ರಪೌತ್ರಾದಿಗಳನ್ನು ಪಡೆಯುವುದಕ್ಕಾಗಿಯೂ, ಗವಾದಿಪಶುಗಳ ಪ್ರಾಪ್ತಿಗಾಗಿಯೂ ದಕ್ಷಿಣ ದಿಕ್ಕಿನಲ್ಲಿ ಉಪಧಾನ ಮಾಡುತ್ತೇನೆ.**

ಸಗ್ಂಸರ್ಪೋಽಸಿ ಚಕ್ಷುಷೇ ತ್ವಾ ಚಕ್ಷುರ್ಜಿನ್ವ ವಯೋಧಾ ಅಸಿ ಶ್ರೋತ್ರಾಯ ತ್ವಾ ಶ್ರೋತ್ರಂ ಜಿನ್ವ ತ್ರಿವೃದಸಿ ಪ್ರವೃದಸಿ

---

ಸಗ್ಂಸರ್ಪ ಇತಿ ಸಮ್-ಸರ್ಪಃ । ಅಸಿ । ಚಕ್ಷುಷೇ । ತ್ವಾ । ಚಕ್ಷುಃ । ಜಿನ್ವ । ವಯೋಧಾ ಇತಿ ವಯಃ-ಧಾಃ । ಅಸಿ । ಶ್ರೋತ್ರಾಯ । ತ್ವಾ । ಶ್ರೋತ್ರಮ್ । ಜಿನ್ವ । ತ್ರಿವೃದಿತಿ ತ್ರಿ-ವೃತ್ । ಅಸಿ । ಪ್ರವೃದಿತಿ ಪ್ರ-ವೃತ್ । ಅಸಿ ।

---

| ಮಂತ್ರ | ವಿನಿಯೋಗ |
| --- | --- |
| ೧) ಪ್ರವೃದಸಿ ॥ ೨) ಸಂವೃದಸಿ ॥<br>೩) ವಿವೃದಸಿ ॥ ೪) ಸಗ್ಂರೋಹೋಽಸಿ ॥<br>೫) ನೀರೋಹೋಽಸಿ ॥ ೬) ಪ್ರರೋಹೋಽಸಿ ॥<br>೭) ಅನುರೋಹೋಽಸಿ ॥ | ಉತ್ತರದಿಕ್ಕಿನಲ್ಲಿ ಇಡಬೇಕಾದ ಏಳು ಸ್ತೋಮಭಾಗೇಷ್ಟಕೆಗಳ ಉಪಧಾನಕ್ಕಾಗಿ. |

---

▲ ಸಂಸರ್ಪಃ ಅಸಿ=ಚಯನಧನಕ್ಕಾಗಿ ಪ್ರವೃತ್ತನಾಗುವಂತೆ ಮಾಡುವ ದೃಷ್ಟಿರೂಪಳಾಗಿರುವೆ. ಚಕ್ಷುಷೇ ತ್ವಾ=ಒಳ್ಳೆಯ ಕಣ್ಣಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]; ಚಕ್ಷುಃ ಜಿನ್ವ=ಒಳ್ಳೆಯ ಕಣ್ಣನ್ನು ಅನುಗ್ರಹಿಸಿ ಸಂತೋಷಪಡಿಸು. ▲ ವಯೋಧಾಃ ಅಸಿ=ಹಕ್ಕಿಯಂತೆ ಎಲ್ಲ ಕಡೆಗಳಲ್ಲಿಯೂ ಪ್ರವೃತ್ತವಾಗುವ ಶ್ರೋತ್ರಶಕ್ತಿಯು ನೀನಾಗಿರುವೆ; ಶ್ರೋತ್ರಾಯ ತ್ವಾ=ಒಳ್ಳೆಯ ಕಿವಿಯನ್ನು ಪಡೆಯಲು ನಿನ್ನನ್ನು [ಇಲ್ಲಿ ಇಡುತ್ತೇನೆ] ಶ್ರೋತ್ರಮ್ ಜಿನ್ವ=ಒಳ್ಳೆಯ ಕಿವಿಯನ್ನು ಕೊಟ್ಟು ಸಂತೋಷಪಡಿಸು. ▲ ತ್ರಿವೃತ್ ಅಸಿ=ಪುರುಷ-ಸ್ತ್ರೀ-ಸಂಯೋಗ ಈ ಮೂರು ಅವಯವಗಳುಳ್ಳ ಮಿಥುನೀಭಾವ ರೂಪಳು ನೀನು; [ನಿನ್ನನ್ನು ಉಪಧಾನ ಮಾಡುತ್ತೇನೆ]. ▲ [ಹೇ! ಇಷ್ಟಕೆಯೇ!] ಪ್ರವೃತ್ ಅಸಿ=ಸ್ತ್ರೀಪುರುಷರ ಸಂಭೋಗಪ್ರವೃತ್ತಿರೂಪಳಾಗಿರುವೆ; [ನಿನ್ನನ್ನು ಉಪಧಾನ ಮಾಡುತ್ತೇನೆ]

---

ನೀವು ನನಗೆ ಅವುಗಳೆಲ್ಲವೂ ಲಭಿಸುವಂತೆ ಮಾಡಿರಿ.

## ಸಂವೃದಸಿ ವಿವೃದಸಿ ಸಗ್ಂರೋಹೋಽಸಿ

## ನೀರೋಹೋಽಸಿ ಪ್ರರೋಹೋಽಸ್ಯನುರೋಹೋಽಸಿ

---

ಸಂವೃದಿತಿ ಸಮ್-ವೃತ್ । ಅಸಿ । ವಿವೃದಿತಿ ವಿ-ವೃತ್ । ಅಸಿ । ಸಗ್ಂರೋಹ ಇತಿ ಸಮ್-ರೋಹಃ । ಅಸಿ । ನೀರೋಹ ಇತಿ ನಿಃ-ರೋಹಃ । ಅಸಿ । ಪ್ರರೋಹ ಇತಿ ಪ್ರ-ರೋಹಃ । ಅಸಿ । ಅನುರೋಹ ಇತ್ಯನು-ರೋಹಃ । ಅಸಿ ।

---

▲ ಸಂವೃತ್ ಅಸಿ=ಸಂಭೋಗವ್ಯಾಪಾರರೂಪಳಾಗಿರುವೆ. [ನಿನ್ನನ್ನು ಉಪಧಾನ ಮಾಡುತ್ತೇನೆ]. ▲ ವಿವೃತ್ ಅಸಿ=ನೀನು ಸಂಯೋಗನಿವೃತ್ತಿರೂಪಳಾಗಿರುವೆ. [ನಿನ್ನನ್ನು ಉಪಧಾನ ಮಾಡುತ್ತೇನೆ]. ▲ ಸಂರೋಹಃ ಅಸಿ=[ನೀನು] ಸ್ತ್ರೀಕ್ಷೇತ್ರದಲ್ಲಿ ಬೀಜಾರೋಪರೂಪಳಾಗಿರುವೆ.[ನಿನ್ನನ್ನು ಉಪಧಾನ ಮಾಡುತ್ತೇನೆ]. ▲ ನೀರೋಹಃ ಅಸಿ= ಗರ್ಭಾಶಯದಲ್ಲಿ ಬೀಜದ ನಿಃಶೇಷವ್ಯಾಪ್ತಿರೂಪವಾಗಿರುವೆ. ▲ ಪ್ರರೋಹಃ ಅಸಿ= [ನೀನು] ಶರೀರಾಕಾರಪರಿಣಾಮರೂಪವಾಗಿರುವೆ. ▲ ಅನುರೋಹಃ ಅಸಿ= ಪುತ್ರಾದಿ ರೂಪದಿಂದ ಹುಟ್ಟುವ ರೂಪವಾಗಿರುವೆ. [ನಿನ್ನನ್ನು ಉಪಧಾನ ಮಾಡುತ್ತೇನೆ].

---

ಹೇ! ಸ್ತೋಮಭಾಗೇಷ್ಟಕೆಗಳೇ! ನಿಮ್ಮನ್ನು ಓಷಧಿಗಳ ಪ್ರಾಪ್ತಿಗಾಗಿಯೂ, ಇಂದ್ರನ ಪ್ರೀತ್ಯರ್ಥವಾಗಿಯೂ, ಪ್ರಾಣಸ್ಥೈರ್ಯಕ್ಕಾಗಿಯೂ, ಅಪಾನಸ್ಥಿರತೆಗಾಗಿಯೂ, ಉತ್ತಮ ಕಣ್ಣಿಗಾಗಿಯೂ, ಶ್ರೋತ್ರಶಕ್ತಿಗಾಗಿಯೂ ಉಪಧಾನ ಮಾಡುವೆನು. ಹೇ! ಇಷ್ಟಕೆಯೇ ನೀನು ಮಿಥುನೀಭಾವರೂಪಳೂ ಆಗಿರುವೆ.

ಹೇ! ಸ್ತೋಮಭಾಗೇಷ್ಟಕೆಗಳೇ! ನೀವು ಸ್ತ್ರೀಪುರುಷಸಂಭೋಗಪ್ರವೃತ್ತಿರೂಪವಾಗಿಯೂ, ಸಂಭೋಗವ್ಯಾಪಾರರೂಪವಾಗಿಯೂ, ಸಂಯೋಗನಿವೃತ್ತಿರೂಪವಾಗಿಯೂ, ಸ್ತ್ರೀಕ್ಷೇತ್ರದಲ್ಲಿ ಬೀಜಾರೋಪರೂಪವಾಗಿಯೂ, ಗರ್ಭಾಶಯದಲ್ಲಿ ಬೀಜದ ನಿಶ್ಶೇಷವ್ಯಾಪ್ತಿರೂಪವಾಗಿಯೂ, ಶರೀರಾಕಾರಪರಿಣಾಮರೂಪವಾಗಿಯೂ, ಪುತ್ರಾದಿ ರೂಪದಿಂದ ಹುಟ್ಟುವ ರೂಪವಾಗಿಯೂ ಇರುವಿರಿ. ಇಂತಹ ನಿಮ್ಮನ್ನು ಉಪಧಾನ ಮಾಡುತ್ತೇನೆ.

## ವಸುಕೋಽಸಿ ವೇಷಶ್ರಿರಸಿ ವಸ್ಯಷ್ಟಿರಸಿ ॥ ೩-1 ॥

[ಉಶಿಗಸಿ ಪ್ರಾಣಾಯ ತ್ರಿಚತ್ವಾರಿಗ್ಂಶಚ್ಚ ॥]

---

ವಸುಕಃ । ಅಸಿ । ವೇಷಶ್ರಿರಿತಿ ವೇಷ-ಶ್ರೀಃ । ಅಸಿ । ವಸ್ಯಷ್ಟಿಃ । ಅಸಿ ॥ (೩) ॥

---

| ಮಂತ್ರ | ವಿನಿಯೋಗ |
| --- | --- |
| ೧) ವಸುಕೋಽಸಿ ॥ | ಮಧ್ಯಭಾಗದಲ್ಲಿ ಇಡಬೇಕಾದ ಮೂರು ಸ್ತೋಮಭಾಗೇಷ್ಟಕೆಗಳ ಉಪಧಾನಕ್ಕಾಗಿ. |
| ೨) ವೇಷಶ್ರಿರಸಿ ॥ | |
| ೩) ವಸ್ಯಷ್ಟಿರಸಿ ॥ | |

---

▲ [ಇಷ್ಟಕೆಯೇ! ನೀನು] ವಸುಕಃ ಅಸಿ=ಧನಿಕಪುತ್ರರೂಪಳಾಗಿದ್ದೀಯೆ. ▲ ವೇಷಶ್ರೀಃ ಅಸಿ=ಪ್ರಾಪ್ತವಾದ ಧನವನ್ನು ವೃದ್ಧಿಪಡಿಸುವ ಪುತ್ರರೂಪಳಾಗಿರುವೆ. ▲ ವಸ್ಯಷ್ಟಿಃ ಅಸಿ=ಆ ಧನವನ್ನು ಅನುಭವಿಸುವ ಪುತ್ರರೂಪಳಾಗಿದ್ದೀಯೆ.

---

ಹೇ! ಇಷ್ಟಕೆಯೇ! ನೀನು ಧನಿಕಪುತ್ರರೂಪಳಾಗಿರುವೆ. ನೀನು ಧನವನ್ನು ಹೆಚ್ಚಿಸುವ ಪುತ್ರರೂಪಳು. ನೀನು ಆ ಧನವನ್ನು ಅನುಭವಿಸುವ ಪುತ್ರರೂಪಳೆಂದು ಮಧ್ಯಭಾಗ ದಲ್ಲಿ ಮೂರು ಇಷ್ಟಕೆಗಳನ್ನು ಉಪಧಾನ ಮಾಡಬೇಕು.

---

### ವಿನಿಯೋಗಸಂಗ್ರಹ

ಇಷ್ಟಕಾ ರಶ್ಮಿರಿತ್ಯೇಕತ್ರಿಂಶತ್ತು ಸ್ತೋಮಭಾಗಕಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-31

## ॥ ದ್ವಿತೀಯೋಽನುವಾಕಃ ॥

ರಾಜ್ಞ್ಯಸಿ ಪ್ರಾಚೀ ದಿಗ್ವಸವಸ್ತೇ ದೇವಾ

ಅಧಿಪತಯೋಽಗ್ನಿರ್ ಹೇತೀನಾಂ ಪ್ರತಿಧರ್ತಾ

---

ರಾಜ್ಞೀ । ಅಸಿ । ಪ್ರಾಚೀ । ದಿಕ್ । ವಸವಃ । ತೇ । ದೇವಾಃ । ಅಧಿಪತಯ ಇತ್ಯಧಿ-

ಪತಯಃ । ಅಗ್ನಿಃ । ಹೇತೀನಾಮ್ । ಪ್ರತಿಧರ್ತೇತಿ ಪ್ರತಿ-ಧರ್ತಾ ।

---

ಮೊದಲನೆಯ ಅನುವಾಕದಲ್ಲಿ ಪಂಚಮಚಿತಿಯಲ್ಲಿ ಸ್ತೋಮಭಾಗೇಷ್ಟಕೆಗಳ ಮಂತ್ರಗಳು ಉಕ್ತವಾಗಿವೆ. ಈ ಎರಡನೆಯ ಅನುವಾಕದಲ್ಲಿ ನಾಕಸದಿಷ್ಟಕೆಗಳು ಹೇಳಲ್ಪಟ್ಟಿವೆ. ಅವು ಐದು.

---

| ಮಂತ್ರ | ವಿನಿಯೋಗ |
| --- | --- |
| ರಾಜ್ಞ್ಯಸಿ...ರಥಂತರಗ್ಂ ಸಾಮ ಪ್ರತಿಷ್ಠಿತ್ಯೈ ॥ | ಪೂರ್ವದಿಕ್ಕಿನಲ್ಲಿ ಪ್ರಥಮ ನಾಕಸದಿಷ್ಟಕೆಯ ಉಪಧಾನಕ್ಕಾಗಿ. |

---

▲ [ಹೇ! ಇಷ್ಟಕೆಯೇ!] [ನೀನು] ರಾಜ್ಞೀ=ಪ್ರಕಾಶಮಾನಳಾಗಿರುವ; ಪ್ರಾಚೀ ದಿಕ್ ಅಸಿ=ಪೂರ್ವದಿಗ್ರೂಪಳಾಗಿರುವೆ. ತೇ=ನಿನ್ನ; ಅಧಿಪತಯಃ=ಅತಿಶಯವಾದ ಪಾಲಕರು; ದೇವಾಃ ವಸವಃ=ದೇವತೆಗಳಾದ ಅಷ್ಟವಸುಗಳು; ಅಗ್ನಿಃ=ಅಗ್ನಿದೇವನು; ಹೇತೀನಾಮ್=[ಶತ್ರುಗಳು ಪ್ರಯೋಗಿಸಿದ] ಆಯುಧಗಳನ್ನು; ಪ್ರತಿಧರ್ತಾ=ನಿರಾಕರಿಸತಕ್ಕವನು.

---

ಹೇ! ನಾಕಸದಿಷ್ಟಕೆಯೇ! ನೀನು ಶೋಭಿಸುವ ಪೂರ್ವದಿಕ್ಕಿನ ರೂಪದವಳಾಗಿರುವೆ. ನಿನ್ನನ್ನು ಎಂಟು ಜನ ವಸುಗಳು ಪಾಲಿಸುತ್ತಾರೆ. ನಿನ್ನನ್ನು ಹಿಂಸಿಸಲು ಶತ್ರುಗಳು

ತ್ರಿವೃತ್ತ್ವಾ ಸ್ತೋಮಃ ಪೃಥಿವ್ಯಾಗ್ಂ ಶ್ರಯತ್ವಾಜ್ಯಮುಕ್ಥಮ

ವ್ಯಥಯತ್ಸ್ತಭ್ನಾತು ರಥಂತರಗ್ಂ ಸಾಮ ಪ್ರತಿಷ್ಠಿತ್ಯೈ

ವಿರಾಡಸಿ ದಕ್ಷಿಣಾ ದಿಗ್ರುದ್ರಾಸ್ತೇ ದೇವಾ ಅಧಿಪತಯ

---

ತ್ರಿವೃದಿತಿ ತ್ರಿ-ವೃತ್ । ತ್ವಾ । ಸ್ತೋಮಃ । ಪೃಥಿವ್ಯಾಮ್ । ಶ್ರಯತು । ಆಜ್ಯಮ್ ।

ಉಕ್ಥಮ್ । ಅವ್ಯಥಯತ್ । ಸ್ತಭ್ನಾತು । ರಥಂತರಮಿತಿ ರಥಮ್-ತರಮ್ । ಸಾಮ ।

ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ವಿರಾಡಿತಿ ವಿ-ರಾಟ್ । ಅಸಿ । ದಕ್ಷಿಣಾ । ದಿಕ್ ।

ರುದ್ರಾಃ । ತೇ । ದೇವಾಃ । ಅಧಿಪತಯ ಇತ್ಯಧಿ-ಪತಯಃ ।

---

| ಮಂತ್ರ | ವಿನಿಯೋಗ |
|---|---|
| ವಿರಾಡಸಿ...ಬೃಹತ್ಸಾಮ ಪ್ರತಿಷ್ಠಿತ್ಯೈ ॥ | ದಕ್ಷಿಣದಿಕ್ಕಿನಲ್ಲಿ ನಾಕಸದಿಷ್ಟಕೆಯ ಉಪಧಾನಕ್ಕಾಗಿ. |

---

**ತ್ರಿವೃತ್ ಸ್ತೋಮಃ**=[ಸಾಮಸ್ತೋಮಗಳಲ್ಲಿ] ತ್ರಿವೃತ್ ಸ್ತೋಮವು; **ತ್ವಾ**=ನಿನ್ನನ್ನು; **ಪೃಥಿವ್ಯಾಮ್**=ಭೂಮಿಯಲ್ಲಿ; **ಶ್ರಯತು**=ಸ್ಥಾಪಿಸಲಿ. **ಆಜ್ಯಮ್ ಉಕ್ಥಮ್**=ಆಜ್ಯ ಸಂಜ್ಞಕವಾದ ಶಸ್ತ್ರವು; **ಅವ್ಯಥಯತ್**=ನಿನ್ನನ್ನು ಪೀಡಿಸದೇ; **ಸ್ತಭ್ನಾತು**=ಸ್ಥಿರಪಡಿಸಲಿ. **ರಥಂತರಮ್ ಸಾಮ**=ರಥಂತರನಾಮಕವಾದ ಸಾಮವು; **ಪ್ರತಿಷ್ಠಿತ್ಯೈ**=[ನಿನ್ನ] ಚಿರ ಕಾಲ ಇರುವಿಕೆಗೆ [ಕಾರಣವಾಗಲಿ]. 🔔 [ಹೇ! ಇಷ್ಟಕೆಯೇ!] **ವಿರಾಟ್**=ವಿಶೇಷವಾಗಿ ಪ್ರಕಾಶಿಸುತ್ತಿರುವ; **ದಕ್ಷಿಣಾ ದಿಕ್ ಅಸಿ**=ದಕ್ಷಿಣದಿಗ್ರೂಪಳಾಗಿದ್ದೀಯೆ. **ತೇ ಅಧಿಪತಯಃ**=ನಿನ್ನ ಅತಿಶಯವಾದ ಪಾಲಕರು; **ರುದ್ರಾಃ ದೇವಾಃ**=ದೇವತೆಗಳಾದ ರುದ್ರರು;

---

ಪ್ರಯೋಗಿಸುವ ಆಯುಧಗಳನ್ನು ಅಗ್ನಿದೇವನು ತಡೆಯುವನು. ಋಗ್ವೇದದಲ್ಲಿನ **'ಪ್ರ ವೋ ದೇವಾಯಾಗ್ನಯೇ ।'** [ಆಶ್ವ. ಶ್ರೌ. ಸೂ. ೫.೯.೧೫] ಎಂಬ ಆಜ್ಯಶಸ್ತ್ರವು ನಿನ್ನನ್ನು ಬಲಪಡಿಸಲಿ. ರಥಂತರಸಾಮದಿಂದ ನೀನು ದೃಢನಾಗು.

ಇಂದ್ರೋ ಹೇತೀನಾಂ ಪ್ರತಿಧರ್ತಾ ಪಂಚದಶಸ್ತ್ವಾ ಸ್ತೋಮಃ ಪೃಥಿವ್ಯಾಗ್ಂ ಶ್ರಯತು ಪ್ರ ಉಗಮುಕ್ಥಮವ್ಯಥಯತ್ಸ್ತಭ್ನಾತು ಬೃಹತ್ಸಾಮ ಪ್ರತಿಷ್ಠಿತ್ಯೈ ಸಮ್ರಾಡಸಿ ಪ್ರತೀಚೀ ದಿಗಾ [ದಿಕ್(೪)

ಇಂದ್ರಃ । ಹೇತೀನಾಮ್ । ಪ್ರತಿಧರ್ತೇತಿ ಪ್ರತಿ-ಧರ್ತಾ । ಪಂಚದಶ ಇತಿ ಪಂಚ-ದಶಃ । ತ್ವಾ । ಸ್ತೋಮಃ । ಪೃಥಿವ್ಯಾಮ್ । ಶ್ರಯತು । ಪ್ರಉಗಮ್ । ಉಕ್ಥಮ್ । ಅವ್ಯಥಯತ್ । ಸ್ತಭ್ನಾತು । ಬೃಹತ್ । ಸಾಮ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ಸಮ್ರಾಡಿತಿ ಸಮ್-ರಾಟ್ । ಅಸಿ । ಪ್ರತೀಚೀ । ದಿಕ್ । (೪) ।

| ಮಂತ್ರ | ವಿನಿಯೋಗ |
|---|---|
| ಸಮ್ರಾಡಸಿ...ವೈರೂಪಗ್ಂ..ಪ್ರತಿಷ್ಠಿತ್ಯೈ ॥ | ಪಶ್ಚಿಮದಿಕ್ಕಿನಲ್ಲಿ ನಾಕಸದಿಷ್ಟಕೆಯ ಉಪಧಾನಕ್ಕಾಗಿ. |

**ಹೇತೀನಾಮ್**=ಶತ್ರುಶಸ್ತ್ರಗಳನ್ನು; **ಪ್ರತಿಧರ್ತಾ**=ತಡೆಯುವವನು; **ಇಂದ್ರಃ**=ಇಂದ್ರ ದೇವನು; [ಸ್ತೋಮಗಳಲ್ಲಿ] **ಪಂಚದಶಃ ಸ್ತೋಮಃ**=ಪಂಚದಶಸ್ತೋಮವು; **ತ್ವಾ**=ನಿನ್ನನ್ನು; **ಪೃಥಿವ್ಯಾಮ್ ಶ್ರಯತು**=ಭೂಮಿಯಲ್ಲಿ ಸ್ಥಿರವಾಗಿಡಲಿ. **ಪ್ರಉಗಮ್ ಉಕ್ಥಮ್**=ಪ್ರ ಉಗಶಸ್ತ್ರವು; **ಅವ್ಯಥಯತ್ ಸ್ತಭ್ನಾತು**=ನಿನ್ನನ್ನು ಹಿಂಸಿಸದೆ ದೃಢವಾಗಿ ಇಟ್ಟಿರಲಿ; **ಬೃಹತ್ ಸಾಮ**=ಸಾಮಗಳಲ್ಲಿ ಬೃಹತ್ಸಾಮವು; **ಪ್ರತಿಷ್ಠಿತ್ಯೈ**=[ನಿನ್ನ] ಚಿರಕಾಲಸ್ಥಿತಿಗೆ [ಕಾರಣವಾಗಲಿ]. 🔔 [ಹೇ! ಇಷ್ಟಕೆಯೇ!] **ಸಮ್ರಾಟ್**=ಚೆನ್ನಾಗಿ ಪ್ರಕಾಶಿಸುವ; **ಪ್ರತೀಚೀ ದಿಕ್ ಅಸಿ**=ಪಶ್ಚಿಮದಿಕ್ಕೇ ನೀನಾಗಿರುವೆ; **ತೇ**=ನಿನ್ನ; **ಅಧಿಪತಯಃ**=ಅತಿಶಯವಾದ ಪಾಲಕರು; **ಆದಿತ್ಯಾಃ ದೇವಾಃ**=ದೇವತೆಗಳಾದ ದ್ವಾದಶ ಆದಿತ್ಯರು;

**ಹೇ! ದಕ್ಷಿಣದಿಕ್ಕಿನ ನಾಕಸದಿಷ್ಟಕೆಯೇ! ನೀನು ವಿಶಿಷ್ಟಪ್ರಕಾಶಯುಕ್ತವಾದ ದಕ್ಷಿಣ**

ಆದಿತ್ಯಾಸ್ತೇ]ದಿತ್ಯಾಸ್ತೇ ದೇವಾ ಅಧಿಪತಯಸ್ಸೋಮೋ

ಹೇತೀನಾಂ ಪ್ರತಿಧರ್ತಾ ಸಪ್ತದಶಸ್ತ್ವಾ ಸ್ತೋಮಃ

ಪೃಥಿವ್ಯಾಗ್ಂ ಶ್ರಯತು ಮರುತ್ವತೀಯಮುಕ್ಥ

ಮವ್ಯಥಯಥ್ಸ್ತಭ್ನಾತು ವೈರೂಪಗ್ಂ ಸಾಮ ಪ್ರತಿಷ್ಠಿತ್ಯೈ ೮

---

ಆದಿತ್ಯಾಃ । ತೇ । ದೇವಾಃ । ಅಧಿಪತಯ ಇತ್ಯಧಿ-ಪತಯಃ । ಸೋಮಃ ।

ಹೇತೀನಾಮ್ । ಪ್ರತಿಧರ್ತೇತಿ ಪ್ರತಿ-ಧರ್ತಾ । ಸಪ್ತದಶ ಇತಿ ಸಪ್ತ-ದಶಃ । ತ್ವಾ ।

ಸ್ತೋಮಃ । ಪೃಥಿವ್ಯಾಮ್ । ಶ್ರಯತು । ಮರುತ್ವತೀಯಮ್ । ಉಕ್ಥಮ್ ।

ಅವ್ಯಥಯತ್ । ಸ್ತಭ್ನಾತು । ವೈರೂಪಮ್ । ಸಾಮ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ ೮ ।

---

**ಹೇತೀನಾಮ್ ಪ್ರತಿಧರ್ತಾ**=[ನಿನ್ನ ಮೇಲೆ ಶತ್ರುಗಳು ಪ್ರಯೋಗಿಸುವ] ಆಯುಧಗಳನ್ನು ನಿವಾರಿಸುವವನು; **ಸೋಮಃ**=ಸೋಮದೇವನು; **ತ್ವಾ**=ನಿನ್ನನ್ನು; **ಸಪ್ತದಶಃ ಸ್ತೋಮಃ**=ಸ್ತೋಮಗಳಲ್ಲಿ ಸಪ್ತದಶಸ್ತೋಮವು; **ಪೃಥಿವ್ಯಾಮ್ ಶ್ರಯತು**= ಭೂಮಿಯಲ್ಲಿ ಸ್ಥಿರವಾಗಿರಿಸಲಿ. **ಮರುತ್ವತೀಯಮ್ ಉಕ್ಥಮ್**=ಮರುತ್ವತೀಯವೆಂಬ ಶಸ್ತ್ರವು; **ಅವ್ಯಥಯತ್ ಸ್ತಭ್ನಾತು**=ನಿನ್ನನ್ನು ಪೀಡಿಸದೆ ದೃಢವಾಗಿಡಲಿ; **ವೈರೂಪಮ್ ಸಾಮ**=ವೈರೂಪಸಾಮವು; **ಪ್ರತಿಷ್ಠಿತ್ಯೈ**=[ನಿನ್ನ] ಪ್ರತಿಷ್ಠೆಗೆ [ಕಾರಣವಾಗಲಿ].

---

ದಿಗ್ರೂಪಳಾಗಿರುವೆ. ರುದ್ರರು ನಿನ್ನ ಪಾಲಕರು. ಇಂದ್ರನು ನಿನ್ನ ರಕ್ಷಕನು. ಪಂಚದಶ ಸ್ತೋಮವು ನಿನ್ನನ್ನು ಭೂಮಿಯಲ್ಲಿ ಸ್ಥಿರಗೊಳಿಸಲಿ. **'ವಾಯುರಗ್ರೇ ಗಾ'** [**ಆಶ್ವ. ಶ್ರೌ. ಸೂ. 5.9.15**] ಎಂದು ಆರಂಭವಾಗುವ ಪ್ರ ಉಗ ಶಸ್ತ್ರವು ನಿನ್ನನ್ನು ಹಿಂಸಿಸದಿರಲಿ. ಬೃಹತ್ಸಾಮವು ನಿನ್ನ ಚಿರಸ್ಥಿತಿಗೆ ಕಾರಣವಾಗಿರಲಿ.

ಹೇ! ಪಶ್ಚಿಮದಿಕ್ಕಿನ ನಾಕಸದಿಷ್ಟಕೆಯೇ! ನೀನು ಪ್ರಕಾಶಿಸುವ ಪಶ್ಚಿಮದಿಕ್ಕಾಗಿರುವೆ. ನಿನ್ನ ಪಾಲಕರು ಆದಿತ್ಯರು. ಸೋಮದೇವನು ನಿನ್ನ ರಕ್ಷಕನು. ಸಪ್ತದಶಸ್ತೋಮವು ನಿನ್ನನ್ನು

ಸ್ವರಾಡಸ್ಯುದೀಚೀ ದಿಗ್ವಿಶ್ವೇ ತೇ ದೇವಾ ಅಧಿಪತಯೋ ವರುಣೋ ಹೇತೀನಾಂ ಪ್ರತಿಧರ್ತೈಕವಿಗ್ಂಶಸ್ತ್ವಾ ಸ್ತೋಮಃ ಪೃಥಿವ್ಯಾಗ್ಂ ಶ್ರಯತು ನಿಷ್ಕೇವಲ್ಯಮುಕ್ಥಮವ್ಯಥಯತ್ಸ್ತಭ್ನಾತು

---

ಸ್ವರಾಡಿತಿ ಸ್ವ-ರಾಟ್ । ಅಸಿ । ಉದೀಚೀ । ದಿಕ್ । ವಿಶ್ವೇ । ತೇ । ದೇವಾಃ । ಅಧಿಪತಯ ಇತ್ಯಧಿ-ಪತಯಃ । ವರುಣಃ । ಹೇತೀನಾಮ್ । ಪ್ರತಿಧರ್ತೇತಿ ಪ್ರತಿ-ಧರ್ತಾ । ಏಕವಿಗ್ಂಶ ಇತ್ಯೇಕ-ವಿಗ್ಂಶಃ । ತ್ವಾ । ಸ್ತೋಮಃ । ಪೃಥಿವ್ಯಾಮ್ । ಶ್ರಯತು । ನಿಷ್ಕೇವಲ್ಯಮ್ । ಉಕ್ಥಮ್ । ಅವ್ಯಥಯತ್ । ಸ್ತಭ್ನಾತು ।

---

| ಮಂತ್ರ | ವಿನಿಯೋಗ |
|---|---|
| ಸ್ವರಾಡಸ್ಯುದೀಚೀ..ವೈರಾಜಗ್ಂ..ಪ್ರತಿಷ್ಠಿತ್ಯೈ ॥ | ಉತ್ತರದಿಕ್ಕಿನಲ್ಲಿ ನಾಕಸದಿಷ್ಟಕೆಯ ಉಪಧಾನಕ್ಕಾಗಿ. |

---

[ಹೇ! ಇಷ್ಟಕೆಯೇ!] **ಸ್ವರಾಟ್**=ಸ್ವಯಂ ಪ್ರಕಾಶಿಸುವಂತಹ; **ಉದೀಚೀ ದಿಕ್ ಅಸಿ**=ಉತ್ತರದಿಕ್ಕಾಗಿದ್ದೀಯೆ; **ತೇ**=ನಿನ್ನ; **ಅಧಿಪತಯಃ**=ಅಧಿಪಾಲಕರಾಗಿರುವವರು; **ವಿಶ್ವೇ ದೇವಾಃ**=ವಿಶ್ವೇದೇವರು; **ಹೇತೀನಾಮ್ ಪ್ರತಿಧರ್ತಾ**=[ಶತ್ರುಗಳು ನಿಮ್ಮ ಮೇಲೆ ಪ್ರಯೋಗಿಸುವ] ಶಸ್ತ್ರಗಳನ್ನು ತಡೆಯತಕ್ಕವನು; **ವರುಣಃ**=ವರುಣದೇವನು. **ತ್ವಾ**=ನಿನ್ನನ್ನು; **ಏಕವಿಂಶಃ ಸ್ತೋಮಃ**=[ಸ್ತೋಮಗಳಲ್ಲಿ] ಏಕವಿಂಶಸ್ತೋಮವು; **ಪೃಥಿವ್ಯಾಮ್ ಶ್ರಯತು**=ಭೂಮಿಯಲ್ಲಿ ಸ್ಥಿರವಾಗಿರಿಸಲಿ. **ನಿಷ್ಕೇವಲ್ಯಮ್ ಉಕ್ಥಮ್**=ನಿಷ್ಕೇವಲ್ಯವೆಂಬ ಉಕ್ಥಶಸ್ತ್ರವು; **ಅವ್ಯಥಯತ್ ಸ್ತಭ್ನಾತು**=ನಿನ್ನನ್ನು ಹಿಂಸಿಸದೆ

---

ಸ್ಥಿರಗೊಳಿಸಲಿ. 'ಆ ತ್ವಾ ರಥಂ ಯಥೋತಯಃ' [ಆಶ್ವ. ಶ್ರೌ. ಸೂ. 5.14.4] ಎಂದು ಮೊದಲಾಗುವ ಮರುತ್ವತೀಯಶಸ್ತ್ರವು ನಿನ್ನನ್ನು ಬಾಧಿಸದಿರಲಿ. ವೈರೂಪಸಾಮವು

ವೈರಾಜಗ್ಂ ಸಾಮ ಪ್ರತಿಷ್ಠಿತ್ಯಾ ಅಧಿಪತ್ನ್ಯಸಿ ಬೃಹತೀ

ದಿಙ್ಮರುತಸ್ತೇ ದೇವಾ ಅಧಿಪತಯೋ [ಅಧಿಪತಯಃ (೫)]

ಬೃಹಸ್ಪತಿರ್ ಹೇತೀನಾಂ ಪ್ರತಿಧರ್ತಾ ತ್ರಿಣವತ್ರಯಸ್ತ್ರಿಗ್ಂಶೌ

ತ್ವಾ ಸ್ತೋಮೌ ಪೃಥಿವ್ಯಾಗ್ಂ ಶ್ರಯತಾಂ

---

ವೈರಾಜಮ್ । ಸಾಮ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ । ಅಧಿಪತ್ನೀತ್ಯಧಿ-ಪತ್ನೀ । ಅಸಿ । ಬೃಹತೀ । ದಿಕ್ । ಮರುತಃ । ತೇ । ದೇವಾಃ । ಅಧಿಪತಯ ಇತ್ಯಧಿ-ಪತಯಃ । (೫)। ಬೃಹಸ್ಪತಿಃ । ಹೇತೀನಾಮ್ । ಪ್ರತಿಧರ್ತೇತಿ ಪ್ರತಿ-ಧರ್ತಾ । ತ್ರಿಣವತ್ರಯಸ್ತ್ರಿಗ್ಂಶಾವಿತಿ ತ್ರಿಣವ-ತ್ರಯಸ್ತ್ರಿಗ್ಂಶೌ । ತ್ವಾ । ಸ್ತೋಮೌ । ಪೃಥಿವ್ಯಾಮ್ । ಶ್ರಯತಾಮ್ ।

---

| ಮಂತ್ರ | ವಿನಿಯೋಗ |
|---|---|
| ಅಧಿಪತ್ನೀ...ಸಾಮನೀ ಪ್ರತಿಷ್ಠಿತ್ಯೈ ॥ | ಮಧ್ಯದಲ್ಲಿ ಉಪಧಾನ ಮಾಡುವ ನಾಕಸದಿಷ್ಟಕೆಯ ಉಪಧಾನಕ್ಕಾಗಿ. |

---

**ವೈರಾಜಮ್ ಸಾಮ**=ವೈರಾಜಸಾಮವು; **ಪ್ರತಿಷ್ಠಿತ್ಯೈ**=ನಿನ್ನ ಸ್ಥಿರತೆಗೆ ಕಾರಣವಾಗಲಿ. 🔔 [ಹೇ! ಇಷ್ಟಕೆಯೇ! ನೀನು] **ಅಧಿಪತ್ನೀ**=ಅಧಿಕವಾಗಿ ಪಾಲನೆಯನ್ನು ಮಾಡುವ; **ಬೃಹತೀ ದಿಕ್ ಅಸಿ**=ಪ್ರೌಢವಾದ ಊರ್ಧ್ವದಿಕ್ಕಾಗಿದ್ದೀಯೆ. **ತೇ**=ನಿನ್ನ; **ಅಧಿಪತಯಃ**=ರಕ್ಷಕರು; **ದೇವಾಃ ಮರುತಃ**=ದೇವತೆಗಳಾದ ಮರುತರು. **ಹೇತೀನಾಮ್**=[ಶತ್ರುಗಳು ಉಪಯೋಗಿಸುವ] ಆಯುಧಗಳನ್ನು; **ಪ್ರತಿಧರ್ತಾ**=ನಿವಾರಿಸುವವನು; **ಬೃಹಸ್ಪತಿಃ**=ಬೃಹಸ್ಪತಿಯು. **ತ್ವಾ**=ನಿನ್ನನ್ನು; **ತ್ರಿಣವತ್ರಯಸ್ತ್ರಿಗ್ಂಶೌ ಸ್ತೋಮೌ**=ತ್ರಿಣವ ಮತ್ತು ತ್ರಯಸ್ತ್ರಿಂಶಸ್ತೋಮಗಳು; **ಪೃಥಿವ್ಯಾಮ್**=ಭೂಮಿಯಲ್ಲಿ; **ಶ್ರಯತಾಮ್**=ಸ್ಥಿರವಾಗಿ ಇರಿಸಲಿ.

## ವೈಶ್ವದೇವಾಗ್ನಿಮಾರುತೇ ಉಕ್ಥೇ ಅವ್ಯಥಯಂತೀ

## ಸ್ತಭ್ನೀತಾಗ್ಂ ಶಾಕ್ವರರೈವತೇ ಸಾಮನೀ ಪ್ರತಿಷ್ಠಿತ್ಯಾ

---

ವೈಶ್ವದೇವಾಗ್ನಿಮಾರುತೇ ಇತಿ ವೈಶ್ವದೇವ-ಆಗ್ನಿಮಾರುತೇ । ಉಕ್ಥೇ ಇತಿ । ಅವ್ಯಥಯಂತೀ ಇತಿ । ಸ್ತಭ್ನೀತಾಮ್ । ಶಾಕ್ವರರೈವತೇ ಇತಿ ಶಾಕ್ವರ-ರೈವತೇ । ಸಾಮನೀ ಇತಿ । ಪ್ರತಿಷ್ಠಿತ್ಯಾ ಇತಿ ಪ್ರತಿ-ಸ್ಥಿತ್ಯೈ ।

---

**ವೈಶ್ವದೇವಾಗ್ನಿಮಾರುತೇ ಉಕ್ಥೇ**=ವೈಶ್ವದೇವಶಸ್ತ್ರ ಮತ್ತು ಆಗ್ನಿಮಾರುತಶಸ್ತ್ರಗಳು; **ಅವ್ಯಥಯಂತೀ**=ನಿನ್ನನ್ನು ಹಿಂಸಿಸದೆ; **ಸ್ತಭ್ನೀತಾಮ್**=ಸ್ಥಿರವಾಗಿ ಇಟ್ಟಿರಲಿ; **ಶಾಕ್ವರ ರೈವತೇ ಸಾಮನೀ**=ಸಾಮಗಳಲ್ಲಿ ಶಾಕ್ವರ ಮತ್ತು ರೈವತಸಾಮಗಳು; **ಪ್ರತಿಷ್ಠಿತ್ಯೈ**=ನಿನ್ನ ದೃಢತೆಗೆ ಕಾರಣವಾಗಲಿ.

---

ದಾರ್ಢ್ಯವನ್ನು ತರಲಿ.

ಹೇ! ಉತ್ತರದಿಕ್ಕಿನ ನಾಕಸದಿಷ್ಟಕೆಯೇ! ನೀನು ಸ್ವಯಂ ಪ್ರಕಾಶಿಸುವ ಉತ್ತರ ದಿಗ್ರೂಪಳಾಗಿರುವೆ. ನಿನ್ನ ಅಧಿಪಾಲಕರು ವಿಶ್ವೇದೇವರು. ವರುಣದೇವನು ನಿನ್ನ ರಕ್ಷಕನು. ಏಕವಿಂಶಸ್ತೋಮವು ನಿನ್ನನ್ನು ಭೂಮಿಯಲ್ಲಿ ಸ್ಥಿರವಾಗಿ ಇರಿಸಲಿ. ಋಗ್ವೇದದ **'ಅಭಿ ತ್ವಾ ಶೂರ ನೋನುಮಃ'** [ಆಶ್ವ. ಶ್ರೌ. ಸೂ. 5.15.2] ಎಂದು ಆರಂಭವಾಗುವ ನಿಷ್ಕೇವಲ್ಯ ಶಸ್ತ್ರವು ನಿನ್ನನ್ನು ಹಿಂಸಿಸದಿರಲಿ. ವೈರಾಜಸಾಮವು ಸ್ಥಿರತೆಯನ್ನು ತರಲಿ. ನಿನ್ನನ್ನು ಉಪಧಾನ ಮಾಡುವೆನು.

ಮಧ್ಯದಲ್ಲಿ ಉಪಧಾನ ಮಾಡುವ ಹೇ! ನಾಕಸದಿಷ್ಟಕೆಯೇ! ನೀನು ಪ್ರೌಢವಾದ ಊರ್ಧ್ವದಿಕ್ಕು ಆಗಿರುವೆ. ನಿನ್ನ ರಕ್ಷಕರು ಮರುತರು. ಬೃಹಸ್ಪತಿಯು ಶತ್ರುಶಸ್ತ್ರನಿವಾರಕನು. ತ್ರಿಣವ-ತ್ರಯಸ್ತ್ರಿಂಶಸ್ತೋಮಗಳು ನಿನ್ನನ್ನು ಭೂಮಿಯಲ್ಲಿ ಇರಿಸಲಿ. ಋಗ್ವೇದದಲ್ಲಿ **'ತತ್ಸವಿತುರ್ವೃಣೀಮಹೇ'** [ಆಶ್ವ. ಶ್ರೌ. ಸೂ. 5.18.5] ಎಂದು ಮೊದಲಾಗುವ ವೈಶ್ವದೇವ ಶಸ್ತ್ರ, **'ವೈಶ್ವಾನರಾಯ ಪೃಥುರಾಜಸೇ'** [ಆಶ್ವ. ಶ್ರೌ. ಸೂ. 5.20.6] ಎಂದು ಆರಂಭವಾಗುವ ಆಗ್ನಿಮಾರುತಶಸ್ತ್ರಗಳು ನಿನ್ನನ್ನು ಹಿಂಸಿಸದಿರಲಿ. ಶಾಕ್ವರ-ರೈವತಸಾಮಗಳು ನಿನ್ನ ದೃಢತೆಗೆ ಕಾರಣವಾಗಲಿ. ನಿನ್ನನ್ನು ಉಪಧಾನ ಮಾಡುತ್ತೇನೆ.

ಅಂತರಿಕ್ಷಾಯರ್ಷಯಸ್ತ್ವಾ ಪ್ರಥಮಜಾ ದೇವೇಷು ದಿವೋ ಮಾತ್ರಯಾ ವರಿಣಾ ಪ್ರಥಂತು ವಿಧರ್ತಾ ಚಾಯಮಧಿಪತಿಶ್ಚ ತೇ ತ್ವಾ ಸರ್ವೇ ಸಂವಿದಾನಾ ನಾಕಸ್ಯ ಪೃಷ್ಠೇ

---

ಅಂತರಿಕ್ಷಾಯ । ಋಷಯಃ । ತ್ವಾ । ಪ್ರಥಮಜಾ ಇತಿ ಪ್ರಥಮ-ಜಾಃ । ದೇವೇಷು । ದಿವಃ । ಮಾತ್ರಯಾ । ವರಿಣಾ । ಪ್ರಥಂತು । ವಿಧರ್ತೇತಿ ವಿ-ಧರ್ತಾ । ಚ । ಅಯಮ್ । ಅಧಿಪತಿರಿತ್ಯಧಿ-ಪತಿಃ । ಚ । ತೇ । ತ್ವಾ । ಸರ್ವೇ । ಸಂವಿದಾನಾ ಇತಿ ಸಮ್-ವಿದಾನಾಃ । ನಾಕಸ್ಯ । ಪೃಷ್ಠೇ ।

---

| ಮಂತ್ರ | ವಿನಿಯೋಗ |
|---|---|
| ಅಂತರಿಕ್ಷಾಯ...ಸಾದಯಂತು ॥ | ಮೇಲಿನ ಐದು ಮಂತ್ರಗಳಲ್ಲಿಯೂ ಅನುಷಂಗ ಮಾಡಬೇಕಾದ ಮಂತ್ರಶೇಷ. |

---

[ಹೇ! ಇಷ್ಟಕೆಯೇ!] **ದೇವೇಷು**=ದೇವತೆಗಳಲ್ಲಿ; **ಪ್ರಥಮಜಾಃ**=ಮೊದಲು ಜನಿಸಿದ; **ಋಷಯಃ**=ನಾರದಾದಿ ಮುನಿಗಳು; **ತ್ವಾ**=ನಿನ್ನನ್ನು; **ವರಿಣಾ**=ಪಡೆಯ ಬೇಕಾದ; **ದಿವಃ ಮಾತ್ರಯಾ**=ಆಕಾಶದ ಪರಿಮಾಣದಿಂದ; **ಅಂತರಿಕ್ಷಾಯ**= ಅಂತರಿಕ್ಷವನ್ನು ವ್ಯಾಪಿಸುವುದಕ್ಕಾಗಿ; **ಪ್ರಥಂತು**=ವಿಸ್ತರಿಸಲಿ. **ಅಯಮ್**=ಈ; **ವಿಧರ್ತಾ ಚ**=ಇಷ್ಟಕಾನಿಷ್ಪಾದಕನೂ; **ಅಧಿಪತಿಃ ಚ**=ಪಾಲಕನೂ ಮತ್ತು; **ತೇ**=ಆ ನಾರದಾದಿ ಮುನಿಗಳೂ; **ಸರ್ವೇ**=ಎಲ್ಲರೂ; **ಸಂವಿದಾನಾಃ**=ಐಕಮತ್ಯವನ್ನು ಹೊಂದಿದವರಾಗಿ; **ತ್ವಾ**=ನಿನ್ನನ್ನು/[ಇಷ್ಟಕೆಯನ್ನು]; **ನಾಕಸ್ಯ ಪೃಷ್ಠೇ**=ಸ್ವರ್ಗಸದೃಶ ವಾದ ಈ ಚಯನದ ಮೇಲ್ಭಾಗದಲ್ಲಿ;

---

ಈ ಮಂತ್ರಶೇಷವನ್ನು ಐದು ಮಂತ್ರಗಳಲ್ಲಿಯೂ ಅನುಷಂಗ ಮಾಡಿ ಉಪಧಾನ ಮಾಡಬೇಕು.

ಹೇ! ಇಷ್ಟಕೆಯೇ! ದೇವತೆಗಳಲ್ಲಿ ಮೊದಲು ಜನಿಸಿದ ನಾರದಾದಿ ಮುನಿಗಳು ನೀನು

ಸುವರ್ಗೇ ಲೋಕೇ ಯಜಮಾನಂ ಚ ಸಾದಯಂತು ॥ ೬–2 ॥

[ಪ್ರತೀಚೀ ದಿಙ್ಮರುತಸ್ತೇ ದೇವಾ ಅಧಿಪತಯಶ್ಚತ್ವಾರಿಗ್‌ಂಶಚ್ಚ ॥]

---

ಸುವರ್ಗ ಇತಿ ಸುವಃ–ಗೇ । ಲೋಕೇ । ಯಜಮಾನಮ್ । ಚ । ಸಾದಯಂತು ॥ ೬ ॥

---

ಸಾದಯಂತು=ಉಪಧಾನ ಮಾಡಲಿ. ಚ=ಮತ್ತು; ಯಜಮಾನಮ್=ಯಜಮಾನನನ್ನು; ಸುವರ್ಗೇ ಲೋಕೇ=ಸ್ವರ್ಗಲೋಕದಲ್ಲಿ; ಸಾದಯಂತು=ಸ್ಥಾಪಿಸಲಿ.

---

ಅಂತರಿಕ್ಷವನ್ನು ವ್ಯಾಪಿಸುವಂತೆ ವಿಸ್ತರಿಸಲಿ. ಇಷ್ಟಕೆಯ ನಿಷ್ಪಾದಕನೂ ಪಾಲಕನೂ ಆ ನಾರದಾದಿಮುನಿಗಳೂ ಐಕಮತ್ಯವನ್ನು ಹೊಂದಿ ನಿನ್ನನ್ನು ಸ್ವರ್ಗದಂತಿರುವ ಚಯನದ ಮೇಲ್ಭಾಗದಲ್ಲಿ ಉಪಧಾನ ಮಾಡಲಿ. ಯಜಮಾನನನ್ನು ಸ್ವರ್ಗಲೋಕದಲ್ಲಿ ಸ್ಥಾಪಿಸಲಿ.

---

## ವಿನಿಯೋಗಸಂಗ್ರಹ

ರಾಜ್ಞೀ ನಾಕಸದಃ ಪಂಚ[5] ಸರ್ವಶೇಷೋಽಂತ[6]ರಿತ್ಯಯಮ್ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–6

## ॥ ತೃತೀಯೋಽನುವಾಕಃ ॥

ಅಯಂ ಪುರೋ ಹರಿಕೇಶಸ್ಸೂರ್ಯರಶ್ಮಿಸ್ತಸ್ಯ ರಥಗೃತ್ಸಶ್ಚ

ರಥೌಜಾಶ್ಚ

---

ಅಯಮ್ । ಪುರಃ । ಹರಿಕೇಶ ಇತಿ ಹರಿ–ಕೇಶಃ । ಸೂರ್ಯರಶ್ಮಿರಿತಿ ಸೂರ್ಯ–ರಶ್ಮಿಃ ।

ತಸ್ಯ । ರಥಗೃತ್ಸ ಇತಿ ರಥ–ಗೃತ್ಸಃ । ಚ । ರಥೌಜಾ ಇತಿ ರಥ–ಓಜಾಃ । ಚ ।

---

ಎರಡನೆಯ ಅನುವಾಕದಲ್ಲಿ ನಾಕಸದಿಷ್ಟಕೆಗಳು ಉಕ್ತವಾದವು. ಈ ಮೂರನೆಯ ಅನುವಾಕದಲ್ಲಿ ಐದು ಚೋಡೇಷ್ಟಕೆಗಳು ಉಕ್ತವಾಗಿವೆ.

---

| ಮಂತ್ರ | ವಿನಿಯೋಗ |
|---|---|
| ಅಯಮ್...ರಕ್ಷಾಗ್ಂಸಿ ಪ್ರಹೇತಿಃ ॥ | ಪ್ರಥಮ ಚೋಡೇಷ್ಟಕೆಯನ್ನು ಉಪಧಾನ ಮಾಡಲು. |

---

[ಇಷ್ಟಕೆಯೇ!] ▲ **ಅಯಮ್**=ಈ; **ಪುರಃ**=ಪೂರ್ವದಿಕ್ಕಿನಲ್ಲಿರುವ ಅಗ್ನಿಯು; **ಹರಿಕೇಶಃ**=ಹಿರಣ್ಯವರ್ಣದಂತಿರುವ ಕೇಶಗಳಿಗೆ ಸಮಾನವಾದ ಜ್ವಾಲೆಯುಳ್ಳವನು. **ಸೂರ್ಯರಶ್ಮಿಃ**=ಸೂರ್ಯಸಮಾನವಾದ ಕಿರಣವುಳ್ಳವನಾಗಿರುತ್ತಾನೆ. **ತಸ್ಯ**=ಆ ಅಗ್ನಿಗೆ; **ರಥಗೃತ್ಸಃ ಚ**=ರಥಗಳಲ್ಲಿ ಅತಿಪ್ರೀತಿಯುಳ್ಳ ರಥಗೃತ್ಸನೂ; **ರಥೌಜಾಃ ಚ**= ರಥಾರೋಹಣದಲ್ಲಿ ಬಲಾಧಿಕ್ಯವುಳ್ಳ ರಥೌಜನೂ;

## ಸೇನಾನಿಗ್ರಾಮಣ್ಯೌ ಪುಂಜಿಕಸ್ಥಲಾ ಚ ಕೃತಸ್ಥಲಾ ಚಾಪ್ಸರಸೌ ಯಾತುಧಾನಾ ಹೇತೀ ರಕ್ಷಾಗ್ಂಸಿ ಪ್ರಹೇತಿರಯಂ ದಕ್ಷಿಣಾ ವಿಶ್ವಕರ್ಮಾ ತಸ್ಯ

---

ಸೇನಾನಿಗ್ರಾಮಣ್ಯಾವಿತಿ ಸೇನಾನಿ-ಗ್ರಾಮಣ್ಯೌ । ಪುಂಜಿಕಸ್ಥಲೇತಿ ಪುಂಜಿಕ-ಸ್ಥಲಾ । ಚ । ಕೃತಸ್ಥಲೇತಿ ಕೃತ-ಸ್ಥಲಾ । ಚ । ಅಪ್ಸರಸೌ । ಯಾತುಧಾನಾ ಇತಿ ಯಾತು-ಧಾನಾಃ । ಹೇತಿಃ । ರಕ್ಷಾಗ್ಂಸಿ । ಪ್ರಹೇತಿರಿತಿ ಪ್ರ-ಹೇತಿಃ । ಅಯಮ್ । ದಕ್ಷಿಣಾ । ವಿಶ್ವಕರ್ಮೇತಿ ವಿಶ್ವ-ಕರ್ಮಾ । ತಸ್ಯ ।

---

| ಮಂತ್ರ | ವಿನಿಯೋಗ |
| --- | --- |
| **ಅಯಂ ದಕ್ಷಿಣಾ...ವಧಃ ಪ್ರಹೇತಿಃ॥** | ದಕ್ಷಿಣದಿಕ್ಕಿನ ಚೋಡೇಷ್ಟಕೆಯನ್ನು ಉಪಧಾನ ಮಾಡಲು. |

---

**ಸೇನಾನಿಗ್ರಾಮಣ್ಯೌ**=ಪರರಾಷ್ಟ್ರದಲ್ಲಿ ಸೇನೆಯನ್ನು ನಡೆಸುವ ಸೇನಾನಿಯೂ, ಸ್ವರಾಷ್ಟ್ರಗ್ರಾಮದಲ್ಲಿ ಸೇನೆಯನ್ನು ನಡೆಸುವ ಗ್ರಾಮಣಿಯೂ [ಮುಖ್ಯಪರಿಚಾರಕರಾಗಿ ರುತ್ತಾರೆ] **ಪುಂಜಿಕಸ್ಥಲಾ ಚ**=ಪುಂಜಿಕಸ್ಥಲೆಯೂ; **ಕೃತಸ್ಥಲಾ ಚ**=ಕೃತಸ್ಥಲೆಯೆಂಬ ಹೆಸರುಳ್ಳ; **ಅಪ್ಸರಸೌ**=ಅಪ್ಸರಸ್ತ್ರೀಯರು ಮುಖ್ಯಪರಿಚಾರಿಕೆಯರು; **ಯಾತುಧಾನಾಃ**=ಯಾತುಧಾನರೆಂಬ ರಕ್ಷೋಜಾತಿಯವರು; **ಹೇತಿಃ**=ತೀಕ್ಷ್ಣವಾದ ಆಯುಧದಂತೆ; **ರಕ್ಷಾಗ್ಂಸಿ**=ರಕ್ಷೋಜಾತಿವಿಶೇಷದವರು; **ಪ್ರಹೇತಿಃ**=ಅತಿತೀಕ್ಷ್ಣವಾದ ಆಯುಧ ದಂತೆ ಇರುತ್ತಾರೆ [ಅಂತಹ ಅಗ್ನಿರೂಪಳು ನೀನು]. 🔔 [ಹೇ! ಇಷ್ಟಕೆಯೇ!] **ಅಯಮ್**=ಈ ಅಗ್ನಿಯು; **ದಕ್ಷಿಣಾ**=ದಕ್ಷಿಣದಿಕ್ಕಿನಲ್ಲಿ ಇರುತ್ತಾನೆ; **ವಿಶ್ವಕರ್ಮಾ**=ಅಗ್ನಿಹೋತ್ರವೇ ಮುಂತಾದ ಸಕಲಕರ್ಮಸಾಧಕನಾದ ವಿಶ್ವಕರ್ಮನೆನಿಸಿದ್ದಾನೆ; **ತಸ್ಯ**=ಆತನಿಗೆ;

# ರಥಸ್ವನಶ್ಚ ರಥೇಚಿತ್ರಶ್ಚ ಸೇನಾನಿಗ್ರಾಮಣ್ಯೌ ಮೇನಕಾ ಚ ಸಹಜನ್ಯಾ ಚಾಪ್ಸರಸೌ ದಂಕ್ಷ್ಣವಃ ಪಶವೋ ಹೇತಿಃ ಪೌರುಷೇಯೋ ವಧಃ ಪ್ರಹೇತಿ-

---

ರಥಸ್ವನ ಇತಿ ರಥ-ಸ್ವನಃ । ಚ । ರಥೇಚಿತ್ರ ಇತಿ ರಥೇ-ಚಿತ್ರಃ । ಚ । ಸೇನಾನಿಗ್ರಾಮಣ್ಯಾವಿತಿ ಸೇನಾನಿ-ಗ್ರಾಮಣ್ಯೌ । ಮೇನಕಾ । ಚ । ಸಹಜನ್ಯೇತಿ ಸಹ-ಜನ್ಯಾ । ಚ । ಅಪ್ಸರಸೌ । ದಂಕ್ಷ್ಣವಃ । ಪಶವಃ । ಹೇತಿಃ । ಪೌರುಷೇಯಃ । ವಧಃ । ಪ್ರಹೇತಿರಿತಿ ಪ್ರ-ಹೇತಿಃ ।

---

**ರಥಸ್ವನಃ ಚ ರಥೇಚಿತ್ರಃ ಚ**=ರಥಸ್ವನ-ರಥೇಚಿತ್ರ ಎಂಬ ಹೆಸರಿನ; **ಸೇನಾನಿ ಗ್ರಾಮಣ್ಯೌ**=ಸೇನಾನಿ-ಗ್ರಾಮಣಿಗಳು ಇರುತ್ತಾರೆ; **ಮೇನಕಾ ಚ ಸಹಜನ್ಯಾ ಚ**=ಮೇನಕಾ-ಸಹಜನ್ಯಾ ಎಂಬ ಹೆಸರಿನ; **ಅಪ್ಸರಸೌ**=ಅಪ್ಸರಸ್ತ್ರೀಯರು ಮುಖ್ಯ ಪರಿಚಾರಿಕೆಯರು. **ದಂಕ್ಷ್ಣವಃ ಪಶವಃ**=ಹುಲಿಯೇ ಮೊದಲಾದ ಕ್ರೂರಪಶುಗಳು; **ಹೇತಿಃ**=ತೀಕ್ಷ್ಣಶಸ್ತ್ರಗಳು; **ಪೌರುಷೇಯಃ ವಧಃ**=ಪುರುಷವಧಸಾಧಕವೇ; **ಪ್ರಹೇತಿಃ** =ಅತಿತೀಕ್ಷ್ಣವಾದ ಆಯುಧವಾಗಿದೆ; [ಇಂತಹ ಅಗ್ನಿರೂಪಳು ನೀನು].

---

ನಾಕಸದಿಷ್ಟಕೆಗಳನ್ನು ಮುಚ್ಚುವ ಇಷ್ಟಕೆಗಳಾದುದರಿಂದ ಈ ಇಷ್ಟಕೆಗಳಿಗೆ ಚೋಡೇಷ್ಟಕೆಗಳೆಂದು ಹೆಸರು. **'ಚೋಡಾ'** ಎಂಬ ಶಬ್ದವು **'ಚುಡ' ಸಂವರಣೇ** ಎಂಬ ಧಾತುವಿನಿಂದ ಉಂಟಾದ ಶಬ್ದವಾಗಿದೆ. ಚೋಡೇಷ್ಟಕೆಯನ್ನು ಅಗ್ನಿರೂಪವಾಗಿ ಹೇಳಲಾಗಿದೆ.

ರಾಜನಿಗೆ ಪರಿವಾರದವರು ಇರುವಂತೆ ಇಲ್ಲಿ ಅಗ್ನಿಗೂ ಹಲವು ಬಗೆಯ ಪರಿವಾರದವರು ಇದ್ದಾರೆ. ಸೇನಾನಿಗಳು, ಗ್ರಾಮಣಿಗಳು, ಪರಿಚಾರಿಕೆಯರು, ಆಯುಧಗಳು, ಅತಿತೀಕ್ಷ್ಣಶಸ್ತ್ರಗಳು-ಇವುಗಳು ಪೂರ್ವದಿಕ್ಕಿನಿಂದ ಆರಂಭಿಸಿ ಪ್ರತಿದಿಕ್ಕಿನಲ್ಲಿಯೂ ಬೇರೆ ಬೇರೆಯವರು ಇದ್ದಾರೆ.

ಪೂರ್ವದಿಕ್ಕಿನ ಅಗ್ನಿಗೆ ರಥಗೃತ್ಸ-ರಥೌಜರು, ಪುಂಜಿಕಸ್ಥಲೆ-ಕೃತಸ್ಥಲೆಯರು,

ರಯಂ ಪಶ್ಚಾದ್ವಿಶ್ವವ್ಯಚಾಸ್ತಸ್ಯ ರಥಪ್ರೋತಶ್ಚಾಸಮರಥಶ್ಚ

ಸೇನಾನಿಗ್ರಾಮಣ್ಯೌ ಪ್ರಮ್ಲೋಚಂತೀ ಚಾ[ಚ(೭)ಅನು

ಮ್ಲೋಚಂತೀ]ನುಮ್ಲೋಚಂತೀ ಚಾಪ್ಸರಸೌ ಸರ್ಪಾ ಹೇತಿ

---

ಅಯಮ್ । ಪಶ್ಚಾತ್ । ವಿಶ್ವವ್ಯಚಾ ಇತಿ ವಿಶ್ವ-ವ್ಯಚಾಃ । ತಸ್ಯ । ರಥಪ್ರೋತ ಇತಿ ರಥ-ಪ್ರೋತಃ । ಚ । ಅಸಮರಥ ಇತ್ಯಸಮ-ರಥಃ । ಚ । ಸೇನಾನಿಗ್ರಾಮಣ್ಯಾವಿತಿ ಸೇನಾನಿ-ಗ್ರಾಮಣ್ಯೌ । ಪ್ರಮ್ಲೋಚಂತೀತಿ ಪ್ರ-ಮ್ಲೋಚಂತೀ । ಚ । (೭) । ಅನುಮ್ಲೋಚಂತೀತ್ಯನು-ಮ್ಲೋಚಂತೀ । ಚ । ಅಪ್ಸರಸೌ । ಸರ್ಪಾಃ । ಹೇತಿಃ ।

---

| ಮಂತ್ರ | ವಿನಿಯೋಗ |
|---|---|
| ಅಯಮ್ ಪಶ್ಚಾತ್...ವ್ಯಾಘ್ರಾಃ ಪ್ರಹೇತಿಃ ॥ | ಪಶ್ಚಿಮದಿಕ್ಕಿನ ಚೋಡೇಷ್ಟಕೆಯನ್ನು ಉಪಧಾನ ಮಾಡಲು. |

---

[ಇಷ್ಟಕೆಯೇ!] **ಅಯಮ್**=ಈ; **ಪಶ್ಚಾತ್**=ಪಶ್ಚಿಮದಿಕ್ಕಿನಲ್ಲಿರುವ ಅಗ್ನಿಯು; **ವಿಶ್ವವ್ಯಚಾಃ**=ವಿಶ್ವವನ್ನು ವ್ಯಾಪಿಸಿರುವನು; **ತಸ್ಯ**=ಆ ಅಗ್ನಿಗೆ; **ರಥಪ್ರೋತಃ ಚ ಅಸಮರಥಃ ಚ ಸೇನಾನಿಗ್ರಾಮಣ್ಯೌ**=ಸೇನಾನಿಯಾದ ರಥಪ್ರೋತನೂ, ಗ್ರಾಮಣಿಯಾದ ಅಸಮರಥನೂ ಮುಖ್ಯಪರಿಚಾರಕರು. **ಪ್ರಮ್ಲೋಚಂತೀ ಚ ಅನು ಮ್ಲೋಚಂತೀ ಚ**=ಪ್ರಮ್ಲೋಚಂತೀ-ಅನುಮ್ಲೋಚಂತೀ ಎಂಬ ಹೆಸರಿನ; **ಅಪ್ಸರಸೌ**=ಅಪ್ಸರಸೆಯರು ಮುಖ್ಯಪರಿಚಾರಿಕೆಯರು; **ಸರ್ಪಾಃ ಹೇತಿಃ**=ಸರ್ಪಗಳು ತೀಕ್ಷ್ಣವಾದ ಶಸ್ತ್ರಗಳು.

---

ಯಾತುಧಾನ-ರಕ್ಷಸ್ಸುಗಳು, ಆ ರೂಪದಲ್ಲಿ ಇದ್ದಾರೆ. ಇಂತಹ ಅಗ್ನಿರೂಪದ ಇಷ್ಟಕೆಯನ್ನು ಉಪಧಾನ ಮಾಡುತ್ತೇನೆ.

**ವ್ಯಾಘ್ರಾಃ ಪ್ರಹೇತಿರಯಮುತ್ತರಾತ್ಸಂಯದ್ವಸುಸ್ತಸ್ಯ ಸೇನಜಿಚ್ಚ ಸುಷೇಣಶ್ಚ ಸೇನಾನಿಗ್ರಾಮಣ್ಯೌ**

ವ್ಯಾಘ್ರಾಃ । ಪ್ರಹೇತಿರಿತಿ ಪ್ರ-ಹೇತಿಃ । ಅಯಮ್ । ಉತ್ತರಾದಿತ್ಯುತ್-ತರಾತ್ । ಸಂಯದ್ವಸುರಿತಿ ಸಂಯತ್-ವಸುಃ । ತಸ್ಯ । ಸೇನಜಿದಿತಿ ಸೇನ-ಜಿತ್ । ಚ । ಸುಷೇಣ ಇತಿ ಸು-ಸೇನಃ । ಚ । ಸೇನಾನಿಗ್ರಾಮಣ್ಯಾವಿತಿ ಸೇನಾನಿ-ಗ್ರಾಮಣ್ಯೌ ।

| ಮಂತ್ರ | ವಿನಿಯೋಗ |
| --- | --- |
| **ಅಯಮುತ್ತರಾತ್...ವಾತಃ ಪ್ರಹೇತಿಃ ॥** | ಉತ್ತರದಿಕ್ಕಿನ ಚೋಡೇಷ್ಟಕೆಯನ್ನು ಉಪಧಾನ ಮಾಡಲು. |

**ವ್ಯಾಘ್ರಾಃ ಪ್ರಹೇತಿಃ**=ಹುಲಿಗಳು ಅತಿತೀಕ್ಷ್ಣವಾದ ಶಸ್ತ್ರಗಳು; [ಇಂತಹ ಅಗ್ನಿ ರೂಪಳು ನೀನು]. 🔔 [ಹೇ! ಇಷ್ಟಕೆಯೇ!] **ಅಯಮ್**=ಈ; **ಉತ್ತರಾತ್**=ಉತ್ತರ ದಿಕ್ಕಿನಲ್ಲಿರುವ [ಅಗ್ನಿಯು] **ಸಂಯದ್ವಸುಃ**=ಧನವನ್ನು ಹೊಂದಿದ ಸಂಯದ್ವಸುವೆಂಬ ಹೆಸರಿನವನು; **ತಸ್ಯ**=ಆ ಅಗ್ನಿಗೆ; **ಸೇನಜಿತ್ ಚ ಸುಷೇಣಃ ಚ**=ಸೇನಜಿತ್-ಸುಷೇಣರೆಂಬ; **ಸೇನಾನಿಗ್ರಾಮಣ್ಯೌ**=ಸೇನಾನಿ-ಗ್ರಾಮಣಿಯರಿರುತ್ತಾರೆ.

ದಕ್ಷಿಣದಿಕ್ಕಿನ ಅಗ್ನಿಗೆ ರಥಸ್ವನ-ರಥೇಚಿತ್ರರು, ಮೇನಕೆ-ಸಹಜನ್ಯರು, ಕಚ್ಚುವ ಸ್ವಭಾವವುಳ್ಳ ಹುಲಿಯೇ ಮೊದಲಾದ ಕ್ರೂರಪಶುಗಳು, ಪುರುಷವಧಸಾಧಕವು-ಇವು ಸೇನಾನಿ ಮುಂತಾದ ರೂಪದಲ್ಲಿರುತ್ತವೆ. ಇಂತಹ ಅಗ್ನಿರೂಪದ ಇಷ್ಟಕೆಯನ್ನು ಉಪಧಾನ ಮಾಡುತ್ತೇನೆ.

ಪಶ್ಚಿಮದಿಕ್ಕಿನ ಅಗ್ನಿಗೆ ರಥಪ್ರೋತ-ಅಸಮರಥರೂ, ಪ್ರಮ್ಲೋಚಂತೀ-ಅನುಮ್ಲೋಚಂತಿಯರು, ಸರ್ಪ-ವ್ಯಾಘ್ರಗಳು ಸೇನಾನಿ ಮುಂತಾದ ರೂಪದಲ್ಲಿರುತ್ತವೆ. ಇಂತಹ ಅಗ್ನಿರೂಪದ ಇಷ್ಟಕೆಯನ್ನು ಉಪಧಾನ ಮಾಡುತ್ತೇನೆ.

ಉತ್ತರದಿಕ್ಕಿನ ಅಗ್ನಿಗೆ ಸೇನಜಿತ್-ಸುಷೇಣ ಎಂಬ ಅನ್ವರ್ಥವಾದ ಹೆಸರಿನ ಸೇನಾನಿ

ವಿಶ್ವಾಚೀ ಚ ಘೃತಾಚೀ ಚಾಪ್ಸರಸಾವಾಪೋಹೇತಿರ್ವಾತಃ

ಪ್ರಹೇತಿರಯಮುಪರ್ಯರ್ವಾಗ್ವಸುಸ್ತಸ್ಯ

ತಾರ್ಕ್ಷ್ಯಶ್ಚಾರಿಷ್ಟನೇಮಿಶ್ಚ

---

ವಿಶ್ವಾಚೀ । ಚ । ಘೃತಾಚೀ । ಚ । ಅಪ್ಸರಸೌ । ಆಪಃ । ಹೇತಿಃ । ವಾತಃ । ಪ್ರಹೇತಿರಿತಿ ಪ್ರ-ಹೇತಿಃ । ಅಯಮ್ । ಉಪರಿ । ಅರ್ವಾಗ್ವಸುರಿತ್ಯರ್ವಾಕ್-ವಸುಃ । ತಸ್ಯ । ತಾರ್ಕ್ಷ್ಯಃ । ಚ । ಅರಿಷ್ಟನೇಮಿರಿತ್ಯರಿಷ್ಟ-ನೇಮಿಃ । ಚ ।

---

| ಮಂತ್ರ | ವಿನಿಯೋಗ |
|---|---|
| ಅಯಮುಪರಿ...ಸ್ಫೂರ್ಜನ್ಪ್ರಹೇತಿಃ ॥ | ಐದನೆಯ ಚೋಡೇಷ್ಟಕೆಯನ್ನು ಉಪಧಾನ ಮಾಡಲು |

---

**ವಿಶ್ವಾಚೀ ಚ ಘೃತಾಚೀ ಚ**=ವಿಶ್ವಾಚೀ-ಘೃತಾಚೀ ಎಂಬ; **ಅಪ್ಸರಸೌ**=ಅಪ್ಸರಸೆಯರು ಮುಖ್ಯಸೇವಕಿಯರಾಗಿರುತ್ತಾರೆ. **ಆಪಃ ಹೇತಿಃ**=ಮಿಂಚಿಗೆ/ಸಿಡಿಲಿಗೆ ಕಾರಣವಾದ ನೀರು ತೀಕ್ಷ್ಣ ಆಯುಧವಾಗಿದೆ. **ವಾತಃ ಪ್ರಹೇತಿಃ**=ಬಿರುಗಾಳಿಯು ಅತಿತೀಕ್ಷ್ಣವಾದ ಶಸ್ತ್ರವಾಗಿದೆ; [ಇಂತಹ ಅಗ್ನಿರೂಪಳು ನೀನು]. 🔔 [ಹೇ! ಇಷ್ಟಕೆಯೇ!] **ಅಯಮ್**=ಈ ಅಗ್ನಿಯು; **ಅರ್ವಾಗ್ವಸುಃ**=ಮೇಲೆ ಇರುವ ಮೋಡಗಳಿಂದ ಅಧೋಮುಖವಾಗಿ ನೆಲದ ಮೇಲೆ ಬೀಳುವ ವೈದ್ಯುತಾಗ್ನಿಯಾಗಿ; **ಉಪರಿ**=ಮೇಲೆ ಇದೆ; **ತಸ್ಯ**=ಆ ಅಗ್ನಿಗೆ; **ತಾರ್ಕ್ಷ್ಯಃ ಚ ಅರಿಷ್ಟನೇಮಿಃ ಚ**=ತಾರ್ಕ್ಷ್ಯ-ಅರಿಷ್ಟನೇಮಿಯರು;

---

-ಗ್ರಾಮಣಿಯರು, ವಿಶ್ವಾಚೀ-ಘೃತಾಚೀ ಎಂಬ ಅಪ್ಸರೆಯರಾದ ಸೇವಿಕೆಯರು, ನೀರು-ಬಿರುಗಾಳಿಗಳು ಉಗ್ರಶಸ್ತ್ರ-ಅತ್ಯುಗ್ರಶಸ್ತ್ರಗಳಾಗಿವೆ. ಇಂತಹ ಅಗ್ನಿರೂಪದ ಇಷ್ಟಕೆಯನ್ನು ಉಪಧಾನ ಮಾಡುತ್ತೇನೆ.

ಹೇ! ಇಷ್ಟಕೆಯೇ! ಈ ವೈದ್ಯುತಾಗ್ನಿಯು ಮೇಲೆ ಇದೆ. ಆ ಅಗ್ನಿಗೆ ತಾರ್ಕ್ಷ್ಯ-ಅರಿಷ್ಟನೇಮಿಯರು ಸೇನಾ-ಗ್ರಾಮನಾಯಕರು. ಉರ್ವಶೀ-ಪೂರ್ವಚಿತ್ತಿ, ಮಿಂಚು-

ಸೇನಾನಿಗ್ರಾಮಣ್ಯಾವುರ್ವಶೀ ಚ ಪೂರ್ವಚಿತ್ತಿಶ್ಚಾಪ್ಸರಸೌ ವಿದ್ಯುದ್ಧೇತಿರವಸ್ಫೂರ್ಜನ್ಪ್ರಹೇತಿಸ್ತೇಭ್ಯೋ ನಮಸ್ತೇ ನೋ ಮೃಡಯಂತು ತೇ ಯಂ[(ಲ)]ದ್ವಿಷ್ಮೋ ಯಶ್ಚ ನೋ ದ್ವೇಷ್ಟಿ

---

ಸೇನಾನಿಗ್ರಾಮಣ್ಯಾವಿತಿ ಸೇನಾನಿ-ಗ್ರಾಮಣ್ಯೌ । ಉರ್ವಶೀ । ಚ । ಪೂರ್ವಚಿತ್ತಿರಿತಿ ಪೂರ್ವ-ಚಿತ್ತಿಃ । ಚ । ಅಪ್ಸರಸೌ । ವಿದ್ಯುದಿತಿ ವಿ-ದ್ಯುತ್ । ಹೇತಿಃ । ಅವಸ್ಫೂರ್ಜನ್ನಿತ್ಯವ-ಸ್ಫೂರ್ಜನ್ । ಪ್ರಹೇತಿರಿತಿ ಪ್ರ-ಹೇತಿಃ । ತೇಭ್ಯಃ । ನಮಃ । ತೇ । ನಃ । ಮೃಡಯಂತು । ತೇ । ಯಮ್ । [(ಲ)] । ದ್ವಿಷ್ಮಃ । ಯಃ । ಚ । ನಃ । ದ್ವೇಷ್ಟಿ ।

---

| ಮಂತ್ರ | ವಿನಿಯೋಗ |
|---|---|
| ತೇಭ್ಯೋ...ದಧಾಮಿ ॥ | ಹಿಂದಿನ ಐದು ಮಂತ್ರಗಳಿಗೆ ಅನುಷಂಗ ಮಾಡಬೇಕಾದ ಮಂತ್ರಶೇಷ. |

---

**ಸೇನಾನಿಗ್ರಾಮಣ್ಯೌ**=ಸೇನಾ-ಗ್ರಾಮನಾಯಕರು; **ಉರ್ವಶೀ ಚ ಪೂರ್ವಚಿತ್ತಿಃ ಚ**= ಉರ್ವಶೀ ಮತ್ತು ಪೂರ್ವಚಿತ್ತಿಯರು; **ಅಪ್ಸರಸೌ**=ಮುಖ್ಯಸೇವಕಿಯರು; **ವಿದ್ಯುತ್ ಹೇತಿಃ**=ಭಯಂಕರವಾದ ಮಿಂಚು ಉಗ್ರವಾದ ಆಯುಧವಾಗಿದೆ. **ಅವಸ್ಫೂರ್ಜನ್ ಪ್ರಹೇತಿಃ**=ಮಾರಕವಾದ ಸಿಡಿಲು ಅತ್ಯುಗ್ರಶಸ್ತ್ರವಾಗಿದೆ. [ಇಂತಹ ನಿನ್ನನ್ನು ಉಪಧಾನ ಮಾಡುತ್ತೇನೆ]. 🔔 **ತೇಭ್ಯಃ ನಮಃ**=ಆ ಅಗ್ನಿ, ಸೇನಾನಿ, ಗ್ರಾಮಣಿ, ಅಪ್ಸರೆಯರು, ಹೇತಿ-ಪ್ರಹೇತಿಗಳೆಲ್ಲರಿಗೂ ನಮಸ್ಕಾರ ಮಾಡುತ್ತೇನೆ/ವೆ. **ತೇ**=ಅವರು; **ನಃ**= ನಮ್ಮನ್ನು; **ಮೃಡಯಂತು**=ಸುಖಪಡಿಸಲಿ; **ತೇ**=[ವಯಮ್]=ಆ ನಾವು; **ಯಮ್ ದ್ವಿಷ್ಮಃ**= ಯಾವನನ್ನು ದ್ವೇಷಿಸುತ್ತೇವೆಯೋ; **ಯಃ ಚ ನಃ ದ್ವೇಷ್ಟಿ**=ಯಾವ ಹಗೆಯು ನಮ್ಮನ್ನು ದ್ವೇಷಿಸುತ್ತಾನೆಯೋ;

---

ಸಿಡಿಲು, ಇವು ಪರಿಚಾರಿಕೆ-ಆಯುಧವಾಗಿದ್ದಾರೆ. ಇಂತಹ ಅಗ್ನಿರೂಪದ ಇಷ್ಟಕೆಯನ್ನು

# ತಂ ವೋ ಜಂಭೇ ದಧಾಮ್ಯಾಯೋಸ್ತ್ವಾ ಸದನೇ ಸಾದಯಾಮ್ಯವತಶ್ಛಾಯಾಯಾಂ ನಮಸ್ಸಮುದ್ರಾಯ ನಮಸ್ಸಮುದ್ರಸ್ಯ ಚಕ್ಷಸೇ

---

ತಮ್ । ವಃ । ಜಂಭೇ । ದಧಾಮಿ । ಆಯೋಃ । ತ್ವಾ । ಸದನೇ । ಸಾದಯಾಮಿ । ಅವತಃ । ಛಾಯಾಯಾಮ್ । ನಮಃ । ಸಮುದ್ರಾಯ । ನಮಃ । ಸಮುದ್ರಸ್ಯ । ಚಕ್ಷಸೇ ।

---

| ಮಂತ್ರ | ವಿನಿಯೋಗ |
|---|---|
| ಆಯೋಃ...ಚಕ್ಷಸೇ ॥ | ಸ್ವಯಮಾತೃಣ್ಣೇಷ್ಟಕೆಯ ಅಭಿಮರ್ಶನಕ್ಕಾಗಿ. |

---

**ತಮ್**=ಆ ಹಗೆಯನ್ನು; **ವಃ**=ನಿಮ್ಮ; **ಜಂಭೇ**=ತೆರೆದಿರುವ ಬಾಯಿಯಲ್ಲಿ; **ದಧಾಮಿ**=ಹಾಕಿಬಿಡುತ್ತೇನೆ; [ಅವನನ್ನು ತಿಂದು ಬಿಡಿ]. 🔔 [ಹೇ! ಇಷ್ಟಕೆಯೇ!] **ಅವತಃ**=ಜಗತ್ತನ್ನು ರಕ್ಷಿಸುವ; **ಆಯೋಃ**=ಯಾವಾಗಲೂ ಸಂಚರಿಸುವ ಸೂರ್ಯನ; **ಛಾಯಾಯಾಮ್**=[ಸತ್ಯಾಮ್]=ನೆರಳು ಉಂಟಾಗಲಾಗಿ; **ತ್ವಾ**=ನಿನ್ನನ್ನು; **ಸದನೇ**=ಈ ಪ್ರದೇಶದಲ್ಲಿ; **ಸಾದಯಾಮಿ**=ಇಡುತ್ತೇನೆ. **ಸಮುದ್ರಾಯ ನಮಃ**=ಸಮುದ್ರಸದೃಶನಾದ ಸೂರ್ಯನಿಗೆ ನಮಸ್ಕಾರವು; **ಸಮುದ್ರಸ್ಯ ಚಕ್ಷಸೇ**=ಸಮುದ್ರಪ್ರಕಾಶಕನಾದ ಸೂರ್ಯನಿಗೆ/ಸೂರ್ಯನ ಪ್ರಕಾಶಕ್ಕೆ; **ನಮಃ**=ನಮಸ್ಕಾರವು.

---

ಉಪಧಾನ ಮಾಡುತ್ತೇನೆ.

ಆ ಅಗ್ನಿ, ಸೇನಾನಿ, ಗ್ರಾಮಣಿ, ಅಪ್ಸರೆಯರು, ಹೇತಿ-ಪ್ರಹೇತಿಗಳೆಲ್ಲರಿಗೂ ನಮಸ್ಕಾರ ಮಾಡುತ್ತೇನೆ. ನಾವು ಕೆಲವರನ್ನು ದ್ವೇಷಿಸಬಹುದು. ಕೆಲವರು ನಮ್ಮನ್ನು ದ್ವೇಷಿಸಬಹುದು. ಅವರನ್ನು ನೀವು ಭಕ್ಷಿಸಿ. ನೀವು ನಮ್ಮನ್ನು ಶತ್ರುರಹಿತರನ್ನಾಗಿ ಮಾಡಿ ನಾವು ಸುಖಿಗಳಾಗಿರುವಂತೆ ಮಾಡಿ. ನಿಮಗೆ ನಮಸ್ಕಾರ.

ಈ ಸ್ವಯಮಾತೃಣ್ಣೇಷ್ಟಕೆಯನ್ನು ಅಭಿಮರ್ಶನ ಮಾಡಿ, ಕುದುರೆಯಿಂದ ಆಘ್ರಾಣ ಮಾಡಿಸಿ, ಬಳಿಕ ಉಪಧಾನ ಮಾಡಬೇಕು.

**ಪರಮೇಷ್ಠೀ ತ್ವಾ ಸಾದಯತು ದಿವಃ ಪೃಷ್ಠೇ ವ್ಯಚಸ್ವತೀಂ ಪ್ರಥಸ್ವತೀಂ ವಿಭೂಮತೀಂ ಪ್ರಭೂಮತೀಂ ಪರಿಭೂಮತೀಂ ದಿವಂ ಯಚ್ಛ ದಿವಂ ದೃಗ್ಂಹ ದಿವಂ ಮಾ ಹಿಗ್ಂಸೀ-**

---

ಪರಮೇಷ್ಠೀ । ತ್ವಾ । ಸಾದಯತು । ದಿವಃ । ಪೃಷ್ಠೇ । ವ್ಯಚಸ್ವತೀಮ್ । ಪ್ರಥಸ್ವತೀಮ್ । ವಿಭೂಮತೀಮಿತಿ ವಿ-ಭೂಮತೀಮ್ । ಪ್ರಭೂಮತೀಮಿತಿ ಪ್ರ-ಭೂಮತೀಮ್ । ಪರಿಭೂಮತೀಮಿತಿ ಪರಿ-ಭೂಮತೀಮ್ । ದಿವಮ್ । ಯಚ್ಛ । ದಿವಮ್ । ದೃಗ್ಂಹ । ದಿವಮ್ । ಮಾ । ಹಿಗ್ಂಸೀಃ ।

---

| ಮಂತ್ರ | ವಿನಿಯೋಗ |
| --- | --- |
| **ಪರಮೇಷ್ಠೀ...ಧ್ರುವಾ ಸೀದ ॥** | ಸ್ವಯಮಾತೃಣ್ಣೇಷ್ಟಕೆಯ ಉಪಧಾನಕ್ಕಾಗಿ. |

---

[ಹೇ! ಇಷ್ಟಕೆಯೇ!] **ಪರಮೇಷ್ಠೀ**=ಶ್ರೇಷ್ಠವಾದ ಸತ್ಯಲೋಕದಲ್ಲಿರುವ ಬ್ರಹ್ಮದೇವನು; **ದಿವಃ**=ಸ್ವರ್ಗದ; **ಪೃಷ್ಠೇ**=ಮೇಲ್ಭಾಗದಲ್ಲಿ; **ವ್ಯಚಸ್ವತೀಮ್**=ಅಭಿವ್ಯಕ್ತಿಯುಳ್ಳ; **ಪ್ರಥಸ್ವತೀಮ್**=ವಿಸ್ತಾರವುಳ್ಳ; **ವಿಭೂಮತೀಮ್**=ವಿವಿಧವಾದ ನೂತನೋತ್ಪಾದನಶಕ್ತಿಯುಳ್ಳ; **ಪ್ರಭೂಮತೀಮ್**=ಹತೋಟಿಯಲ್ಲಿ ಇಟ್ಟುಕೊಳ್ಳುವ ಪ್ರಭುತ್ವಶಕ್ತಿಯುಳ್ಳ; **ಪರಿಭೂಮತೀಮ್**=ಶತ್ರುಗಳನ್ನು ಸೋಲಿಸುವ ಶಕ್ತಿಯುಳ್ಳ; **ತ್ವಾ**=ನಿನ್ನನ್ನು; **ಸಾದಯತು**=ಇಡಲಿ. **ದಿವಮ್ ಯಚ್ಛ**=[ಯಜಮಾನನಲ್ಲಿ] ಸ್ವರ್ಗವು ನಿಯತವಾಗಿರುವಂತೆ ಮಾಡು; **ದಿವಮ್ ದೃಗ್ಂಹ**=ಸ್ವರ್ಗಭೋಗವು ಯಜಮಾನನಲ್ಲಿ ಸ್ಥಿರವಾಗಿರುವಂತೆ ಮಾಡು; **ದಿವಮ್**=ಸ್ವರ್ಗಭೋಗವನ್ನು; **ಮಾ ಹಿಂಸೀಃ**=ನಷ್ಟವಾಗದಂತೆ ಮಾಡು;

ವಿಶ್ವಸ್ಮೈ ಪ್ರಾಣಾಯಾಪಾನಾಯ ವ್ಯಾನಾಯೋದಾನಾಯ

ಪ್ರತಿಷ್ಠಾಯೈ ಚರಿತ್ರಾಯ ಸೂರ್ಯಸ್ತ್ವಾಽಭಿ ಪಾತು

ಮಹ್ಯಾ ಸ್ವಸ್ತ್ಯಾ ಛರ್ದಿಷಾ ಶಂತಮೇನ ತಯಾ

ದೇವತಯಾಽಙ್ಗಿರಸ್ವದ್ಧ್ರುವಾ ಸೀದ ।

---

ವಿಶ್ವಸ್ಮೈ । ಪ್ರಾಣಾಯೇತಿ ಪ್ರ-ಅನಾಯ । ಅಪಾನಾಯೇತ್ಯಪ-ಅನಾಯ । ವ್ಯಾನಾಯೇತಿ ವಿ-ಅನಾಯ । ಉದಾನಾಯೇತ್ಯುತ್-ಅನಾಯ । ಪ್ರತಿಷ್ಠಾಯಾ ಇತಿ ಪ್ರತಿ-ಸ್ಥಾಯೈ । ಚರಿತ್ರಾಯ । ಸೂರ್ಯಃ । ತ್ವಾ । ಅಭೀತಿ । ಪಾತು । ಮಹ್ಯಾ । ಸ್ವಸ್ತ್ಯಾ । ಛರ್ದಿಷಾ । ಶಂತಮೇನೇತಿ ಶಮ್-ತಮೇನ । ತಯಾ । ದೇವತಯಾ । ಅಙ್ಗಿರಸ್ವತ್ । ಧ್ರುವಾ । ಸೀದ ॥

---

**ವಿಶ್ವಸ್ಮೈ**=ಎಲ್ಲ; **ಪ್ರಾಣಾಯ**=ಪ್ರಾಣವೃತ್ತಿಲಾಭಕ್ಕೂ; **ಅಪಾನಾಯ**=ಅಪಾನವಾಯು ವೃತ್ತಿಲಾಭಕ್ಕೂ; **ವ್ಯಾನಾಯ**=ವ್ಯಾನವೃತ್ತಿಲಾಭಕ್ಕೂ; **ಉದಾನಾಯ**=ಉದಾನ ವಾಯುವೃತ್ತಿಲಾಭಕ್ಕೂ; **ಪ್ರತಿಷ್ಠಾಯೈ**=ಮನೆಯಲ್ಲಿ ಸುಖವಾಗಿ ಇರುವುದಕ್ಕೂ; **ಚರಿತ್ರಾಯ**=ಶಾಸ್ತ್ರೀಯ ಆಚರಣೆಯ ಲಾಭಕ್ಕೂ; **ತ್ವಾ**=ನಿನ್ನನ್ನು; **ಸೂರ್ಯಃ**= ಸೂರ್ಯನು; **ಅಭಿ ಪಾತು**=ಸುತ್ತಲೂ ರಕ್ಷಿಸಲಿ. **ಮಹ್ಯಾ ಸ್ವಸ್ತ್ಯಾ**=ಮಹತ್ತಾಗಿರುವ ಯೋಗಕ್ಷೇಮ ಪ್ರಾಪ್ತಿಯಿಂದಲೂ; **ಶಂತಮೇನ**=ಅತ್ಯಂತ ಸುಖಕರವಾದ; **ಛರ್ದಿಷಾ** =ಪ್ರಕಾಶದಿಂದಲೂ; [ಸೂರ್ಯನು ರಕ್ಷಿಸಲಿ]. **ತಯಾ ದೇವತಯಾ**=ಆ ನಿನ್ನ ದೇವತೆಯಿಂದ [ಅನುಗ್ರಹೀತಳಾಗಿ] **ಅಙ್ಗಿರಸ್ವತ್**=ಅಂಗಿರೋಮುನಿಗಳ ಚಯನ ದಲ್ಲಿ ಹೇಗೋ ಹಾಗೆ; **ಧ್ರುವಾ ಸೀದ**=ಸ್ಥಿರವಾಗಿ ಇಲ್ಲಿ ಇರು.

---

ಜಗತ್ತನ್ನು ಕಾಪಾಡುವ, ಸದಾ ಸಂಚಾರಶೀಲನಾದ ಸೂರ್ಯನ ತಾಪವು ಕಡಿಮೆ ಯಾಗಿ, ನೆರಳು ಉಂಟಾಗಲಾಗಿ, ಈ ಪ್ರದೇಶದಲ್ಲಿ ನಿನ್ನನ್ನು ಇಡುತ್ತೇನೆ. ಸಮುದ್ರ

ಪ್ರೋಥದಶ್ವೋ ನ ಯವಸೇ ಅವಿಷ್ಯನ್, ಯದಾ ಮಹಃ

ಸಂವರಣಾದ್ವ್ಯಸ್ಥಾತ್ ॥ ಆದಸ್ಯ ವಾತೋ ಅನುವಾತಿ

ಶೋಚಿರಧ ಸ್ಮ ತೇ ವ್ರಜನಂ ಕೃಷ್ಣಮಸ್ತಿ ॥ ೯-೩ ॥

[ ಪ್ರಮ್ಲೋಚಂತೀ ಚ ಯಗ್ಂ ಸ್ವಸ್ತ್ಯಾಽಷ್ಟಾವಿಗ್ಂಶತಿಶ್ಚ ॥]

---

ಪ್ರೋಥತ್ । ಅಶ್ವಃ । ನ । ಯವಸೇ । ಅವಿಷ್ಯನ್ನ್ । ಯದಾ । ಮಹಃ । ಸಂವರಣಾದಿತಿ ಸಮ್-ವರಣಾತ್ । ವ್ಯಸ್ಥಾದಿತಿ ವಿ-ಅಸ್ಥಾತ್ ॥ ಆತ್ । ಅಸ್ಯ । ವಾತಃ । ಅನ್ವಿತಿ । ವಾತಿ । ಶೋಚಿಃ । ಅಧ । ಸ್ಮ । ತೇ । ವ್ರಜನಮ್ । ಕೃಷ್ಣಮ್ । ಅಸ್ತಿ ॥ ೯ ॥

---

| ಮಂತ್ರ | ವಿನಿಯೋಗ |
|---|---|
| ಪ್ರೋಥದಶ್ವೋ...ಅಸ್ತಿ ॥ | ಚಯನದ ಉತ್ತರಾಂಗದಲ್ಲಿ ವಿಕರ್ಣೀಇಷ್ಟಕೆಯ ಉಪಧಾನಕ್ಕಾಗಿ. |

---

▲[ಅಗ್ನಿರೂಪವಾದ ವಿಕರ್ಣೀಇಷ್ಟಕೆಯೇ!] **ಯದಾ**=ಯಾವಾಗ; **ಅಶ್ವಃ**=ಕುದುರೆಯು; **ಮಹಃ**=ದೊಡ್ಡದಾದ; **ಸಂವರಣಾತ್**=ಅಶ್ವಶಾಲೆಯಿಂದ; **ವ್ಯಸ್ಥಾತ್**=ಹೊರ ಹೊರಡುತ್ತದೆಯೋ; [ತದಾ=ಆಗ]; **ಯವಸೇ**=ಹುಲ್ಲಿನ ನಿಮಿತ್ತವಾಗಿ/ಹುಲ್ಲಿಗಾಗಿ; **ಅವಿಷ್ಯನ್**=ಸಂಚರಿಸುತ್ತಾ; **ಪ್ರೋಥತ್**=ಶಬ್ದ ಮಾಡುತ್ತದೆ; **ಅಶ್ವಃ ನ**=ಆ ಕುದುರೆ ಯಂತೆ; [ಈ ಅಗ್ನಿಯೂ] [ಜ್ವಲಿಸುವಾಗ] **ಪ್ರೋಥತ್**=ಚಟ-ಚಟ ಶಬ್ದವನ್ನು ಮಾಡು ತ್ತದೆ; **ಆತ್ ಅಧ**=ಇದರ ಅನಂತರವೇ; **ಅಸ್ಯ**=ಈ ಅಗ್ನಿಯ; **ಶೋಚಿಃ ಅನು**= ಜ್ವಾಲೆಯನ್ನು ಅನುಸರಿಸಿ; **ವಾತಃ**=ವಾಯುವು; **ವಾತಿ**=ಬೀಸುತ್ತದೆ. ಅಧ=ಅನಂತರ; **ತೇ ವ್ರಜನಮ್**=ನಿನ್ನ ಸಂಚಾರಮಾರ್ಗವು; **ಕೃಷ್ಣಮ್ ಅಸ್ತಿ ಸ್ಮ**=ದಾಹದಿಂದ ಕಪ್ಪಾಗಿರುವುದು.

ದಂತಿರುವ ಸೂರ್ಯನಿಗೆ ನಮಸ್ಕಾರ.

ಅಗ್ನಿಚಯನದ ಪಂಚಮಚಿತಿಯ ಮಧ್ಯದಲ್ಲಿ ಈ ಸ್ವಯಮಾತೃಣ್ಣೇಷ್ಟಕೆಯನ್ನು ಉಪಧಾನ ಮಾಡಬೇಕು.

ಈ ಇಷ್ಟಕೆಯು ಬಹುವಿಧವಾದ ಶಕ್ತಿಯುಳ್ಳದ್ದಾಗಿದೆ. ಇಂತಹ ಶಕ್ತಿಯುಳ್ಳ ಇಷ್ಟಕೆಯನ್ನು ಬ್ರಹ್ಮನು ಸ್ವರ್ಗದ ಮೇಲ್ಭಾಗದಲ್ಲಿಡಲಿ. ಇದು ಪ್ರಾಣಾದಿಗಳನ್ನು ಸರಿಯಾದ ಸ್ಥಿತಿಯಲ್ಲಿಟ್ಟು, ಪ್ರಾಣಿಗಳು ಅಪೇಕ್ಷಿಸಿದುದನ್ನು ಕೊಡಲಿ. ಎಲ್ಲ ವಾಯುಗಳೂ ತಮ್ಮ ಮನೆಯಲ್ಲಿ ಸುಖವಾಗಿ ಇರುವುದಕ್ಕೂ, ಶಾಸ್ತ್ರೀಯ ಆಚರಣೆಯ ಲಾಭಕ್ಕೂ ಈ ಎಲ್ಲದರ ಸಿದ್ಧಿಗಾಗಿ ಈ ಇಷ್ಟಕೆಯನ್ನು ಸೂರ್ಯನು ರಕ್ಷಿಸಲಿ. ಈ ಇಷ್ಟಕೆಯು ಅಂಗಿರಸರ ಚಯನದಲ್ಲಿ ಸ್ಥಿರವಾಗಿದ್ದಂತೆ ಈ ನಮ್ಮ ಚಯನದಲ್ಲಿಯೂ ಸ್ಥಿರವಾಗಿರಲಿ ಎಂದು ಪ್ರಾರ್ಥನೆ.

ಹೇ! ವಿಕರ್ಣೀಷ್ಟಕೆಯೇ! ಕುದುರೆಯು ಹುಲ್ಲಿಗಾಗಿ ಅಶ್ವಶಾಲೆಯಿಂದ ಹೊರಗೆ ಕಾಡಿಗೆ ಹೋಗುವಾಗ ಕೆನೆಯುತ್ತಾ ಶಬ್ದ ಮಾಡುತ್ತದೆ. ಅದರಂತೆ ಅಗ್ನಿಯೂ ಜ್ವಲಿಸುವಾಗ ಶಬ್ದವನ್ನು ಮಾಡುತ್ತದೆ. ಅದನ್ನು ಅನುಸರಿಸಿ ಅಗ್ನಿಸಖನಾದ ವಾಯುವೂ ಬೀಸುತ್ತದೆ. ಆಗ ಕಾಡುಗಿಚ್ಚು ಸಂಭವಿಸಿ ಅರಣ್ಯವನ್ನು ಸುಡುತ್ತದೆ. ಆ ಭಾಗವು ಸುಟ್ಟು ಕಪ್ಪುಬಣ್ಣವುಳ್ಳದ್ದಾಗಿ ಪರಿಣಮಿಸುತ್ತದೆ. ಇಂತಹ ಅಗ್ನಿರೂಪವಾದ ವಿಕರ್ಣೀಷ್ಟಕೆಯಾದ ನಿನ್ನನ್ನು ಉಪಧಾನ ಮಾಡುತ್ತೇನೆ.

---

## ವಿನಿಯೋಗಸಂಗ್ರಹ

1-5 ಅಯಂ ಪುರಃ ಪಂಚ ಚೋಡಾಸ್ತೇಭ್ಯ ಇತ್ಯನುಷಜ್ಯತೇ ।

6 ಆ ಸ್ಪೃಶೇತ್ ಸ್ವಯಮಾತೃಣ್ಣಾಂ 7 ಪರಮೇಷ್ಠೀತಿ ಸಾದಯೇತ್ ॥

8 ಪ್ರೋಥದ್ವಿಕರ್ಣೀಮಾದಧ್ಯಾತ್ ಮಂತ್ರಾ ಅಷ್ಟಾವಿಹೇರಿತಾಃ ।

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-8

## ॥ ಚತುರ್ಥೋಽನುವಾಕಃ ॥

ಅಗ್ನಿರ್ಮೂರ್ಧಾ ದಿವಃ ಕಕುತ್ಪತಿಃ ಪೃಥಿವ್ಯಾ ಅಯಮ್ ।

ಅಪಾಗ್ಂ ರೇತಾಗ್ಂಸಿ ಜಿನ್ವತಿ ॥

---

ಅಗ್ನಿಃ । ಮೂರ್ಧಾ । ದಿವಃ । ಕಕುತ್ । ಪತಿಃ । ಪೃಥಿವ್ಯಾಃ । ಅಯಮ್ ॥ ಅಪಾಮ್ ।

ರೇತಾಗ್ಂಸಿ । ಜಿನ್ವತಿ ॥

---

ಮೂರನೆಯ ಅನುವಾಕದಲ್ಲಿ ಚೋಡೇಷ್ಟಕೆಗಳ ಉಪಧಾನಮಂತ್ರಗಳು ಹೇಳಲ್ಪಟ್ಟವು. ಈ ನಾಲ್ಕನೆಯ ಅನುವಾಕದಲ್ಲಿ ಛಂದಃಸಂಜ್ಞಕವಾದ ಇಷ್ಟಕೆಗಳ ಮಂತ್ರಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
|---|---|
| ಅಗ್ನಿರ್ಮೂರ್ಧಾ...ಜಿನ್ವತಿ ॥ | ಮೊದಲಿನ ಮೂರು ಗಾಯತ್ರೀಷ್ಟಕೆಗಳಲ್ಲಿ ಮೊದಲನೆಯ ಗಾಯತ್ರೀಷ್ಟಕೋಪಧಾನಕ್ಕಾಗಿ. |

---

🔔 **ಅಗ್ನಿಃ**=ಸೂರ್ಯರೂಪದಿಂದಿರುವ ಅಗ್ನಿಯು; **ದಿವಃ**=ದ್ಯುಲೋಕದ; **ಕಕುತ್ ಮೂರ್ಧಾ**=ಎತ್ತರಪ್ರದೇಶದಲ್ಲಿರುವ ಶಿರೋರೂಪನಾಗಿರುತ್ತಾನೆ. **ಅಯಮ್**=ಈ ಅಗ್ನಿಯು; [ದಾಹ-ಪಾಕಾದಿಗಳಿಂದ] **ಪೃಥಿವ್ಯಾಃ**=ಭೂಲೋಕದ; **ಪತಿಃ**=ಪಾಲಕನೂ ಆಗಿರುತ್ತಾನೆ; **ಅಪಾಮ್**=ನೀರಿನ; **ರೇತಾಂಸಿ**=ಕಾರ್ಯಗಳಾಗಿರುವ; [ಸ್ಥಾವರ-ಜಂಗಮ ಶರೀರಗಳನ್ನು]; **ಜಿನ್ವತಿ**=[ಜಾಠರಾಗ್ನಿರೂಪದಿಂದ] ತೃಪ್ತಿಪಡಿಸುತ್ತಾನೆ.

---

ಅಗ್ನಿಯು ಸೂರ್ಯರೂಪನಾಗಿ, ಅಗ್ನಿರೂಪನಾಗಿ, ಜಾಠರಾಗ್ನಿರೂಪನಾಗಿ ಮೂರು

ತ್ವಾಮಗ್ನೇ ಪುಷ್ಕರಾದಧ್ಯಥರ್ವಾ ನಿರಮಂಥತ । ಮೂರ್ಧ್ನೋ ವಿಶ್ವಸ್ಯ ವಾಘತಃ ॥ ಅಯಮಗ್ನಿಃ ಸಹಸ್ರಿಣೋ ವಾಜಸ್ಯ ಶತಿನಸ್ಪತಿಃ । ಮೂರ್ಧಾ ಕವೀ ರಯೀಣಾಮ್ ॥

---

ತ್ವಾಮ್ । ಅಗ್ನೇ । ಪುಷ್ಕರಾತ್ । ಅಧೀತಿ । ಅಥರ್ವಾ । ನಿರಿತಿ । ಅಮಂಥತ ॥ ಮೂರ್ಧ್ನಃ । ವಿಶ್ವಸ್ಯ । ವಾಘತಃ ॥ ಅಯಮ್ । ಅಗ್ನಿಃ । ಸಹಸ್ರಿಣಃ । ವಾಜಸ್ಯ । ಶತಿನಃ । ಪತಿಃ ॥ ಮೂರ್ಧಾ । ಕವಿಃ । ರಯೀಣಾಮ್ ॥

---

| ಮಂತ್ರ | ವಿನಿಯೋಗ |
|---|---|
| ತ್ವಾಮಗ್ನೇ...ವಾಘತಃ ॥ | ಎರಡನೆಯ ಗಾಯತ್ರೀಷ್ಟಕೋಪಧಾನಕ್ಕಾಗಿ. |
| ಅಯಮಗ್ನಿಃ...ರಯೀಣಾಮ್ ॥ | ಮೂರನೆಯ ಗಾಯತ್ರೀಷ್ಟಕೋಪಧಾನಕ್ಕಾಗಿ. |

---

▲ ಅಗ್ನೇ=ಹೇ! ಅಗ್ನಿಯೇ! ಅಥರ್ವಾ=ಅಥರ್ವನೆಂಬ ಋಷಿಯು; ವಿಶ್ವಸ್ಯ=ಜಗತ್ತಿನ; ವಾಘತಃ=ನಿರ್ವಾಹಕವಾದ; ಮೂರ್ಧ್ನಃ=ತಲೆಯಂತೆ ಪ್ರಶಸ್ತವಾದ; ಪುಷ್ಕರಾತ್ ಅಧಿ=ಪದ್ಮಪತ್ರದಿಂದ ಮೇಲೆ; ತ್ವಾಮ್=ನಿನ್ನನ್ನು; ನಿಃ ಅಮಂಥತ=ನಿಃಶೇಷವಾಗಿ ಕಡೆದು ಪಡೆದುಕೊಂಡನು. ▲ ಅಯಮ್ ಅಗ್ನಿಃ=ಈ ಅಗ್ನಿಯು; ಸಹಸ್ರಿಣಃ=ಸಹಸ್ರಸಂಖ್ಯಾಕವಾದ; ಶತಿನಃ=ಶತಸಂಖ್ಯಾಕವಾದ; ವಾಜಸ್ಯ=ಅನ್ನಕ್ಕೆ; ಪತಿಃ=ಪಾಲಕನಾಗಿರುತ್ತಾನೆ. ಮೂರ್ಧಾ=ತಲೆಯಂತೆ ಶ್ರೇಷ್ಠನಾಗಿಯೂ; ಕವಿಃ=ವಿದ್ವಾಂಸನಾಗಿಯೂ [ಇರುವ ಈ ಅಗ್ನಿಯು] ರಯೀಣಾಮ್=ಸಂಪತ್ತನ್ನು/ಧನವನ್ನು [ಕೊಡುವವನಾಗಲಿ]

---

ಲೋಕಗಳ ಪಾಲಕನಾಗಿರುತ್ತಾನೆ. ಅಗ್ನಿಯ ದಾಹ-ಪಾಕಾದಿಕಾರ್ಯಗಳು ಪ್ರಸಿದ್ಧವಾಗಿವೆ.

ಪಂಚಮಕಾಂಡದಲ್ಲಿ 'ಪುಷ್ಕರಪರ್ಣೇ ಹ್ಯೇನಮುಪ್ಶ್ರಿತಮವಿಂದತ್' [ಅಥರ್ವಮುನಿಯು

ಭುವೋ ಯಜ್ಞಸ್ಯ ರಜಸಶ್ಚ ನೇತಾ ಯತ್ರಾ ನಿಯುದ್ಭಿಃ
ಸಚಸೇ ಶಿವಾಭಿಃ । ದಿವಿ ಮೂರ್ಧಾನಂ ದಧಿಷೇ
ಸುವರ್ಷಾಂ ಜಿಹ್ವಾಮಗ್ನೇ ಚಕೃಷೇ ಹವ್ಯವಾಹಮ್ ॥

---

ಭುವಃ । ಯಜ್ಞಸ್ಯ । ರಜಸಃ । ಚ । ನೇತಾ । ಯತ್ರ । ನಿಯುದ್ಭಿರಿತಿ ನಿಯುತ್-ಭಿಃ । ಸಚಸೇ । ಶಿವಾಭಿಃ ॥ ದಿವಿ । ಮೂರ್ಧಾನಮ್ । ದಧಿಷೇ । ಸುವರ್ಷಾಮಿತಿ ಸುವಃ-ಸಾಮ್ । ಜಿಹ್ವಾಮ್ । ಅಗ್ನೇ । ಚಕೃಷೇ । ಹವ್ಯವಾಹಮಿತಿ ಹವ್ಯ-ವಾಹಮ್ ॥

---

| ಮಂತ್ರ | ವಿನಿಯೋಗ |
|---|---|
| ಭುವೋ...ಹವ್ಯವಾಹಮ್ ॥ | ಮೂರು ತ್ರಿಷ್ಟುಪ್ಛಂದಸ್ಸಿನ ಮೂರು ಇಷ್ಟಕೆಗಳಲ್ಲಿ ಮೊದಲನೆಯದರ ಉಪಧಾನಕ್ಕಾಗಿ. |

---

▲ ಈ ಅಗ್ನಿದೇವನು; **ಭುವಃ**=ಭೂಲೋಕದ; **ಯಜ್ಞಸ್ಯ**=[ಅಲ್ಲಿ ನಡೆಯುವ] ಯಜ್ಞಗಳ; **ರಜಸಃ ಚ**=ಮತ್ತು ಯಾಗಪ್ರವರ್ತಕವಾದ ರಜೋಗುಣದ; **ನೇತಾ**=ಪ್ರವರ್ತಕನೂ, ನಾಯಕನೂ ಆಗಿರುತ್ತಾನೆ. **ಅಗ್ನೇ**=ಇಂತಹ ಅಗ್ನಿದೇವನೇ!; **ಯತ್ರ ದಿವಿ**=ಯಾವ ದ್ಯುಲೋಕದಲ್ಲಿ ಆದಿತ್ಯರೂಪನಾಗಿ; **ನಿಯುದ್ಭಿಃ**=ರಥಕ್ಕೆ ಯಾವಾಗಲೂ ಕಟ್ಟುವ; **ಶಿವಾಭಿಃ**=ಮಂಗಳಕರವಾದ/ಉತ್ತಮಾಶ್ವಗಳಿಂದ; **ಸಚಸೇ**=ಸಂಬಂಧಿಸಿರುತ್ತೀಯೋ; [ಆ ದ್ಯು-ಲೋಕದಲ್ಲಿ] **ಸುವರ್ಷಾಮ್**=ಸ್ವರ್ಗದಲ್ಲಿ ಯಾವಾಗಲೂ ಇರುತ್ತೀಯೆಂಬ; **ಮೂರ್ಧಾನಮ್**=ತಲೆಯಂತೆ ಶ್ರೇಷ್ಠವಾದ ಕೀರ್ತಿಯನ್ನು; **ದಧಿಷೇ**=ಹೊಂದಿರುತ್ತೀಯೆ; **ಹವ್ಯವಾಹಮ್**=ದೇವತೆಗಳಿಗೆ ಹವ್ಯವನ್ನು ಒಯ್ಯುವ; **ಜಿಹ್ವಾಮ್**=ಜ್ವಾಲೆಯೆಂಬ ನಾಲಿಗೆಯನ್ನು; **ಚಕೃಷೇ**=ಹೊಂದಿರುತ್ತೀಯೆ.

---

ಕಡೆದು ಪುಷ್ಕರಪತ್ರದಲ್ಲಿರುವ ಅಗ್ನಿಯನ್ನು ಸಂಪೂರ್ಣವಾಗಿ ಪಡೆದುಕೊಂಡನು] ಎಂದು ಹೇಳಿದೆ.

ಈ ಪುಷ್ಕರಪತ್ರವು ಅಗ್ನಿಮಂಥನಕ್ಕೆ ಆಧಾರವಾಗುವುದರ ಮೂಲಕ ಜಗತ್ತಿನ ನಿರ್ವಾಹಸಾಧನವಾಗಿದೆ.

ಅಬೋಧ್ಯಗ್ನಿಃ ಸಮಿಧಾ ಜನಾನಾಂ [ಜನಾನಾಮ್(೧೦)]

ಪ್ರತಿ ಧೇನುಮಿವಾಽಽಯತೀಮುಷಾಸಮ್ । ಯಹ್ವಾ ಇವ

ಪ್ರ ವಯಾಮುಜ್ಜಿಹಾನಾಃ ಪ್ರ ಭಾನವಃ ಸಿಸ್ರತೇ ನಾಕಮಚ್ಛ ॥

ಅಬೋಧಿ । ಅಗ್ನಿಃ । ಸಮಿಧೇತಿ ಸಮ್-ಇಧಾ । ಜನಾನಾಮ್ ।(೧೦)। ಪ್ರತೀತಿ । ಧೇನುಮ್ । ಇವ । ಆಯತೀಮಿತ್ಯಾ-ಯತೀಮ್ । ಉಷಾಸಮ್ ॥ ಯಹ್ವಾಃ । ಇವ । ಪ್ರೇತಿ । ವಯಾಮ್ । ಉಜ್ಜಿಹಾನಾ ಇತ್ಯುತ್-ಜಿಹಾನಾಃ । ಪ್ರೇತಿ । ಭಾನವಃ । ಸಿಸ್ರತೇ । ನಾಕಮ್ । ಅಚ್ಛ ॥

| ಮಂತ್ರ | ವಿನಿಯೋಗ |
|---|---|
| ಅಬೋಧ್ಯಗ್ನಿಃ...ಅಚ್ಛ ॥ | ಎರಡನೆಯ ತ್ರಿಷ್ಟುಬಿಷ್ಟಕೋಪಧಾನಕ್ಕಾಗಿ. |

▲ ಅಗ್ನಿಃ=ಅಗ್ನಿದೇವನು; ಜನಾನಾಮ್=ಋತ್ವಿಗ್ಜನರ [ಋತ್ವಿಜರು ಹಾಕುವ] ಸಮಿಧಾ=ಸಮಿತ್ತುಗಳಿಂದ; ಆಯತೀಮ್=ಎದುರಾಗುತ್ತಿರುವ; ಉಷಾಸಮ್ ಪ್ರತಿ=ಉಷಃಕಾಲದಲ್ಲಿ; ಧೇನುಮ್ ಇವ=ಹಸುವನ್ನು ಹೇಗೋ ಹಾಗೆ; ಅಬೋಧಿ =ಎಚ್ಚರಗೊಳಿಸಲ್ಪಟ್ಟಿದ್ದಾನೆ. ಭಾನವಃ=ಅಗ್ನಿಯ ಕಿರಣಗಳು/ಜ್ವಾಲೆಗಳು; ನಾಕಮ್ ಅಚ್ಛ=ಸ್ವರ್ಗವನ್ನು ಹೊಂದುವುದಕ್ಕೆ; ಉಜ್ಜಿಹಾನಾಃ=ಮೇಲಕ್ಕೆ ಪ್ರಸರಿಸುವುವು ಗಳಾಗಿ; ವಯಾಮ್=ಹಕ್ಕಿಗಳಲ್ಲಿ; ಪ್ರ ಯಹ್ವಾಃ ಇವ=ದೊಡ್ಡ ಹಕ್ಕಿಗಳಂತೆ; ಪ್ರ ಸಿಸ್ರತೇ=ಪ್ರಸರಿಸುತ್ತವೆ.

ಈ ಅಗ್ನಿಯು ಯಜ್ಞನಿರ್ವಾಹಕನಾಗಿ, ಜಗತ್ತನ್ನು ಧರಿಸುವವನೂ ಆಗಿರುತ್ತಾನೆ. ಅವನು ಅನುಗ್ರಹಿಸಲಿ.

ಅಗ್ನಿದೇವನು ಭೂಮಿಯ, ಯಾಗಗಳ ಮತ್ತು ರಜೋಗುಣದ ಪ್ರವರ್ತಕನು. ಸ್ವರ್ಗದಲ್ಲಿ ಆದಿತ್ಯರೂಪದಿಂದ ಸಪ್ತಾಶ್ವಯುಕ್ತವಾದ ರಥದಲ್ಲಿ ಸಂಚರಿಸುವವನು.

**ಅವ್ರೋಚಾಮ ಕವಯೇ ಮೇಧ್ಯಾಯ ವಚೋ ವಂದಾರು ವೃಷಭಾಯ ವೃಷ್ಣೇ । ಗವಿಷ್ಠಿರೋ ನಮಸಾ ಸ್ತೋಮಮಗ್ನೌ ದಿವೀವ ರುಕ್ಮಮುರ್ವ್ಯಂಚಮಶ್ರೇತ್ ॥**

---

ಅವ್ರೋಚಾಮ । ಕವಯೇ । ಮೇಧ್ಯಾಯ । ವಚಃ । ವಂದಾರು । ವೃಷಭಾಯ । ವೃಷ್ಣೇ ॥ ಗವಿಷ್ಠಿರಃ । ನಮಸಾ । ಸ್ತೋಮಮ್ । ಅಗ್ನೌ । ದಿವಿ । ಇವ । ರುಕ್ಮಮ್ । ಉರ್ವ್ಯಂಚಮ್ । ಅಶ್ರೇತ್ ॥

---

| ಮಂತ್ರ | ವಿನಿಯೋಗ |
|---|---|
| **ಅವ್ರೋಚಾಮ...ಅಶ್ರೇತ್ ॥** | ಮೂರನೆಯ ತ್ರಿಷ್ಟುಬಿಷ್ಟಕೋಪಧಾನಕ್ಕಾಗಿ. |

---

[ನಾವು] **ಕವಯೇ**=ವಿದ್ವಾಂಸನಾದ; **ಮೇಧ್ಯಾಯ**=ಯಜ್ಞಯೋಗ್ಯನಾದ; **ವೃಷಭಾಯ**=ಶ್ರೇಷ್ಠನಾದ; **ವೃಷ್ಣೇ**=ಇಷ್ಟಾರ್ಥಗಳನ್ನು ಸುರಿಸುವ; **ಗವಿಷ್ಠಿರಃ**/ಗವಿಷ್ಠಿರಾಯ=ಭೂಮಿಯಲ್ಲಿ ಸ್ಥಿರನಾಗಿರುವ [ಅಗ್ನಿದೇವನಿಗೆ]; **ಅಗ್ನೌ**=ಅಗ್ನಿಯ ವಿಷಯದಲ್ಲಿ; **ನಮಸಾ**=ನಮಸ್ಕಾರಯುಕ್ತವಾದ; **ಸ್ತೋಮಮ್**=ಸ್ತೋತ್ರರೂಪವಾದ; **ವಂದಾರು**=ಅಭಿವಾದನಶೀಲವಾದ; **ವಚಃ**=ಮಾತನ್ನು; **ಅವ್ರೋಚಾಮ**=ಹೇಳುತ್ತೇವೆ. [ಈ ಮಾತು][ಸಂಧ್ಯಾವಂದನಾದಿಗಳಲ್ಲಿ ಬ್ರಾಹ್ಮಣರಿಂದ ಹೇಳಲ್ಪಡುವ ಮಂತ್ರರೂಪ ಮಾತು]; **ದಿವಿ**=ಅಂತರಿಕ್ಷದಲ್ಲಿ; **ರುಕ್ಮಮ್**=ಪ್ರಕಾಶಿಸುವ; **ಉರ್ವ್ಯಂಚಮ್ ಇವ**=ವಿಸ್ತೀರ್ಣಗತಿಯುಳ್ಳ ಸೂರ್ಯನನ್ನು ಆಶ್ರಯಿಸುವಂತೆ [ಅಗ್ನಿಯನ್ನು] **ಅಶ್ರೇತ್**=ಆಶ್ರಯಿಸಲಿ.

---

ಸ್ವರ್ಗದಲ್ಲಿ ಯಾವಾಗಲೂ ಇರುವವನೆಂಬ ಕೀರ್ತಿಯನ್ನು ಪಡೆದವನು. ಅಗ್ನಿಯು ತನ್ನ ಜ್ವಾಲೆಯನ್ನು ದೇವತೆಗಳಿಗೆ ಹವ್ಯವಾಹವನ್ನಾಗಿ ಮಾಡಿದ್ದಾನೆ.

ಕರುವಿಗೆ ಹಾಲನ್ನು ಕೊಡಲು ಉಷಃಕಾಲವು ಸಮೀಪಿಸಿದಂತೆ ಹಸುವನ್ನು ಎಬ್ಬಿಸುತ್ತಾರೆ. ಹಾಗೆಯೇ ಋತ್ವಿಜರು ಹವ್ಯಗಳನ್ನು ಸಮರ್ಪಿಸುವುದಕ್ಕಾಗಿ ಅಗ್ನಿಯನ್ನು

ಜನಸ್ಯ ಗೋಪಾ ಅಜನಿಷ್ಟ ಜಾಗೃವಿರಗ್ನಿಸ್ಸುದಕ್ಷಃ ಸುವಿತಾಯ

ನವ್ಯಸೇ । ಘೃತಪ್ರತೀಕೋ ಬೃಹತಾ ದಿವಿಸ್ಪೃಶಾ

ದ್ಯುಮದ್ವಿಭಾತಿ ಭರತೇಭ್ಯಃ ಶುಚಿಃ ॥

---

ಜನಸ್ಯ । ಗೋಪಾ ಇತಿ ಗೋ–ಪಾಃ । ಅಜನಿಷ್ಟ । ಜಾಗೃವಿಃ । ಅಗ್ನಿಃ । ಸುದಕ್ಷ ಇತಿ ಸು–ದಕ್ಷಃ । ಸುವಿತಾಯ । ನವ್ಯಸೇ ॥ ಘೃತಪ್ರತೀಕ ಇತಿ ಘೃತ–ಪ್ರತೀಕಃ । ಬೃಹತಾ । ದಿವಿಸ್ಪೃಶೇತಿ ದಿವಿ–ಸ್ಪೃಶಾ । ದ್ಯುಮದಿತಿ ದ್ಯು–ಮತ್ । ವೀತಿ । ಭಾತಿ । ಭರತೇಭ್ಯಃ । ಶುಚಿಃ ॥

---

| ಮಂತ್ರ | ವಿನಿಯೋಗ |
|---|---|
| ಜನಸ್ಯ ಗೋಪಾ...ಶುಚಿಃ ॥ | ಜಗತೀಛಂದಸ್ಸಿನ ಮೂರು ಇಷ್ಟಕೆಗಳಲ್ಲಿ ಮೊದಲನೆಯದರ ಉಪಧಾನಕ್ಕಾಗಿ. |

---

🔔 ಜನಸ್ಯ ಗೋಪಾಃ=ಜನರ ರಕ್ಷಕನಾದ; ಜಾಗೃವಿಃ=ಜಾಗರೂಕನಾಗಿರುವ; ಸುದಕ್ಷಃ=ಅತ್ಯಂತ ಕುಶಲನಾದ; ಅಗ್ನಿಃ=ಅಗ್ನಿಯು; ಸುವಿತಾಯ=ಪ್ರಕಾಶಯುಕ್ತವಾದ ಸ್ತುತ್ಯರ್ಹವಾದ; ನವ್ಯಸೇ=ಯಜ್ಞಕ್ಕಾಗಿ; ಅಜನಿಷ್ಟ=ಉತ್ಪನ್ನನಾದನು. ಘೃತಪ್ರತೀಕಃ=ಮುಖದಲ್ಲಿ ಘೃತವುಳ್ಳ [ಘೃತವೇ ಆಹುತಿಯಾಗಿರುವ] [ಈ ಅಗ್ನಿಯು]; ಶುಚಿಃ=ಶುದ್ಧನಾದವನು; ಬೃಹತಾ=ಪ್ರೌಢವಾದ; ದಿವಿಸ್ಪೃಶಾ=ದ್ಯುಲೋಕವನ್ನು ಮುಟ್ಟುವ; [ಜ್ವಾಲೆಗಳ ಸಮೂಹದಿಂದ] ದ್ಯುಮತ್/ದ್ಯುಮಾನ್=ಪ್ರಕಾಶಯುಕ್ತನಾಗಿ; ಭರತೇಭ್ಯಃ=ತನ್ನನ್ನು ಭರಿಸುವ ಯಜಮಾನರಿಗಾಗಿ; ವಿ ಭಾತಿ=ಚೆನ್ನಾಗಿ ಪ್ರಕಾಶಿಸುತ್ತಾನೆ.

---

ಸಮಿತ್ತುಗಳಿಂದ ಪ್ರಜ್ವಲಿಸುವಂತೆ ಮಾಡುತ್ತಾರೆ. ಹೀಗೆ ಅಗ್ನಿಯು ಎಚ್ಚರಗೊಳಿಸಲ್ಪಟ್ಟಿದ್ದಾನೆ. ಬಲವಾದ ದೊಡ್ಡ ಹಕ್ಕಿಗಳು ಅಂತರಿಕ್ಷದಲ್ಲಿ ಮೇಲಕ್ಕೆ ಹಾರುವಂತೆ

ತ್ವಾಮಗ್ನೇ ಅಂಗಿರಸೋ[ಅಂಗಿರಸಃ(೧೧)]ಗುಹಾ ಹಿತಮನ್ವ ವಿಂದಞ್ಛಿಶ್ರಿಯಾಣಂ ವನೇವನೇ। ಸ ಜಾಯಸೇ ಮಥ್ಯಮಾನಃ ಸಹೋ ಮಹತ್ತ್ವಾಮಾಹುಃ ಸಹಸಸ್ಪುತ್ರಮಂಗಿರಃ ॥

---

ತ್ವಾಮ್ । ಅಗ್ನೇ । ಅಂಗಿರಸಃ ।(೧೧)। ಗುಹಾ । ಹಿತಮ್ । ಅನ್ವಿತಿ । ಅವಿಂದನ್ । ಶಿಶ್ರಿಯಾಣಮ್ । ವನೇವನ ಇತಿ ವನೇ-ವನೇ ॥ ಸಃ । ಜಾಯಸೇ । ಮಥ್ಯಮಾನಃ । ಸಹಃ । ಮಹತ್ । ತ್ವಾಮ್ । ಆಹುಃ । ಸಹಸಃ । ಪುತ್ರಮ್ । ಅಂಗಿರಃ ॥

---

| ಮಂತ್ರ | ವಿನಿಯೋಗ |
|---|---|
| ತ್ವಾಮಗ್ನೇ...ಅಂಗಿರಃ ॥ | ಜಗತೀಛಂದಸ್ಸಿನ ಎರಡನೆಯ ಇಷ್ಟಕೆಯ ಉಪಧಾನಕ್ಕಾಗಿ. |

---

**ಅಗ್ನೇ**=ಹೇ! ಅಗ್ನಿಯೇ! **ಅಂಗಿರಸಃ**=ಅಂಗಿರಸ ಮುನಿಗಳು; **ಗುಹಾ**=ಅರಣಿಗಳಲ್ಲಿ; **ಹಿತಮ್**=ಗುಪ್ತವಾಗಿರುವ; **ವನೇವನೇ**=ಆಯಾ ವನಗಳಲ್ಲಿ; **ಶಿಶ್ರಿಯಾಣಮ್**=ಕಾಡುಗಿಚ್ಚಿನಂತೆ ಗುಪ್ತನಾಗಿರುವ; **ತ್ವಾಮ್**=ನಿನ್ನನ್ನು; **ಅನ್ವವಿಂದನ್**=ಹುಡುಕಿ ಪಡೆದರು. **ಸಃ**=ಅಂತಹ ನೀನು; **ಮಹತ್**=ಹೆಚ್ಚಿನ; **ಸಹಃ**=ಬಲವನ್ನು [ಅವಲಂಬಿಸಿ] **ಮಥ್ಯಮಾನಃ**=ಕಡೆಯಲ್ಪಟ್ಟವನಾಗಿ; **ಜಾಯಸೇ**=ಹುಟ್ಟುತ್ತೀಯೆ. **ಅಂಗಿರಃ**=ಅಂಗ ಸೌಷ್ಠವಯುಕ್ತನೇ!/ಅಂಗಿರಸ ಮಹರ್ಷಿಗಳ ಮಂಥನದಿಂದ ಜನಿಸಿದವನೇ! **ತ್ವಾಮ್**=ನಿನ್ನನ್ನು; **ಸಹಸಃ ಪುತ್ರಮ್**=[ಬಲವಾಗಿ ಕಡೆದಾಗ ಜನಿಸುವೆಯಾದುದರಿಂದ] ಬಲದ ಪುತ್ರನೆಂದು; **ಆಹುಃ**=ಹೇಳುತ್ತಾರೆ.

---

ಅಗ್ನಿಯ ಜ್ವಾಲೆಗಳು ಸ್ವರ್ಗವನ್ನು ಹೊಂದಲು ಮೇಲೆ ಆಕಾಶದಲ್ಲಿ ಪ್ರಸರಿಸುತ್ತವೆ. ಆ ಅಗ್ನಿಯನ್ನು ಸುಪ್ರೀತಗೊಳಿಸಲು ಈ ಇಷ್ಟಕೆಯನ್ನು ಉಪಧಾನ ಮಾಡುತ್ತೇನೆ.

ಅಗ್ನಿಯು ಎಲ್ಲವನ್ನೂ ತಿಳಿದವನು. ಯಜ್ಞಕ್ಕೆ ಯೋಗ್ಯನಾದವನು. ಶ್ರೇಷ್ಠನು. ಯಜಮಾನರ ಬಯಕೆಗಳನ್ನು ಈಡೇರಿಸುವವನು. ಭೂಮಿಯಲ್ಲಿ ಸ್ಥಿರವಾಗಿ ಇರುವವನು.

ಯಜ್ಞಸ್ಯ ಕೇತುಂ ಪ್ರಥಮಂ ಪುರೋಹಿತಮಗ್ನಿಂ ನರ

ಸ್ತ್ರಿಷಧಸ್ಥೇ ಸಮಿಂಧತೇ । ಇಂದ್ರೇಣ ದೇವೈಃ ಸರಥಗ್‌ಂ

ಸ ಬರ್‌ಹಿಷಿ ಸೀದನ್ನಿ ಹೋತಾ ಯಜಥಾಯ ಸುಕ್ರತುಃ ॥

---

ಯಜ್ಞಸ್ಯ । ಕೇತುಮ್ । ಪ್ರಥಮಮ್ । ಪುರೋಹಿತಮಿತಿ ಪುರಃ-ಹಿತಮ್ ।

ಅಗ್ನಿಮ್ । ನರಃ । ತ್ರಿಷಧಸ್ಥ ಇತಿ ತ್ರಿ-ಸಧಸ್ಥೇ । ಸಮಿತಿ । ಇಂಧತೇ ॥ ಇಂದ್ರೇಣ ।

ದೇವೈಃ । ಸರಥಮಿತಿ ಸ-ರಥಮ್ । ಸಃ । ಬರ್‌ಹಿಷಿ । ಸೀದತ್ । ನೀತಿ । ಹೋತಾ ।

ಯಜಥಾಯ । ಸುಕ್ರತುರಿತಿ ಸು-ಕ್ರತುಃ ॥

---

| ಮಂತ್ರ | ವಿನಿಯೋಗ |
|---|---|
| ಯಜ್ಞಸ್ಯ...ಸುಕ್ರತುಃ ॥ | ಜಗತೀಛಂದಸ್ಸಿನ ಮೂರನೆಯ ಇಷ್ಟಕೆಯ ಉಪಧಾನಕ್ಕಾಗಿ. |

---

🔔 ತ್ರಿಷಧಸ್ಥೇ=ಮೂರು ಸ್ಥಾನಗಳುಳ್ಳ ದೇವಯಜನದಲ್ಲಿ; ನರಃ=ಇರುವ ಋತ್ವಿಜರು; ಯಜ್ಞಸ್ಯ ಕೇತುಮ್=ಯಜ್ಞದ ವಿಷಯದಲ್ಲಿ ಎಲ್ಲವನ್ನೂ ತಿಳಿದಿರುವ; ಪ್ರಥಮಮ್=ಮೊದಲು ಉತ್ಪನ್ನನಾಗಿರುವ; ಪುರೋಹಿತಮ್=ಮುಂಭಾಗದಲ್ಲಿ ಇರುವ; ಅಗ್ನಿಮ್=ಅಗ್ನಿಯನ್ನು; ಸಮಿಂಧತೇ=ಚೆನ್ನಾಗಿ ಜ್ವಲಿಸುವಂತೆ ಮಾಡುತ್ತಾರೆ; ಸಃ=ಆ; ಸುಕ್ರತುಃ=ಚೆನ್ನಾಗಿ ಯಜ್ಞವನ್ನು ನಿರ್ವಹಿಸುವ ಅಗ್ನಿಯು; ಇಂದ್ರೇಣ =ಇಂದ್ರನೊಡನೆ ಕೂಡಿದ; ದೇವೈಃ=ದೇವತೆಗಳಿಂದಲೂ ಕೂಡಿರುವ [ಎಲ್ಲ ದೇವತೆಗಳನ್ನೂ] ಹೋತಾ=ಆಹ್ವಾನಿಸುವವನಾಗಿ; ಬರ್ಹಿಷಿ=ಯಜ್ಞದಲ್ಲಿ; ಸರಥಮ್=ರಥಸಹಿತನಾಗಿರುವಂತೆ; ಯಜಥಾಯ=ಯಾಗನಿಷ್ಪತ್ತಿಗಾಗಿ; ನಿ ಸೀದತ್=ಕುಳಿತಿರುತ್ತಾನೆ.

---

ಇಂತಹ ಅಗ್ನಿಗೆ ನಮಸ್ಕಾರಯುಕ್ತವಾದ ವಂದನಾಶೀಲವಾದ ಮಂತ್ರರೂಪವಾದ ಮಾತುಗಳನ್ನು ಹೇಳುತ್ತೇವೆ. ಆಕಾಶದಲ್ಲಿ ಪ್ರಕಾಶಿಸುವ ಸೂರ್ಯನನ್ನು ಸಂಧ್ಯಾವಂದನಾದಿಗಳಲ್ಲಿ ಬ್ರಾಹ್ಮಣರು ಹೇಳುವ ಮಂತ್ರರೂಪವಾದ ಸ್ತೋತ್ರಗಳು ಹೊಂದುವಂತೆ

**ತ್ವಾಂ ಚಿತ್ರಶ್ರವಸ್ತಮ ಹವಂತೇ ವಿಕ್ಷು ಜಂತವಃ ।**

**ಶೋಚಿಷ್ಕೇಶಂ ಪುರುಪ್ರಿಯಾಗ್ನೇ ಹವ್ಯಾಯ ವೋಢವೇ ॥**

---

ತ್ವಾಮ್ । ಚಿತ್ರಶ್ರವಸ್ತಮೇತಿ ಚಿತ್ರಶ್ರವಃ-ತಮ । ಹವಂತೇ । ವಿಕ್ಷು । ಜಂತವಃ ॥

ಶೋಚಿಷ್ಕೇಶಮಿತಿ ಶೋಚಿಃ-ಕೇಶಮ್ । ಪುರುಪ್ರಿಯೇತಿ ಪುರು-ಪ್ರಿಯ । ಅಗ್ನೇ ।

ಹವ್ಯಾಯ । ವೋಢವೇ ॥

---

| ಮಂತ್ರ | ವಿನಿಯೋಗ |
|---|---|
| ತ್ವಾಂ...ವೋಢವೇ ॥ | ಅನುಷ್ಟುಪ್ ಛಂದಸ್ಸಿನ ಮೂರು ಇಷ್ಟಕೆಗಳಲ್ಲಿ ಮೊದಲನೆಯ ಇಷ್ಟಕೋಪಧಾನಕ್ಕಾಗಿ. |

---

ಚಿತ್ರಶ್ರವಸ್ತಮ=ವಿಚಿತ್ರವಾದ ಅತಿಶಯವಾದ ಕೀರ್ತಿಯುಳ್ಳವನೇ! ಪುರುಪ್ರಿಯ= ಯಜಮಾನರಿಗೆ ಪ್ರಿಯನಾದವನೇ! ಅಗ್ನೇ=ಅಗ್ನಿದೇವನೇ! ವಿಕ್ಷು=ಪ್ರಜೆಗಳಲ್ಲಿ; ಜಂತವಃ=[ಇವ]=ಪ್ರಾಣಿಗಳಂತೆ; ಶೋಚಿಷ್ಕೇಶಮ್=ಜ್ವಾಲೆಗಳೇ ಕೂದಲಿನಂತಿರುವ; ತ್ವಾಮ್=ನಿನ್ನನ್ನು; ಹವ್ಯಾಯ ವೋಢವೇ=ದೇವತೆಗಳಿಗಾಗಿ ಹವ್ಯಗಳನ್ನು ಒಯ್ಯುವುದಕ್ಕೆ; ಹವಂತೇ=ಆಹ್ವಾನಿಸುತ್ತಾರೆ.

---

ನಮ್ಮ ಸ್ತುತಿವಾಕ್ಯಗಳು ಅಗ್ನಿಯನ್ನು ಹೊಂದಲಿ. ಇಂತಹ ಅಗ್ನಿಯ ಅನುಗ್ರಹಕ್ಕಾಗಿ ಇಷ್ಟಕೆಯನ್ನು ಉಪಧಾನ ಮಾಡುತ್ತೇನೆ.

ಈ ಮಂತ್ರದಲ್ಲಿ ಅಗ್ನಿಯನ್ನು ಜನರಕ್ಷಕನೆಂದೂ, ಕುಶಲನೆಂದೂ ಯಜ್ಞಕ್ಕಾಗಿ ಜನಿಸಿದವನೆಂದೂ, ಶುದ್ಧನೆಂದೂ, ಯಜಮಾನರಿಗಾಗಿ ಜ್ವಾಲೆಗಳಿಂದ ಶೋಭಿಸುವವನೆಂದೂ ಬಗೆಬಗೆಯಾಗಿ ಸ್ತುತಿಸಲಾಗಿದೆ. ಇಂತಹ ಅಗ್ನಿಯ ಅನುಗ್ರಹಕ್ಕಾಗಿ ಈ ಇಷ್ಟಕೋಪಧಾನ ಮಾಡುತ್ತೇನೆ.

ಅಗ್ನಿಯು ಅರಣಿಗಳಲ್ಲಿ ಕಾಣುವುದಿಲ್ಲ. ಅರಣ್ಯದಲ್ಲಿ ಕಾಡುಗಿಚ್ಚಿನ ರೂಪದಲ್ಲಿ ಗುಪ್ತವಾಗಿ ಇರುವುದೂ ತಿಳಿಯುವುದಿಲ್ಲ. ಇಂತಹ ಅಗ್ನಿಯನ್ನು ಅಂಗಿರಸರು ಹುಡುಕಿ

**ಸಖಾಯಃ ಸಂ ವಃ ಸಮ್ಯಂಚಮಿಷಗ್ಂ[..ಮಿಷಮ್(೧೨)]**

**ಸ್ತೋಮಂ ಚಾಗ್ನಯೇ। ವರ್ಷಿಷ್ಠಾಯ ಕ್ಷಿತೀನಾಮೂರ್ಜೋ**

**ನಪ್ತ್ರೇ ಸಹಸ್ವತೇ ॥**

---

**ಸಖಾಯಃ । ಸಮಿತಿ । ವಃ । ಸಮ್ಯಂಚಮ್ । ಇಷಮ್ ।(೧೨)। ಸ್ತೋಮಮ್ । ಚ । ಅಗ್ನಯೇ ॥ ವರ್ಷಿಷ್ಠಾಯ । ಕ್ಷಿತೀನಾಮ್ । ಊರ್ಜಃ । ನಪ್ತ್ರೇ । ಸಹಸ್ವತೇ ॥**

---

| ಮಂತ್ರ | ವಿನಿಯೋಗ |
|---|---|
| **ಸಖಾಯ...ಸಹಸ್ವತೇ ॥** | ಎರಡನೆಯ ಅನುಷ್ಟುಬಿಷ್ಟಕೋಪಧಾನಕ್ಕಾಗಿ. |

---

**ಸಖಾಯಃ**=ಪರಸ್ಪರಮಿತ್ರರಾದ ಋತ್ವಿಗ್ಯಜಮಾನರೇ! **ವಃ**=ನಿಮಗೆ; **ಸಮ್ಯಂಚಮ್**=[ಅಗ್ನಿದೇವನು] ಒಳ್ಳೆಯ; **ಇಷಮ್**=ಅನ್ನವನ್ನು; **ಸಮ್** [ಪಾದಯತು]=ಸಂಪಾದಿಸಿ ಕೊಡಲಿ. [ನೀವು] **ಅಗ್ನಯೇ**=ಅಗ್ನಿದೇವನಿಗೆ; **ಸ್ತೋಮಮ್ ಚ**=ಸ್ತೋತ್ರವನ್ನು [ಸಂಪಾದಿಸಿರಿ–ಅಗ್ನಿಯನ್ನು ಸ್ತುತಿಸಿರಿ] **ಕ್ಷಿತೀನಾಮ್**=ರಕ್ಷಕರಲ್ಲಿ/ಆಶ್ರಯದಾತರಲ್ಲಿ; **ವರ್ಷಿಷ್ಠಾಯ**=ಶ್ರೇಷ್ಠನಾದ; **ಊರ್ಜಃ ನಪ್ತ್ರೇ**=ಬಲವನ್ನು ನಾಶ ಮಾಡದಿರುವ; **ಸಹಸ್ವತೇ**=ತಾನೂ ಬಲಿಷ್ಠನಾಗಿರುವ; [ಅಗ್ನಿಗೆ ಸ್ತುತಿಯನ್ನು ಸಮರ್ಪಿಸಿರಿ].

---

ಪಡೆದರು. ಅಂತಹ ಅಗ್ನಿಯು ಅರಣಿಗಳಲ್ಲಿ ಬಲವಾಗಿ ಕಡೆಯುವುದರಿಂದ ಹುಟ್ಟುತ್ತಾನೆ. ಆದುದರಿಂದ ಅಗ್ನಿಯನ್ನು ಬಲದ ಪುತ್ರನೆಂದು ಹೇಳುತ್ತಾರೆ. ಅಂತಹ ನಿನ್ನ ಅನುಗ್ರಹಕ್ಕಾಗಿ ಈ ಇಷ್ಟಕೆಯನ್ನು ಉಪಧಾನ ಮಾಡುತ್ತೇನೆ.

ಯಾಗಶಾಲೆಯ ಮೂರು ಸ್ಥಾನಗಳಲ್ಲಿ ಕುಳಿತಿರುವ ಋತ್ವಿಜರು ಯಜ್ಞವನ್ನು ತಿಳಿದಿರುವ, ಮೊದಲು ಉತ್ಪನ್ನನಾಗಿರುವ, ಮುಂಭಾಗದಲ್ಲಿರುವ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತಾರೆ. ಯಾಗನಿಷ್ಪಾದಕನಾದ ಅಗ್ನಿಯು ದೇವತೆಗಳೊಡನೆ ಇಂದ್ರನನ್ನು ಯಾಗನಿರ್ವಹಣೆಗಾಗಿ ಆಹ್ವಾನಿಸಿ, ರಥಸಹಿತನಾಗಿ ಯಾಗಶಾಲೆಯಲ್ಲಿ ಕುಳಿತಿರುತ್ತಾನೆ.

ಸಗ್ಂಸಮಿದ್ಯುವಸೇ ವೃಷನ್ನಗ್ನೇ ವಿಶ್ವಾನ್ಯರ್ಯ ಆ ।
ಇಡಸ್ಪದೇ ಸಮಿಧ್ಯಸೇ ಸ ನೋ ವಸೂನ್ಯಾ ಭರ ॥

---

ಸಗ್ಂಸಮಿತಿ ಸಮ್-ಸಮ್ । ಇತ್ । ಯುವಸೇ । ವೃಷನ್ನ್ । ಅಗ್ನೇ । ವಿಶ್ವಾನಿ ।
ಅರ್ಯಃ । ಆ ॥ ಇಡಃ । ಪದೇ । ಸಮಿತಿ । ಇಧ್ಯಸೇ । ಸಃ । ನಃ । ವಸೂನಿ । ಏತಿ । ಭರ ॥

---

| ಮಂತ್ರ | ವಿನಿಯೋಗ |
|---|---|
| **ಸಗ್ಂ ಸಮಿತ್...ಆ ಭರ ॥** | ಮೂರನೆಯ ಅನುಷ್ಟುಬಿಷ್ಟಕೋಪಧಾನಕ್ಕಾಗಿ. |

---

🔔 **ವೃಷನ್**=ಕಾಮನೆಗಳನ್ನು ಸುರಿಸುವ; **ಅಗ್ನೇ**=ಹೇ! ಅಗ್ನಿಯೇ! **ವಿಶ್ವಾನಿ**=ಸಮಸ್ತ ಫಲಗಳನ್ನೂ; **ಸಮ್ ಸಮ್ ಇತ್**=ಮತ್ತೆ ಮತ್ತೆ ತಂದುಕೊಟ್ಟೇ; **ಯುವಸೇ**=ಯಜಮಾನನು ಹೊಂದುವಂತೆ ಮಾಡುತ್ತೀಯೆ. **ಅರ್ಯಃ**=ಪ್ರಭುವಾದ ನೀನು; **ಆ**[ಗತ್ಯ]=ಬಂದು; **ಇಡಃ ಪದೇ**=ಪೃಥಿವಿಯಂತಿರುವ ವೇದಿಯಲ್ಲಿ; **ಸಮಿಧ್ಯಸೇ**=ಪ್ರಜ್ವಲಿತನಾಗುತ್ತೀಯೆ; **ಸಃ**=ಅಂತಹ ನೀನು; **ನಃ**=ನಮಗೆ; **ವಸೂನಿ**=ವಿವಿಧವಾದ ಧನಗಳನ್ನು; **ಆ ಭರ**=ತಂದು ಕೊಡು.

---

ಅಗ್ನಿಯ ಕೀರ್ತಿಯು ಅತಿವಿಚಿತ್ರವಾಗಿದೆ. ಪ್ರಜೆಗಳಲ್ಲಿ ಪ್ರಾಣಿಗಳೂ ತಮ್ಮ ಕಾರ್ಯಕ್ಕಾಗಿ ಅಗ್ನಿಯನ್ನು ಕರೆಯುತ್ತವೆ. ಆತನು ಯಜಮಾನಪ್ರಿಯನು. ಜ್ವಾಲೆಗಳೇ ಆತನ ಕೇಶಗಳು. ಇಂತಹ ಅಗ್ನಿಯನ್ನು-ದೇವತೆಗಳಿಗೆ ಹವ್ಯವನ್ನು ಒಯ್ಯುವುದಕ್ಕಾಗಿ ಯಜಮಾನರು-ಆಹ್ವಾನಿಸುತ್ತಾರೆ. ಆ ಅಗ್ನಿಯು ಪ್ರಸನ್ನನಾಗಿ ಅನುಗ್ರಹಿಸಲಿ.

ಅಗ್ನಿಯು ರಕ್ಷಕರಲ್ಲಿ ಶ್ರೇಷ್ಠನು. ಬಲವನ್ನು ನಾಶಪಡಿಸದವನು. ತಾನೂ ಬಲಿಷ್ಠನು. ಅಂತಹ ಅಗ್ನಿದೇವನು ಋತ್ವಿಗ್ಯಜಮಾನರಿಗೆ ಒಳ್ಳೆಯ ಅನ್ನವನ್ನು ಕೊಡಲಿ. ಯಜಮಾನನೂ ಋತ್ವಿಜರೂ ಅಗ್ನಿಯನ್ನು ಸ್ತುತಿಸಲಿ.

ಅಗ್ನಿಯು ಪ್ರಭುವು. ಕಾಮನೆಗಳನ್ನು ಪೂರ್ಣಗೊಳಿಸುವವನು. ಅವನು ವೇದಿಯಲ್ಲಿ ಪ್ರಜ್ವಾಲಿತನಾಗಿ ಹವಿಸ್ಸುಗಳನ್ನು ಸ್ವೀಕರಿಸಿ, ಬಗೆ ಬಗೆಯ ಧನಗಳನ್ನು ಕೊಡಲಿ.

ಅಗ್ನಿಯು ಅನ್ನವು ನಶಿಸದಂತೆ ಮಾಡುವವನು. ಅವನು ರೋಗಾಲಸ್ಯರಹಿತನು. ಅವನು ಪ್ರಾಜ್ಞನು. ವಿಶ್ವದಲ್ಲಿನ ದಾಹ-ಪಾಕಗಳಿಗೆ ಕಾರಣನು. ಅಂತಹವನನ್ನು ಯಾಗ

**ಏನಾ ವೋ ಅಗ್ನಿಂ ನಮಸೋರ್ಜೋ ನಪಾತಮಾ ಹುವೇ । ಪ್ರಿಯಂ ಚೇತಿಷ್ಠಮರತಿಗ್ಂ ಸ್ವಧ್ವರಂ ವಿಶ್ವಸ್ಯ ದೂತ ಮಮೃತಮ್ ॥ ಸ ಯೋಜತೇ ಅರುಷೋ ವಿಶ್ವಭೋಜಸಾ**

---

ಏನಾ । ವಃ । ಅಗ್ನಿಮ್ । ನಮಸಾ । ಊರ್ಜಃ । ನಪಾತಮ್ । ಏತಿ । ಹುವೇ ॥ ಪ್ರಿಯಮ್ । ಚೇತಿಷ್ಠಮ್ । ಅರತಿಮ್ । ಸ್ವಧ್ವರಮಿತಿ ಸು-ಅಧ್ವರಮ್ । ವಿಶ್ವಸ್ಯ । ದೂತಮ್ । ಅಮೃತಮ್ ॥ ಸಃ । ಯೋಜತೇ । ಅರುಷಃ । ವಿಶ್ವಭೋಜಸೇತಿ ವಿಶ್ವ-ಭೋಜಸಾ ।

---

| ಮಂತ್ರ | ವಿನಿಯೋಗ |
|---|---|
| **ಏನಾ ವೋ...ಅಮೃತಮ್ ॥** | ಬೃಹತೀಛಂದಸ್ಸಿನ ಮೂರು ಇಷ್ಟಕೆಗಳಲ್ಲಿ ಮೊದಲನೆಯ ಇಷ್ಟಕೆಯ ಉಪಧಾನಕ್ಕಾಗಿ. |
| **ಸ ಯೋಜತೇ...ಜನಾನಾಮ್ ॥** | ಎರಡನೆಯ ಬೃಹತೀಷ್ಟಕೋಪಧಾನಕ್ಕಾಗಿ. |

---

▲ [ಹೇ! ಋತ್ವಿಗ್ಯಜಮಾನರೇ] **ವಃ**=ನಿಮಗೆ ಸಂಬಂಧಿಸಿದವನಾದ; **ಊರ್ಜಃ ನಪಾತಮ್**=ಅನ್ನವು ನಶಿಸದಂತೆ ಮಾಡುವ; **ಅರತಿಮ್**=ರೋಗ/ಆಲಸ್ಯರಹಿತ ನಾದ; **ಪ್ರಿಯಮ್**=ಯಜಮಾನರಿಗೆ ಪ್ರಿಯನಾದ; **ಚೇತಿಷ್ಠಮ್**=ಚೆನ್ನಾಗಿ ತಿಳಿದಿರುವ; **ಸ್ವಧ್ವರಮ್**=ಚೆನ್ನಾಗಿ ಯಜ್ಞವನ್ನು ನಿರ್ವಹಿಸುವ; **ವಿಶ್ವಸ್ಯ**=ವಿಶ್ವಕ್ಕೆ; **ದೂತಮ್**=[ದಾಹ-ಪಾಕಾದಿಸಾಧಕನಾಗಿ] ದೂತನಂತೆ ಇರುವ; **ಅಮೃತಮ್**=ಮರಣವಿಲ್ಲದ; **ಅಗ್ನಿಮ್**=ಅಗ್ನಿದೇವನನ್ನು; **ಏನಾ ನಮಸಾ**=ಈ ನಮಸ್ಕಾರದಿಂದ [ಪೂಜಿಸುತ್ತಾ]; **ಆ ಹುವೇ**=ಯಜ್ಞನಿರ್ವಹಣೆಗೆ ಆಹ್ವಾನಿಸುತ್ತೇನೆ. ▲ **ಅರುಷಃ**=ರೋಷರಹಿತ ನಾದ/ಯಜಮಾನನಲ್ಲಿ ಪ್ರೀತಿಯುಳ್ಳ; **ವಿಶ್ವಭೋಜಸಾ**=ಎಲ್ಲವೂ ಆಹಾರವಾಗಿ ಉಳ್ಳ/ಸರ್ವಭಕ್ಷಕನಾದ; **ಸಃ**=ಆ ಅಗ್ನಿಯು; **ಯೋಜತೇ**=[ಪ್ರಸ್ತುತ ಕರ್ಮದಲ್ಲಿ ಯಜಮಾನನು] ಪ್ರವೃತ್ತನಾಗುವಂತೆ ಮಾಡುತ್ತಾನೆ.

ಸ ದುದ್ರವತ್ಸ್ವಾಹುತಃ । ಸುಬ್ರಹ್ಮಾ ಯಜ್ಞಃ ಸುಶಮೀ

[ಸುಶಮೀ (೧೩)] ವಸೂನಾಂ ದೇವಗ್ಂ ರಾಧೋ

ಜನಾನಾಮ್ ॥ ಉದಸ್ಯ ಶೋಚಿರಸ್ಥಾದಾಜುಹ್ವಾನಸ್ಯ

ಮೀಢುಷಃ ।

---

ಸಃ । ದುದ್ರವತ್ । ಸ್ವಾಹುತ ಇತಿ ಸು-ಆಹುತಃ ॥ ಸುಬ್ರಹ್ಮೇತಿ ಸು-ಬ್ರಹ್ಮಾ । ಯಜ್ಞಃ । ಸುಶಮೀತಿ ಸು-ಶಮೀ ।(೧೩)। ವಸೂನಾಮ್ । ದೇವಮ್ । ರಾಧಃ । ಜನಾನಾಮ್ ॥ ಉದಿತಿ । ಅಸ್ಯ । ಶೋಚಿಃ । ಅಸ್ಥಾತ್ । ಆಜುಹ್ವಾನಸ್ಯೇತ್ಯಾ-ಜುಹ್ವಾನಸ್ಯ । ಮೀಢುಷಃ ॥

---

| ಮಂತ್ರ | ವಿನಿಯೋಗ |
|---|---|
| ಉದಸ್ಯ...ನರಃ ॥ | ಮೂರನೆಯ ಬೃಹತೀಷ್ಟಕೋಪಧಾನಕ್ಕಾಗಿ. |

---

ಸಃ=ಅಂತಹ; ಸ್ವಾಹುತಃ=ಯಾಗನಿರ್ವಹಣೆಗಾಗಿ ಚೆನ್ನಾಗಿ ಆಹ್ವಾನಿಸಲ್ಪಟ್ಟ; ಸುಬ್ರಹ್ಮಾ=ಒಳ್ಳೆಯ ಋತ್ವಿಜರಿಂದ ಪೂಜಿಸಲ್ಪಡುವ/ಒಳ್ಳೆಯ ಮಂತ್ರಗಳುಳ್ಳ; ಯಜ್ಞಃ =ಯಜ್ಞಗಳಿಂದ ಆರಾಧಿಸಲ್ಪಡುವ; ಸುಶಮೀ=ಚೆನ್ನಾಗಿ ಪಾಪಗಳನ್ನು ಹೋಗಲಾಡಿಸುವ [ಅಗ್ನಿದೇವನು] ವಸೂನಾಮ್=ನಿವಾಸಾರ್ಥಿಗಳಾದ; ಜನಾನಾಮ್=ಜನರ/ಪ್ರಾಣಿಗಳ; ದೇವಮ್=ವ್ಯವಹಾರಕ್ಕೆ ಕಾರಣವಾದ; ರಾಧಃ=ಅನ್ನವನ್ನು; ದುದ್ರವತ್ =ಸಂಪಾದಿಸಿಕೊಡಲಿ. ▲ ಆಜುಹ್ವಾನಸ್ಯ=ಎಲ್ಲಡೆ ಹೋಮನಿಷ್ಪಾದಕನಾದ; ಮೀಢುಷಃ=ಮೇಘದ ಮೂಲಕ ವೃಷ್ಟಿಯನ್ನು ಸುರಿಸುವ; ಅಸ್ಯ=ಈ ಅಗ್ನಿಯ; ಶೋಚಿಃ=ಜ್ವಾಲೆಯು; ಉತ್ ಅಸ್ಥಾತ್=ಮೇಲೆ ವ್ಯಾಪಿಸಿತು/ವ್ಯಾಪಿಸಲಿ;

---

ನಿರ್ವಹಣೆಗಾಗಿ ಆಹ್ವಾನಿಸುತ್ತೇನೆ. ಅವನು ಸುಪ್ರೀತನಾಗಲಿ.

ಅಗ್ನಿದೇವನು ಯಜಮಾನರಲ್ಲಿ ಪ್ರೀತಿಯುಳ್ಳವನು. ಆತನು ಸರ್ವಭಕ್ಷಕನು. ಅವನು ಯಜ್ಞ ಪ್ರವರ್ತಕನಾಗಲಿ. ಯಜ್ಞದ ನಿರ್ವಾಹಕ್ಕಾಗಿ ಋತ್ವಿಜರು ಅಗ್ನಿಯನ್ನು ಆಹ್ವಾನಿಸುತ್ತಾರೆ.

ಉದ್ಧೂಮಾಸೋ ಅರುಷಾಸೋ ದಿವಿಸ್ಪೃಶಸ್ಸಮಗ್ನಿಮಿಂಧತೇ ನರಃ ॥ ಅಗ್ನೇ ವಾಜಸ್ಯ ಗೋಮತ ಈಶಾನಸ್ಸಹಸೋ ಯಹೋ । ಅಸ್ಮೇ ಧೇಹಿ ಜಾತವೇದೋ ಮಹಿ ಶ್ರವಃ ॥

---

ಉದಿತಿ । ಧೂಮಾಸಃ । ಅರುಷಾಸಃ । ದಿವಿಸ್ಪೃಶ ಇತಿ ದಿವಿ–ಸ್ಪೃಶಃ । ಸಮಿತಿ । ಅಗ್ನಿಮ್ । ಇಂಧತೇ । ನರಃ ॥ ಅಗ್ನೇ । ವಾಜಸ್ಯ । ಗೋಮತ ಇತಿ ಗೋ–ಮತಃ । ಈಶಾನಃ । ಸಹಸಃ । ಯಹೋ ಇತಿ ॥ ಅಸ್ಮೇ ಇತಿ । ಧೇಹಿ । ಜಾತವೇದ ಇತಿ ಜಾತ–ವೇದಃ । ಮಹಿ । ಶ್ರವಃ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇ ವಾಜಸ್ಯ...ಶ್ರವಃ ॥ | ಉಷ್ಣಿಕ್ ಛಂದಸ್ಸಿನ ಇಷ್ಟಕೋಪಧಾನದ ಮೊದಲನೆಯ ಇಷ್ಟಕೆಗಾಗಿ. |

---

**ಉತ್ ಧೂಮಾಸಃ**=ಮೇಲೆ [ಅಂತರಿಕ್ಷದಲ್ಲಿ ವ್ಯಾಪಿಸಿರುವ] ಹೊಗೆಗಳು; **ದಿವಿ ಸ್ಪೃಶಃ**=ಸ್ವರ್ಗವನ್ನು ಮುಟ್ಟುವಂತೆ ಇವೆ. **ಅರುಷಾಸಃ**=[ಅವು] ಹಿಂಸೆಯನ್ನುಂಟು ಮಾಡುವುದಿಲ್ಲ. [ಆ ರೀತಿ]; **ನರಃ**=ಋತ್ವಿಗ್ಯಜಮಾನರು; **ಅಗ್ನಿಮ್ ಸಮ್ ಇಂಧತೇ** =ಅಗ್ನಿಯನ್ನು ಚೆನ್ನಾಗಿ ಜ್ವಲಿಸುವಂತೆ ಮಾಡುತ್ತಾರೆ. ▲ **ಸಹಸಃ ಯಹೋ**=ಬಲದ ಪುತ್ರನಾದ; **ಜಾತವೇದಃ**=ಹುಟ್ಟಿದುದೆಲ್ಲವನ್ನೂ ತಿಳಿದಿರುವ; **ಅಗ್ನೇ**=ಅಗ್ನಿ ದೇವನೇ! [ನೀನು] **ವಾಜಸ್ಯ ಗೋಮತಃ**=ಹಸುಗಳಿಂದ ಯುಕ್ತವಾದ ಅನ್ನಕ್ಕೆ; **ಈಶಾನಃ** =ಒಡೆಯನಾಗಿರುವೆ. **ಅಸ್ಮೇ**=ಈ ಯಜಮಾನನಿಗೆ; **ಮಹಿ**=ಅತಿಶಯವಾದ; **ಶ್ರವಃ**= ಕೀರ್ತಿಯನ್ನು; **ಧೇಹಿ**=ಕೊಡು/ಉಂಟುಮಾಡು.

---

ಒಳ್ಳೆಯ ಋತ್ವಿಜರು ಯಜ್ಞವನ್ನು ನೆರವೇರಿಸುತ್ತಾರೆ. ಮಂತ್ರಗಳಿಂದ ಅಗ್ನಿಯನ್ನು ಸ್ತುತಿಸುತ್ತಾರೆ. ಆತನು ಪಾಪಗಳನ್ನು ಚೆನ್ನಾಗಿ ಪರಿಹರಿಸುತ್ತಾನೆ. ನಿವಾಸಾರ್ಥಿಗಳಾದ

**ಸ ಇ॒ಧಾನೋ ವಸು॑ಷ್ಕವಿರ॒ಗ್ನಿರೀ॒ಡೇನ್ಯೋ॑ ಗಿ॒ರಾ। ರೇ॒ವದ॒ಸ್ಮಭ್ಯಂ ಪುರ್ವಣೀಕ ದೀದಿಹಿ ॥ ಕ್ಷ॒ಪೋ ರಾ॑ಜನ್ನು॒ತ ತ್ಮನಾಽಗ್ನೇ॒ ವಸ್ತೋ॑ರು॒ತೋಷಸಃ ।**

---

ಸಃ । ಇ॒ಧಾನಃ । ವ॒ಸುಃ । ಕ॒ವಿಃ । ಅ॒ಗ್ನಿಃ । ಈ॒ಡೇನ್ಯಃ । ಗಿ॒ರಾ ॥ ರೇ॒ವತ್ । ಅ॒ಸ್ಮಭ್ಯ॒ಮಿತ್ಯ॒ಸ್ಮ-ಭ್ಯಮ್ । ಪು॒ರ್ವ॒ಣೀ॒ಕೇತಿ॑ ಪುರು-ಅ॒ನೀ॒ಕ । ದೀ॒ದಿ॒ಹಿ ॥ ಕ್ಷ॒ಪಃ । ರಾ॒ಜ॒ನ್ । ಉ॒ತ । ತ್ಮನಾ । ಅಗ್ನೇ । ವಸ್ತೋಃ । ಉ॒ತ । ಉ॒ಷಸಃ ॥

---

| ಮಂತ್ರ | ವಿನಿಯೋಗ |
|---|---|
| ಸ ಇ॒ಧಾನೋ...ದೀದಿಹಿ ॥ | ಉಷ್ಣಿಗಿಷ್ಟಕೋಪಧಾನದ ಎರಡನೆಯ ಇಷ್ಟಕೆಗಾಗಿ. |
| ಕ್ಷ॒ಪೋ...ಪ್ರತಿ ॥ | ಮೂರನೆಯ ಉಷ್ಣಿಗಿಷ್ಟಕೋಪಧಾನಕ್ಕಾಗಿ. |

---

▲ **ಪುರ್ವಣೀಕ**=ಮಹಾಸೈನ್ಯವುಳ್ಳ ಅಗ್ನಿಯೇ! **ಸಃ**=ಆ ಪ್ರಸಿದ್ಧನಾದ; **ಇಧಾನಃ**= ಜ್ವಲಿಸುವವನಾದ; **ವಸುಃ**=ವಾಸಹೇತುವಾದ; **ಕವಿಃ**=ವಿದ್ವಾಂಸನಾದ; **ಅಗ್ನಿಃ**= ಅಗ್ರಣಿಯು/ಪ್ರಥಮಪ್ರವರ್ತಕನಾಗಿ [ನೀನಿರುವೆ] [ನೀನು]; **ಗಿರಾ**=ಮಂತ್ರರೂಪ ವಾಕ್ಯದಿಂದ; **ಈಡೇನ್ಯಃ**=ಸ್ತುತಿಸಲ್ಪಡಬೇಕಾದವನು; **ಅಸ್ಮಭ್ಯಮ್**=ನಮಗೆ; **ರೇವತ್** =ಧನಯುಕ್ತವಾದ ಗೃಹಕ್ಷೇತ್ರಾದಿಗಳನ್ನು; **ದೀದಿಹಿ**=ಕೊಡು. ▲ **ರಾಜನ್**=ಪ್ರಕಾಶ ಮಾನನಾದ/ರಾಜನಾಗಿರುವ; **ಅಗ್ನೇ**=ಅಗ್ನಿದೇವನೇ! **ವಸ್ತೋಃ**=ಹಗಲುಗಳ ಲ್ಲಿಯೂ; **ಉತ**=ಮತ್ತು; **ಉಷಸಃ**=ಉಷಃಕಾಲಗಳಲ್ಲಿಯೂ; **ಕ್ಷಪಃ**=[ರಾಕ್ಷಸ ರನ್ನು] ನಾಶಪಡಿಸು. **ಉತ ತ್ಮನಾ**=[ಕೇವಲ ಸೇನೆಯಿಂದ ಮಾತ್ರವಲ್ಲ] ಸ್ವಯ ಮಾಗಿಯೂ; ಕ್ಷಪಃ=ರಾಕ್ಷಸರನ್ನು [ನಾಶಪಡಿಸು].

---

ಜನರು/ಪ್ರಾಣಿಗಳು ವ್ಯವಹಾರಕಾರಣವಾಗಿ ಅನ್ನವನ್ನು ಬಯಸುತ್ತಾರೆ. ಅಗ್ನಿದೇವನು ಅನ್ನವನ್ನು ನೀಡಲಿ.

ಅಗ್ನಿಯು ಹೋಮನಿಷ್ಪಾದಕನು. ಹೋಮಗಳು ಅಂತರಿಕ್ಷದಲ್ಲಿ ವ್ಯಾಪಿಸುವ ಹೊಗೆಯನ್ನು

ಸ ತಿಗ್ಮಜಂಭ [(೧೪)] ರಕ್ಷಸೋ ದಹ ಪ್ರತಿ ॥ ಆ ತೇ ಅಗ್ನ ಇಧೀಮಹಿ ದ್ಯುಮಂತಂ ದೇವಾಜರಮ್ । ಯದ್ಧ ಸ್ಯಾ ತೇ ಪನೀಯಸೀ ಸಮಿದ್ದೀದಯತಿ ದ್ಯವೀಷಗ್ಂ ಸ್ತೋತೃಭ್ಯ ಆ ಭರ ॥

ಸಃ । ತಿಗ್ಮಜಂಭೇತಿ ತಿಗ್ಮ-ಜಂಭ ।(೧೪)। ರಕ್ಷಸಃ । ದಹ । ಪ್ರತಿ ॥ ಏತಿ । ತೇ । ಅಗ್ನೇ । ಇಧೀಮಹಿ । ದ್ಯುಮಂತಮಿತಿ ದ್ಯು-ಮಂತಮ್ । ದೇವ । ಅಜರಮ್ ॥ ಯತ್ । ಹ । ಸ್ಯಾ । ತೇ । ಪನೀಯಸೀ । ಸಮಿದಿತಿ ಸಮ್-ಇತ್ । ದೀದಯತಿ । ದ್ಯವಿ । ಇಷಮ್ । ಸ್ತೋತೃಭ್ಯ ಇತಿ ಸ್ತೋತೃ-ಭ್ಯಃ । ಏತಿ । ಭರ ॥

| ಮಂತ್ರ | ವಿನಿಯೋಗ |
|---|---|
| ಆ ತೇ...ಆ ಭರ ॥ | ಪಂಕ್ತಿಛಂದಸ್ಸಿನ ಮೂರು ಇಷ್ಟಕೆಗಳಲ್ಲಿ ಪ್ರಥಮೇಷ್ಟಕೋಪಧಾನಕ್ಕಾಗಿ. |

ತಿಗ್ಮಜಂಭ=ತೀಕ್ಷ್ಣವಾದ ಜ್ವಾಲೆಯುಳ್ಳವನೇ! ಸಃ=ಅಂತಹ [ನೀನು]; ರಕ್ಷಸಃ= ರಾಕ್ಷಸರನ್ನು; ಪ್ರತಿ=ಒಬ್ಬೊಬ್ಬರನ್ನಾಗಿ; ದಹ=ಸುಟ್ಟುಹಾಕು; 🔔 ಅಗ್ನೇ= ಅಗ್ನಿಯೇ! ದೇವ=ದೇವನೇ! ಅಜರಮ್=ಮುಪ್ಪಿಲ್ಲದ; ದ್ಯುಮಂತಮ್=ಪ್ರಕಾಶಯುಕ್ತನಾದ; ತೇ=ನಿನ್ನನ್ನು; ಆ=ಸುತ್ತಲೂ; ಇಧೀಮಹಿ=ಜ್ವಲಿಸುವಂತೆ ಮಾಡುತ್ತೇವೆ. ಯತ್= ಯಾವ ಕಾರಣದಿಂದ; ಪನೀಯಸೀ=ಸ್ತುತ್ಯರ್ಹವಾದ; ಸ್ಯಾ=ಆ ಅಚೇತನವಾದ; ಸಮಿತ್ ಹ=ಸಮಿತ್ತೂ ಕೂಡ; ದ್ಯವಿ=ನಿತ್ಯವೂ; ತೇ=ನಿನ್ನನ್ನು; ದೀದಯತಿ=ಉರಿ ಯುವಂತೆ ಮಾಡುತ್ತದೆಯೋ [ಆಗ ಚೇತನರಾದ ನಾವು ಅಗ್ನಿಯನ್ನು ಜ್ವಲಿತವನ್ನಾಗಿ ಮಾಡುತ್ತೇವೆಂಬುದರಲ್ಲಿ ಆಶ್ಚರ್ಯವೇನಿದೆ?]ಸ್ತೋತೃಭ್ಯಃ=ಸ್ತುತಿಸುವ ಋತ್ವಿಜರೇ ಮುಂತಾದವರಿಗೆ; ಇಷಮ್=ಅನ್ನವನ್ನು; ಆ ಭರ=ಅನುಗ್ರಹಿಸು.

ಆ ತೇ ಅಗ್ನ ಋಚಾ ಹವಿಃ ಶುಕ್ರಸ್ಯ ಜ್ಯೋತಿಷಸ್ಪತೇ ।
ಸುಶ್ಚಂದ್ರ ದಸ್ಮ ವಿಶ್ಪತೇ ಹವ್ಯವಾಟ್ತುಭ್ಯಗ್ಂ ಹೂಯತ
ಇಷಗ್ಗ್ಂ ಸ್ತೋತೃಭ್ಯ ಆ ಭರ ॥

---

ಏತಿ । ತೇ । ಅಗ್ನೇ । ಋಚಾ । ಹವಿಃ । ಶುಕ್ರಸ್ಯ । ಜ್ಯೋತಿಷಃ । ಪತೇ ॥ ಸುಶ್ಚಂದ್ರೇತಿ ಸು-ಚಂದ್ರ । ದಸ್ಮ । ವಿಶ್ಪತೇ । ಹವ್ಯವಾಡಿತಿ ಹವ್ಯ-ವಾಟ್ । ತುಭ್ಯಮ್ । ಹೂಯತೇ । ಇಷಮ್ । ಸ್ತೋತೃಭ್ಯ ಇತಿ ಸ್ತೋತೃ-ಭ್ಯಃ । ಏತಿ । ಭರ ॥

---

| ಮಂತ್ರ | ವಿನಿಯೋಗ |
|---|---|
| ಆ ತೇ ಅಗ್ನ ಋಚಾ...ಭರ ॥ | ಎರಡನೆಯ ಪಂಕ್ತೀಷ್ಟಕೋಪಧಾನಕ್ಕಾಗಿ. |

---

ಶುಕ್ರಸ್ಯ=ಶುದ್ಧವಾದ; ಜ್ಯೋತಿಷಃ=ಪ್ರಕಾಶದ; ಪತೇ=ಪಾಲಕನಾದವನೇ! ಸುಶ್ಚಂದ್ರ=ಚೆನ್ನಾಗಿ ಆಹ್ಲಾದವನ್ನುಂಟುಮಾಡುವವನೇ!; ದಸ್ಮ=ಪಾಪಪರಿಹಾರಕನಾದವನೇ!; ವಿಶ್ಪತೇ=ಪ್ರಜಾಪಾಲಕನಾದವನೇ!; ಹವ್ಯವಾಟ್=ದೇವತೆಗಳಿಗೆ ಹವ್ಯವನ್ನು ಒಯ್ಯುವವನೇ!; ಅಗ್ನೇ=ಅಗ್ನಿದೇವನೇ! ತೇ=ನಿನಗೆ ಸಂಬಂಧಿಸಿದ; ಋಚಾ=ಮಂತ್ರಗಳಿಂದ; ತುಭ್ಯಮ್=ನಿನಗೆ; ಹವಿಃ=ಹವಿಸ್ಸು; ಆ ಹೂಯತೇ=ಸುತ್ತಲೂ ಹೋಮ ಮಾಡಲ್ಪಡುತ್ತದೆ. ಸ್ತೋತೃಭ್ಯಃ=ಸ್ತುತಿಸುವ ಋತ್ವಿಗ್ಯಜಮಾನರಿಗೆ; ಇಷಮ್=ಅನ್ನವನ್ನು; ಆ ಭರ=ಕೊಡು.

---

ಉಂಟು ಮಾಡಿ ಮೋಡಗಳಿಗೆ ಕಾರಣವಾಗಿ ಮಳೆಯನ್ನು ಸುರಿಸುತ್ತವೆ. ಹೊಗೆಯು ತೊಂದರೆಯನ್ನುಂಟುಮಾಡದಂತೆ ಋತ್ವಿಜರೂ, ಯಜಮಾನರೂ ಅಗ್ನಿಯು ಚೆನ್ನಾಗಿ ಜ್ವಲಿಸುವಂತೆ ಮಾಡುತ್ತಾರೆ.

ಬಲವಾದ ಮಂಥನದಿಂದ ಉತ್ಪನ್ನನಾದುದರಿಂದ ಬಲದ ಪುತ್ರನಾದ ಅಗ್ನಿಯು ಹಸುಗಳಿಗೂ ಅನ್ನಕ್ಕೂ ಒಡೆಯನು. ಅವನು ಅನ್ನದಾನದಿಂದ ಅತಿಶಯವಾದ ಕೀರ್ತಿ

ಉಭೇ ಸುಶ್ಚಂದ್ರ ಸರ್ಪಿಷೋ ದರ್ವೀ ಶ್ರೀಣೀಷ ಆಸನಿ ।

ಉತೋ ನ ಉತ್ಪುಪೂರ್ಯಾ [..ಪೂರ್ಯಾಃ(೧೫)]

ಉಕ್ಥೇಷು ಶವಸಸ್ಪತ ಇಷಗ್ಂ ಸ್ತೋತೃಭ್ಯ ಆ ಭರ ॥

ಉಭೇ ಇತಿ । ಸುಶ್ಚಂದ್ರೇತಿ ಸು-ಚಂದ್ರ । ಸರ್ಪಿಷಃ । ದರ್ವೀ ಇತಿ । ಶ್ರೀಣೀಷೇ । ಆಸನಿ ॥ ಉತೋ ಇತಿ । ನಃ । ಉದಿತಿ । ಪುಪೂರ್ಯಾಃ ।(೧೫)। ಉಕ್ಥೇಷು । ಶವಸಃ । ಪತೇ । ಇಷಮ್ । ಸ್ತೋತೃಭ್ಯ ಇತಿ ಸ್ತೋತೃ-ಭ್ಯಃ । ಏತಿ । ಭರ ॥

| ಮಂತ್ರ | ವಿನಿಯೋಗ |
|---|---|
| ಉಭೇ...ಆ ಭರ ॥ | ಮೂರನೆಯ ಪಂಕ್ತೀಷ್ಟಕೋಪಧಾನಕ್ಕಾಗಿ. |

▲ ಸುಶ್ಚಂದ್ರ=ಚೆನ್ನಾಗಿ ಆಹ್ಲಾದವನ್ನುಂಟುಮಾಡುವ ಅಗ್ನಿದೇವನೇ!; ಆಸನಿ=ನಿನ್ನ ಬಾಯಿಯಲ್ಲಿ; ಉಭೇ ದರ್ವೀ=ಎರಡು ದರ್ವಿಗಳಂತೆ [ಇರುವ ದವಡೆಗಳನ್ನು]; ಸರ್ಪಿಷಃ=ಘೃತದಿಂದ; ಶ್ರೀಣೀಷೇ=ತುಂಬುತ್ತೀಯೆ; ಉತೋ=ಮತ್ತು; ಶವಸಃ ಪತೇ=ಬಲದ ಅಧಿಪತಿಯೇ!; ಉಕ್ಥೇಷು=ಉಕ್ಥಶಸ್ತ್ರಯುಕ್ತವಾದ ಯಾಗಗಳಲ್ಲಿ; ನಃ=ನಮ್ಮನ್ನು; ಉತ್ ಪುಪೂರ್ಯಾಃ=ಪೂರ್ಣತೆಯಿಂದ/ಉತ್ಕರ್ಷದಿಂದ ತುಂಬು. ಸ್ತೋತೃಭ್ಯಃ=ಸ್ತುತಿಸುವ ಋತ್ವಿಗ್ಯಜಮಾನರಿಗೆ; ಇಷಮ್=ಅನ್ನವನ್ನು; ಆ ಭರ= ಕರುಣಿಸು.

ಯನ್ನು ಯಜಮಾನನಿಗೆ ಕೊಡಲಿ.

ಅಗ್ನಿಯು ಬಹುಸೇನಾಯುಕ್ತನು. ಪ್ರಜ್ವಲಿಸತಕ್ಕವನು. ಜನರ ನಿವಾಸಕ್ಕೆ ಕಾರಣನು. ವಿದ್ವಾಂಸನು. ಎಲ್ಲಕ್ಕಿಂತಲೂ ಮೊದಲು ಯಜ್ಞಗಳನ್ನು ನೆರವೇರಿಸತಕ್ಕವನು. ಮಂತ್ರಗಳಿಂದ ಸ್ತುತಿಸಲ್ಪಡತಕ್ಕವನು. ಅಂತಹ ಅಗ್ನಿಯು ಧನಯುಕ್ತವಾದ ಗೃಹಕ್ಷೇತ್ರಾದಿಗಳನ್ನು ನಮಗೆ ಅನುಗ್ರಹಿಸಲಿ.

ಅಗ್ನೇ ತಮದ್ಯಾಶ್ವಂ ನ ಸ್ತೋಮೈಃ ಕ್ರತುಂ ನ ಭದ್ರಗ್ಂ ಹೃದಿಸ್ಪೃಶಮ್ । ಋಧ್ಯಾಮಾ ತ ಓಹೈಃ ॥ ಅಧಾ ಹ್ಯಗ್ನೇ ಕ್ರತೋರ್ಭದ್ರಸ್ಯ ದಕ್ಷಸ್ಯ ಸಾಧೋಃ । ರಥೀರ್ ಋತಸ್ಯ ಬೃಹತೋ ಬಭೂಥ ॥

---

ಅಗ್ನೇ । ತಮ್ । ಅದ್ಯ । ಅಶ್ವಮ್ । ನ । ಸ್ತೋಮೈಃ । ಕ್ರತುಮ್ । ನ । ಭದ್ರಮ್ । ಹೃದಿಸ್ಪೃಶಮಿತಿ ಹೃದಿ-ಸ್ಪೃಶಮ್ ॥ ಋಧ್ಯಾಮ । ತೇ । ಓಹೈಃ ॥ ಅಧ । ಹಿ । ಅಗ್ನೇ । ಕ್ರತೋಃ । ಭದ್ರಸ್ಯ । ದಕ್ಷಸ್ಯ । ಸಾಧೋಃ ॥ ರಥೀಃ । ಋತಸ್ಯ । ಬೃಹತಃ । ಬಭೂಥ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇ...ಓಹೈಃ ॥ | ಅಕ್ಷರಪಂಕ್ತಿಛಂದಸ್ಸಿನ ನಾಲ್ಕು ಇಷ್ಟಕೆಗಳಲ್ಲಿ ಮೊದಲನೆಯ ಇಷ್ಟಕೋಪಧಾನಕ್ಕಾಗಿ. |
| ಅಧಾ...ಬಭೂಥ ॥ | ಎರಡನೆಯ ಅಕ್ಷರಪಂಕ್ತೀಷ್ಟಕೋಪಧಾನಕ್ಕಾಗಿ. |

---

▲ **ಅಗ್ನೇ**=ಅಗ್ನಿಯೇ! **ಭದ್ರಮ್**=ಮಂಗಲಕರನಾದ; **ಹೃದಿಸ್ಪೃಶಮ್**=ಮನಸ್ಸಿಗೆ ಪ್ರಿಯನಾದ; **ತಮ್**=ಆ [ನಿನ್ನನ್ನು] **ಅದ್ಯ**=ಈ ಕರ್ಮದಲ್ಲಿ; **ಓಹೈಃ**=ಸಮೂಹರೂಪವಾದ; **ತೇ ಸ್ತೋಮೈಃ**=ನಿನ್ನ ಸ್ತೋತ್ರಗಳಿಂದ; **ಅಶ್ವಮ್ ನ**=[ಹುಲ್ಲು ಮೊದಲಾದವುಗಳಿಂದ] ಕುದುರೆಯನ್ನು ಹೇಗೋ ಹಾಗೆ; **ಭದ್ರಮ್ ಕ್ರತುಮ್ ನ**=[ಸರ್ವಾಂಗಾನುಷ್ಠಾನದಿಂದ] ಮಂಗಲಕರವಾದ ಜ್ಯೋತಿಷ್ಟೋಮಕ್ರತುವನ್ನು ಹೇಗೋ ಹಾಗೆ; **ಋಧ್ಯಾಮ**=ಸಮೃದ್ಧಗೊಳಿಸುತ್ತೇವೆ. ▲ **ಅಗ್ನೇ**=ಹೇ! ಅಗ್ನಿದೇವನೇ! **ಅಧ**=ನಮ್ಮ ಸ್ತೋತ್ರಾನಂತರ; **ಭದ್ರಸ್ಯ**=ಮಂಗಳಕರವಾದ; **ದಕ್ಷಸ್ಯ**=ಫಲಪ್ರದಾನಸಮರ್ಥವಾದ; **ಸಾಧೋಃ**=ಸಾಧ್ಯವಾದ; **ಋತಸ್ಯ**=ಸತ್ಯವಾದ/ಅಮೋಘವಾದ ಫಲವನ್ನು ಕೊಡುವ; **ಬೃಹತಃ**=ಪ್ರೌಢವಾದ; **ಕ್ರತೋಃ**=ಅನುಷ್ಠಾನ ಮಾಡುವ ಯಜ್ಞಕ್ಕೆ; **ರಥೀಃ**=ಸಾರಥಿಯಾಗಿ/ಯಜ್ಞನಿರ್ವಾಹಕನಾಗಿ; **ಬಭೂಥ ಹಿ**=ಆಗಿರುತ್ತೀಯಷ್ಟೆ.

ಆಭಿಷ್ಟೇ ಅದ್ಯ ಗೀರ್ಭಿರ್ಗೃಣಂತೋಽಗ್ನೇ ದಾಶೇಮ ।

ಪ್ರ ತೇ ದಿವೋ ನ ಸ್ತನಯಂತಿ ಶುಷ್ಮಾಃ ॥

---

ಆಭಿಃ । ತೇ । ಅದ್ಯ । ಗೀರ್ಭಿಃ । ಗೃಣಂತಃ । ಅಗ್ನೇ । ದಾಶೇಮ ॥ ಪ್ರೇತಿ । ತೇ । ದಿವಃ । ನ । ಸ್ತನಯಂತಿ । ಶುಷ್ಮಾಃ ॥

---

| ಮಂತ್ರ | ವಿನಿಯೋಗ |
| --- | --- |
| ಆಭಿಷ್ಟೇ...ಶುಷ್ಮಾಃ ॥ | ಮೂರನೆಯ ಅಕ್ಷರಪಂಕ್ತೀಷ್ಟಕೋಪಧಾನಕ್ಕಾಗಿ. |

---

ಅಗ್ನೇ=ಹೇ! ಅಗ್ನಿದೇವನೇ! ಅದ್ಯ=ಈ ಕರ್ಮದಲ್ಲಿ; ತೇ=ನಿನಗೆ ಸಂಬಂಧಿಸಿದ; ಆಭಿಃ ಗೀರ್ಭಿಃ=ಈ ಮಂತ್ರರೂಪವಾದ ವಾಕ್ಯಗಳಿಂದ; ಗೃಣಂತಃ=ಸ್ತುತಿಸುತ್ತಾ; [ನಾವು] ದಾಶೇಮ=[ಹವಿಸ್ಸುಗಳನ್ನು] ಸಮರ್ಪಿಸುತ್ತೇವೆ. ತೇ=ನಿನ್ನ; ಶುಷ್ಮಾಃ= ಜ್ವಾಲೆಗಳು; ದಿವಃ ನ=ದ್ಯುಲೋಕದಲ್ಲಿರುವ ಮೇಘಗಳಂತೆ; ಪ್ರ ಸ್ತನಯಂತಿ= ಜೋರಾಗಿ ಶಬ್ದಮಾಡುತ್ತವೆ.

---

ರಾಜನಂತಿರುವ, ಪ್ರಕಾಶಮಾನನಾದ ಅಗ್ನಿದೇವನು ಹಗಲು-ರಾತ್ರಿಗಳಲ್ಲಿಯೂ ರಾಕ್ಷಸರನ್ನು ನಾಶಪಡಿಸಲಿ. ಅಗ್ನಿಯು ಸರ್ವದಾ ಸರ್ವಪ್ರಕಾರದಿಂದಲೂ ರಾಕ್ಷಸರನ್ನು ನಾಶಪಡಿಸಲಿ ಎಂಬ ಪ್ರಾರ್ಥನೆ ಇದೆ.

ಅಗ್ನಿದೇವನು ಮುಪ್ಪಿಲ್ಲದವನು. ಅವನನ್ನು ನಾವು ಚೆನ್ನಾಗಿ ಜ್ವಲಿಸುವಂತೆ ಮಾಡುತ್ತೇವೆ. ಅಚೇತನವಾದ ಸಮಿತ್ತೂ ಸಹ ದಿನದಿನವೂ ಅಗ್ನಿಯನ್ನು ಜ್ವಲಿಸುವಂತೆ ಮಾಡುತ್ತದೆ. ಚೇತನರಾದ ನಾವು ಜ್ವಲಿತವನ್ನಾಗಿ ಮಾಡುತ್ತೇವೆಂಬುದನ್ನು ಹೇಳುವುದೇನಿದೆ? ಆ ಅಗ್ನಿಯು ತನ್ನನ್ನು ಸ್ತುತಿಸುವ ಋತ್ವಿಜರು ಮುಂತಾದವರಿಗೆ ಅನ್ನವನ್ನು ಕೊಡಲಿ.

ಶುದ್ಧವಾದ ಪ್ರಕಾಶವನ್ನು ಪಾಲಿಸುವವನಾದ ಆಹ್ಲಾದವನ್ನುಂಟುಮಾಡುವ, ಪಾಪಗಳನ್ನು ದೂರಮಾಡುವ, ಹವ್ಯವನ್ನು ದೇವತೆಗಳಿಗೆ ಒಯ್ಯುವ ಅಗ್ನಿದೇವನನ್ನು ಸ್ತುತಿಸುತ್ತೇವೆ. ಅವನು ಸ್ತೋತ್ರ ಮಾಡುವವರಿಗೆ ಅನ್ನವನ್ನೀಯಲಿ.

ಏಭಿರ್ನೋ ಅರ್ಕೈರ್ಭವಾ ನೋ ಅರ್ವಾಙ್ಸ್ವ

[ಅರ್ವಾಙ್(೧೬)ಸುವರ್ನ]ವರ್ನ ಜ್ಯೋತಿಃ । ಅಗ್ನೇ

ವಿಶ್ವೇಭಿಃ ಸುಮನಾ ಅನೀಕೈಃ ॥

---

ಏಭಿಃ । ನಃ । ಅರ್ಕೈಃ । ಭವ । ನಃ । ಅರ್ವಾಙ್ ।(೧೬)। ಸುವಃ । ನ । ಜ್ಯೋತಿಃ ॥

ಅಗ್ನೇ । ವಿಶ್ವೇಭಿಃ । ಸುಮನಾ ಇತಿ ಸು-ಮನಾಃ । ಅನೀಕೈಃ ॥

---

| ಮಂತ್ರ | ವಿನಿಯೋಗ |
|---|---|
| ಏಭಿರ್ನೋ...ಅನೀಕೈಃ ॥ | ನಾಲ್ಕನೆಯ ಅಕ್ಷರಪಂಕ್ತೀಷ್ಟಕೋಪಧಾನಕ್ಕಾಗಿ. |

---

ಅಗ್ನೇ=ಹೇ! ಅಗ್ನಿಯೇ! ವಿಶ್ವೇಭಿಃ ಅನೀಕೈಃ=ಸಮಸ್ತ ಸೈನ್ಯಗಳಿಂದಲೂ ಕೂಡಿದವನಾಗಿ; ಸುಮನಾಃ=ಒಳ್ಳೆಯ ಮನಸ್ಸುಳ್ಳ ನೀನು; ಏಭಿಃ ಅರ್ಕೈಃ=ಈ ಅರ್ಚನೆಗಳಿಂದ ಆರಾಧಿತನಾಗಿ; ನಃ=ನಮಗೆ; ಸುವಃ ಜ್ಯೋತಿಃ ನ=ಸ್ವರ್ಗಕ್ಕೆ ಪ್ರಕಾಶರೂಪನಾದ ಆದಿತ್ಯನು ಹೇಗೋ ಹಾಗೆ; ನಃ ಅರ್ವಾಙ್ ಭವ=ನಮ್ಮ ಸಮೀಪಸ್ಥನಾಗು.

---

ಆಹ್ಲಾದಕರನಾದ ಅಗ್ನಿಯೇ! ನೀನು ಘೃತಪೂರ್ಣವಾದ ದರ್ವಿಗಳಂತೆ ಇರುವ ನಿನ್ನ ದವಡೆಗಳನ್ನು ತುಪ್ಪದಿಂದ ತುಂಬು. ಅಗ್ನಿಷ್ಟೋಮಾದಿಯಾಗಗಳಲ್ಲಿ ನಾವು ಶ್ರೇಷ್ಠತೆಯಿಂದ ಪೂರ್ಣರಾಗುವಂತೆ ಮಾಡು. ನೀನು ಬಲದ ಒಡೆಯನು. ನಿನ್ನನ್ನು ಸ್ತುತಿಸುವ ನಮಗೆ ಅನ್ನಪೂರ್ಣತೆಯನ್ನುಂಟುಮಾಡು.

ಹೇ! ಅಗ್ನಿದೇವನೇ! ಮಂಗಳಪ್ರದನಾದ ನಿನ್ನನ್ನು ಈ ಕರ್ಮದಲ್ಲಿ ಸ್ತೋತ್ರಸಮೂಹದಿಂದ-ಅಶ್ವವನ್ನು ಅದರ ಆಹಾರವನ್ನು ನೀಡಿ ಸಮೃದ್ಧಗೊಳಿಸುವಂತೆ, ಜ್ಯೋತಿಷ್ಟೋಮಯಾಗವನ್ನು ಅಂಗಾನುಷ್ಠಾನಗಳನ್ನು ನಡೆಸಿ ಸಮೃದ್ಧಗೊಳಿಸುವಂತೆ-ಸಮೃದ್ಧಗೊಳಿಸುತ್ತೇವೆ.

ಸಾರಥಿಯು ರಥವನ್ನು ಕ್ಷೇಮವಾಗಿ ನಡೆಸುವಂತೆ, ನಮ್ಮ ಸ್ತೋತ್ರಾನಂತರ ಮಂಗಳಕರವೂ, ಫಲಪ್ರದಾನಸಮರ್ಥವೂ ಆದ ಪ್ರೌಢವಾದ ಯಜ್ಞಾನುಷ್ಠಾನಕ್ಕೆ ಅಗ್ನಿಯು ನಿರ್ವಾಹಕನಾಗಿರುತ್ತಾನೆ.

ಅಗ್ನಿಗ್ಂ ಹೋತಾರಂ ಮನ್ಯೇ ದಾಸ್ವಂತಂ ವಸೋಃ ಸೂನುಗ್ಂ ಸಹಸೋ ಜಾತವೇದಸಮ್ । ವಿಪ್ರಂ ನ ಜಾತವೇದಸಮ್ ॥ ಯ ಊರ್ಧ್ವಯಾ ಸ್ವಧ್ವರೋ ದೇವೋ ದೇವಾಚ್ಯಾ ಕೃಪಾ ।

---

ಅಗ್ನಿಮ್ । ಹೋತಾರಮ್ । ಮನ್ಯೇ । ದಾಸ್ವಂತಮ್ । ವಸೋಃ । ಸೂನುಮ್ । ಸಹಸಃ । ಜಾತವೇದಸಮಿತಿ ಜಾತ-ವೇದಸಮ್ ॥ ವಿಪ್ರಮ್ । ನ । ಜಾತವೇದಸಮಿತಿ ಜಾತ-ವೇದಸಮ್ ॥ ಯಃ । ಊರ್ಧ್ವಯಾ । ಸ್ವಧ್ವರ ಇತಿ ಸು-ಅಧ್ವರಃ । ದೇವಃ । ದೇವಾಚ್ಯಾ । ಕೃಪಾ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನಿಗ್ಂ...ಸರ್ಪಿಷಃ ॥ | ಅತಿಚ್ಛಂದಸ್ಸಿನ ಇಷ್ಟಕೆಯ ಉಪಧಾನಕ್ಕಾಗಿ. |

---

🔔 **ವಸೋಃ ದಾಸ್ವಂತಮ್**=ಧನವನ್ನು ಕೊಡುವವನಾದ; **ಸಹಸಃ ಸೂನುಮ್**=ಬಲದಿಂದ ಅರಣಿಮಂಥನದಿಂದ ಜನಿಸಿರುವ; **ಜಾತವೇದಸಮ್**=[ಬ್ರಾಹ್ಮಣ ಕುಲದಲ್ಲಿ ಜನಿಸಿದುದರಿಂದ] ಬಲ್ಲವನೆಂಬುದಾಗಿ; **ವಿಪ್ರಮ್ ನ**=ಬ್ರಾಹ್ಮಣನನ್ನು ಹೇಗೋ ಹಾಗೆ; **ಜಾತವೇದಸಮ್**=ಹುಟ್ಟಿರುವ ವಿಶ್ವವೆಲ್ಲವನ್ನೂ ತಿಳಿದಿರುವ; **ಅಗ್ನಿಮ್**=ಅಗ್ನಿದೇವನನ್ನು; **ಹೋತಾರಮ್**=ದೇವತೆಗಳನ್ನು ಯಜ್ಞಕ್ಕೆ ಆಹ್ವಾನಿಸುವವನನ್ನಾಗಿ; **ಮನ್ಯೇ**=ತಿಳಿದಿರುತ್ತೇನೆ. **ಯಃ ದೇವಃ**=ಯಾವ ಅಗ್ನಿದೇವನು; **ಊರ್ಧ್ವಯಾ**=ಅತ್ಯುನ್ನತವಾದ; **ದೇವಾಚ್ಯಾ**=ದೇವತೆಗಳನ್ನು ಕುರಿತು ಹೋಗುವ; **ಕೃಪಾ**=ಕೃಪಾಯುಕ್ತವಾದ ಜ್ವಾಲೆಯಿಂದ; **ಸ್ವಧ್ವರಃ**=ಒಳ್ಳೆಯ ಯಜ್ಞನಿರ್ವಾಹಕನಾಗಿದ್ದಾನೆಯೋ [ಆ ಅಗ್ನಿಯು]

ಘೃತಸ್ಯ ವಿಭ್ರಾಷ್ಟಿಮನು ಶುಕ್ರಶೋಚಿಷ ಆಜುಹ್ವಾನಸ್ಯ ಸರ್ಪಿಷಃ ॥ ಅಗ್ನೇ ತ್ವಂ ನೋ ಅಂತಮಃ । ಉತ ತ್ರಾತಾ ಶಿವೋ ಭವ ವರೂಥ್ಯಃ ॥

---

ಘೃತಸ್ಯ । ವಿಭ್ರಾಷ್ಟಿಮಿತಿ ವಿ-ಭ್ರಾಷ್ಟಿಮ್ । ಅನ್ವಿತಿ । ಶುಕ್ರಶೋಚಿಷ ಇತಿ ಶುಕ್ರ-ಶೋಚಿಷಃ । ಆಜುಹ್ವಾನಸ್ಯೇತ್ಯಾ-ಜುಹ್ವಾನಸ್ಯ । ಸರ್ಪಿಷಃ ॥ ಅಗ್ನೇ । ತ್ವಮ್ । ನಃ । ಅಂತಮಃ ॥ ಉತ । ತ್ರಾತಾ । ಶಿವಃ । ಭವ । ವರೂಥ್ಯಃ ॥

---

| ಮಂತ್ರ | ವಿನಿಯೋಗ |
|---|---|
| ಅಗ್ನೇ ತ್ವಂ...ವರೂಥ್ಯಃ ॥ | ಮೂರು ದ್ವಿಪದೇಷ್ಟಕೆಗಳಲ್ಲಿ ಮೊದಲನೆಯದರ ಉಪಧಾನಕ್ಕಾಗಿ. |

---

ಶುಕ್ರಶೋಚಿಷಃ=ಶುದ್ಧಕಾಂತಿಯುಳ್ಳ; ಆಜುಹ್ವಾನಸ್ಯ=ಸುತ್ತಲೂ ಹೋಮಮಾಡಲ್ಪಡುವ; ಸರ್ಪಿಷಃ=ಹರಡಿಕೊಳ್ಳುವ ಸ್ವಭಾವವುಳ್ಳ; ಘೃತಸ್ಯ=ಆಜ್ಯದ; ವಿಭ್ರಾಷ್ಟಿಮ್ ಅನು=ವಿಶೇಷಪ್ರಕಾಶವನ್ನು ಅನುಸರಿಸಿ [ಪ್ರಕಾಶಿಸುತ್ತಾನೆ]. 🔔 ಅಗ್ನೇ=ಹೇ! ಅಗ್ನಿಯೇ! ತ್ವಮ್=ನೀನು; ನಃ=ನಮಗೆ; ಅಂತಮಃ=ಅತ್ಯಂತ ಸಮೀಪದಲ್ಲಿರುವವನು; ಉತ=ಮತ್ತು; ತ್ರಾತಾ=ರಕ್ಷಕನೂ; ಶಿವಃ=ಮಂಗಳಕರನೂ; ವರೂಥ್ಯಃ=ನಮ್ಮ ಗೃಹದಲ್ಲಿ ಯಾವಾಗಲೂ ಇರುವವನೂ; ಭವ=ಆಗು.

---

ಅಗ್ನಿಯೇ! ನಾವು ನಿನ್ನನ್ನು ಮಂತ್ರಗಳಿಂದ ಸ್ತುತಿಸುತ್ತಾ ಹವಿಸ್ಸನ್ನು ನಿನಗೆ ಅರ್ಪಿಸುತ್ತೇವೆ. ಈ ಹವಿಸ್ಸುಗಳಿಂದ ತೃಪ್ತನಾದ ನಿನ್ನ ಜ್ವಾಲೆಗಳು ಅಂತರಿಕ್ಷದಲ್ಲಿ ಮೋಡಗಳು ಜೋರಾಗಿ ಗುಡುಗುವಂತೆ ಹೆಚ್ಚಾಗಿ ಶಬ್ದಮಾಡುತ್ತಾ ಜ್ವಲಿಸುತ್ತವೆ.

ಸಕಲಸೇನಾಸಮೇತನಾದ ಅಗ್ನಿಯು ನಮ್ಮ ಆರಾಧನೆಗಳನ್ನು ಸ್ವೀಕರಿಸಿ, ನಮ್ಮಲ್ಲಿ ಅನುಗ್ರಹಯುಕ್ತವಾದ ಮನಸ್ಸನ್ನು ಹೊಂದಿ ಪ್ರಕಾಶರೂಪನಾದ ಆದಿತ್ಯನು ಸ್ವರ್ಗಕ್ಕೆ ಸಮೀಪಸ್ಥನಾಗು ವಂತೆ ನಮ್ಮ ಹತ್ತಿರಕ್ಕೆ ಬರಲಿ. ನಮ್ಮನ್ನು ಅನುಗ್ರಹಿಸಲಿ.

ತಂ ತ್ವಾ ಶೋಚಿಷ್ಠ ದೀದಿವಃ । ಸುಮ್ನಾಯ

ನೂನಮೀಮಹೇ ಸಖಿಭ್ಯಃ ॥ ವಸುರಗ್ನಿರ್ವಸುಶ್ರವಾಃ ।

ಅಚ್ಛಾ ನಕ್ಷಿ ದ್ಯುಮತ್ತಮೋ ರಯಿಂ ದಾಃ ॥ ೧೭–4 ॥

[ಜನಾನಾಮಂಗಿರಸ ಇಷಗ್‍ಂ ಸುಶಮೀ ತಿಗ್ಮಜಂಭ ಪುಪ್ರೂಯಾರ್ಾ

ಅರ್ವಾಙ್ವಸುಶ್ರವಾಃ ಪಂಚ ಚ ॥]

---

ತಮ್ । ತ್ವಾ । ಶೋಚಿಷ್ಠ । ದೀದಿವಃ ॥ ಸುಮ್ನಾಯ । ನೂನಮ್ । ಈಮಹೇ । ಸಖಿಭ್ಯ ಇತಿ ಸಖಿ–ಭ್ಯಃ ॥ ವಸುಃ । ಅಗ್ನಿಃ । ವಸುಶ್ರವಾ ಇತಿ ವಸು–ಶ್ರವಾಃ ॥ ಅಚ್ಛ । ನಕ್ಷಿ । ದ್ಯುಮತ್ತಮ ಇತಿ ದ್ಯುಮತ್–ತಮಃ । ರಯಿಮ್ । ದಾಃ ॥ (೧೭) ॥

---

| ಮಂತ್ರ | ವಿನಿಯೋಗ |
|---|---|
| ತಂ ತ್ವಾ...ಸಖಿಭ್ಯಃ ॥ | ಎರಡನೆಯ ದ್ವಿಪದೇಷ್ಟಕೋಪಧಾನಕ್ಕಾಗಿ. |
| ವಸುರಗ್ನಿಃ...ದಾಃ ॥ | ಮೂರನೆಯ ದ್ವಿಪದೇಷ್ಟಕೋಪಧಾನಕ್ಕಾಗಿ. |

---

🔔 [ಅಗ್ನಿಯೇ!] **ಶೋಚಿಷ್ಠ**=ಅತ್ಯಂತ ಶುದ್ಧನೇ! **ದೀದಿವಃ**=ಪ್ರಕಾಶಮಾನನೇ! **ನೂನಮ್**=ನಿಶ್ಚಯವಾಗಿಯೂ; **ತಮ್ ತ್ವಾ**=ಅಂತಹ ನಿನ್ನನ್ನು; **ಸಖಿಭ್ಯಃ**=ನಿನ್ನ ಮಿತ್ರರಾದ ನಮ್ಮ; **ಸುಮ್ನಾಯ**=ಸುಖಕ್ಕಾಗಿ; **ಈಮಹೇ**=ಹೊಂದುತ್ತೇವೆ. 🔔 **ವಸುಃ**=ಧನವಂತನಾದ; **ವಸುಶ್ರವಾಃ**=ವಸು–ರುದ್ರಾದಿಗಳಿಂದ ಆದರಪೂರ್ವಕವಾಗಿ ಕೇಳಲ್ಪಡುವ; **ಅಗ್ನಿಃ**=ಅಗ್ನಿಯು; **ದ್ಯುಮತ್ತಮಃ**=ಅತ್ಯಂತ ಪ್ರಕಾಶವುಳ್ಳವನಾಗಿರುತ್ತಾನೆ. [ಅಂತಹ ಅಗ್ನಿಯೇ!] **ಅಚ್ಛ**=ಅಭಿಮುಖನಾಗಿ; **ನಕ್ಷಿ**=ಬಾ; **ರಯಿಮ್ ದಾಃ**=ಧನವನ್ನು ಕೊಡು.

ಅಗ್ನಿದೇವನು ಅತ್ಯುನ್ನತವಾದ ಕೃಪಾಯುಕ್ತವಾದ ಜ್ವಾಲೆಯಿಂದ ಯಜ್ಞನಿರ್ವಾಹಕನಾಗಿರುತ್ತಾನೆ. ಆತನು ನಿರ್ಮಲಕಾಂತಿಯುಕ್ತವಾದ, ಸುತ್ತಲೂ ಆಹುತವಾದ, ಹರಡಿಕೊಳ್ಳುವಂತಿರುವ ತುಪ್ಪದ ದೀಪ್ತಿಯನ್ನು ಅನುಸರಿಸಿ ಪ್ರಕಾಶಿಸುತ್ತಾನೆ. ಆತನು ನಮ್ಮ ಇಷ್ಟಾರ್ಥಗಳನ್ನು ಪೂರ್ಣ ಮಾಡಲಿ.

ಹೇ! ಅಗ್ನಿಯೇ! ನೀನು ನಮಗೆ ಸಮೀಪಸ್ಥನೂ, ರಕ್ಷಕನೂ, ಮಂಗಳಕರನೂ ಆಗಿರುವೆ. ನೀನು ಯಾವಾಗಲೂ ನಮ್ಮ ಮನೆಯಲ್ಲಿರು.

ಅಗ್ನಿದೇವನೇ! ಅತ್ಯಂತ ಶುದ್ಧನೂ, ಪ್ರಕಾಶಮಾನನೂ ಆದ ನಿನ್ನನ್ನು ನಿಮ್ಮ ಮಿತ್ರರಾದ ನಮ್ಮ ಸುಖಕ್ಕಾಗಿ ಸಮೀಪಿಸಿ ಸ್ತುತಿಸುತ್ತೇವೆ.

---

## ವಿನಿಯೋಗಸಂಗ್ರಹ

1-3 ಅಗ್ನಿಸ್ತಿಸ್ರಸ್ತು ಗಾಯತ್ರ್ಯೋ ಭುವ4-6ಸ್ತು ತ್ರಿಷ್ಟುಭಾಂ ತ್ರಯಮ್ ।
7-9 ಜನ ತಿಸ್ರೋ ಜಗತ್ಯಃ ಸ್ಯುಃ 10-12ತ್ವಾಂ ಚಿತ್ರಾನುಷ್ಟುಭಾಂ ತ್ರಯಮ್ ॥
13-15ಏನಾ ತಿಸ್ರೋ ಬೃಹತ್ಯಃ ಸ್ಯುಃ ಅಗ್ನ16-18 ಇತ್ಯುಷ್ಣಿಹಾಂ ತ್ರಯಮ್ ।
19-21ಆ ತೇ ಪಂಕ್ತಿತ್ರಯಂ ಹ್ಯಗ್ನೇ22-25ऽಕ್ಷರ ಪಂಕ್ತಿಚತುಷ್ಟಯಮ್ ॥
26 ಅಗ್ನಿಮೇಕಾಹ್ಯತಿಚ್ಛಂದಾ 27-29 ಅಗ್ನೇ ತ್ವಂ ದ್ವಿಪದಾ ತ್ರಯಮ್ ।
ಏಕೋನತ್ರಿಂಶದೇತಾನಿ ಛಂದಾಂಸ್ಯುಪದಧಾತಿ ಹಿ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–29

## ॥ ಪಂಚಮೋಽನುವಾಕಃ ॥

ಇಂದ್ರಾಗ್ನಿಭ್ಯಾಂ ತ್ವಾ ಸಯುಜಾ ಯುಜಾ

ಯುನಜ್ಮ್ಯಾಘಾರಾಭ್ಯಾಂ

---

ಇಂದ್ರಾಗ್ನಿಭ್ಯಾಮಿತೀಂದ್ರಾಗ್ನಿ-ಭ್ಯಾಮ್ । ತ್ವಾ । ಸಯುಜೇತಿ ಸ-ಯುಜಾ । ಯುಜಾ ।

ಯುನಜ್ಮಿ । ಆಘಾರಾಭ್ಯಾಮಿತ್ಯಾ-ಘಾರಾಭ್ಯಾಮ್ ।

---

ನಾಲ್ಕನೆಯ ಅನುವಾಕದಲ್ಲಿ ಛಂದೋನಾಮೇಷ್ಟಕೆಗಳ ಮಂತ್ರಗಳು ಉಕ್ತವಾಗಿವೆ. ಈ ಐದನೆಯ ಅನುವಾಕದಲ್ಲಿ ಸಯುಜ ಮುಂತಾದ ಇಷ್ಟಕೆಗಳ ಮಂತ್ರಗಳು ಉಕ್ತವಾಗಿವೆ.

---

| ಮಂತ್ರ | ವಿನಿಯೋಗ |
|---|---|
| ಇಂದ್ರಾಗ್ನಿಭ್ಯಾಂ ತ್ವಾ...ಯುನಜ್ಮಿ ॥ | ಮೊದಲನೆಯ ಸಯುಜೇಷ್ಟಕೆಯ ಉಪಧಾನಕ್ಕಾಗಿ [ಸಯುಜೇಷ್ಟಕೆಗಳು ಎಂಟು]. |
| ಆಘಾರಾಭ್ಯಾಂ ತ್ವಾ...ಯುನಜ್ಮಿ ॥ | ಎರಡನೆಯ ಸಯುಜೇಷ್ಟಕೋಪಧಾನಕ್ಕಾಗಿ. |

---

🔔 [ಎಲೈ! ಇಷ್ಟಕೆಯೇ!] ಇಂದ್ರಾಗ್ನಿಭ್ಯಾಮ್=ಇಂದ್ರಾಗ್ನಿದೇವತೆಗಳೊಡನೆ; ಸಯುಜಾ=ನಿನ್ನನ್ನು ಸೇರಿಸುವ; ಯುಜಾ=ಸಂಬಂಧದಿಂದ; ತ್ವಾ=ನಿನ್ನನ್ನು; ಯುನಜ್ಮಿ =[ಈ ಕ್ಷೇತ್ರದಲ್ಲಿ] ಸಂಯುಕ್ತವಾದದ್ದನ್ನಾಗಿ ಮಾಡುತ್ತೇನೆ. 🔔 ಆಘಾರಾಭ್ಯಾಮ್= ಆಘಾರಹೋಮಗಳೊಡನೆ; ಸಯುಜಾ=[ನಿನ್ನನ್ನು] ಹೊಂದಿಸುವ; ಯುಜಾ= ಸಂಬಂಧದಿಂದ; ತ್ವಾ ಯುನಜ್ಮಿ=ನಿನ್ನನ್ನು [ಈ ಕ್ಷೇತ್ರದಲ್ಲಿ] ಸಂಯುಕ್ತವಾದದ್ದನ್ನಾಗಿ ಮಾಡುತ್ತೇನೆ.

# ತೇಜಸಾ ವರ್ಚಸೋಕ್ಥೇಭಿಸ್ಸ್ತೋಮೇಭಿಶ್ಛಂದೋಭೀ

ತೇಜಸಾ । ವರ್ಚಸಾ । ಉಕ್ಥೇಭಿಃ । ಸ್ತೋಮೇಭಿಃ । ಛಂದೋಭಿರಿತಿ ಛಂದಃ-ಭಿಃ ।

| ಮಂತ್ರ | ವಿನಿಯೋಗ |
| --- | --- |
| ತೇಜಸಾ ತ್ವಾ...ಯುನಜ್ಮಿ ॥ | ಮೂರನೆಯ ಸಯುಜೇಷ್ಟಕೋಪಧಾನಕ್ಕಾಗಿ. |
| ವರ್ಚಸಾ ತ್ವಾ...ಯುನಜ್ಮಿ ॥ | ನಾಲ್ಕನೆಯ ಸಯುಜೇಷ್ಟಕೋಪಧಾನಕ್ಕಾಗಿ. |
| ಉಕ್ಥೇಭಿಸ್ತ್ವಾ ...ಯುನಜ್ಮಿ ॥ | ಐದನೆಯ ಸಯುಜೇಷ್ಟಕೋಪಧಾನಕ್ಕಾಗಿ. |
| ಸ್ತೋಮೇಭಿಸ್ತ್ವಾ...ಯುನಜ್ಮಿ ॥ | ಆರನೆಯ ಸಯುಜೇಷ್ಟಕೋಪಧಾನಕ್ಕಾಗಿ. |
| ಛಂದೋಭಿಸ್ತ್ವಾ...ಯುನಜ್ಮಿ ॥ | ಏಳನೆಯ ಸಯುಜೇಷ್ಟಕೋಪಧಾನಕ್ಕಾಗಿ. |

▲ **ತೇಜಸಾ**=ಕಾಂತಿಯೊಡನೆ; ಸಯುಜಾ=[ನಿನ್ನನ್ನು] ಹೊಂದಿಸುವ; ಯುಜಾ=ಸಂಬಂಧದಿಂದ; ತ್ವಾ ಯುನಜ್ಮಿ=ನಿನ್ನನ್ನು [ಈ ಕ್ಷೇತ್ರದಲ್ಲಿ] ಸೇರಿಸುತ್ತೇನೆ. ▲ **ವರ್ಚಸಾ** =ಬಲದೊಡನೆ/ಧನದೊಡನೆ; ಸಯುಜಾ ಯುಜಾ=ನಿನಗಿರುವ ಸಂಬಂಧದಿಂದ; ತ್ವಾ ಯುನಜ್ಮಿ=ನಿನ್ನನ್ನು [ಈ ಕ್ಷೇತ್ರದಲ್ಲಿ] ಸೇರಿಸುತ್ತೇನೆ. ▲ **ಉಕ್ಥೇಭಿಃ**=ಉಕ್ಥ-ಶಸ್ತ್ರಗಳೊಡನೆ; ಸಯುಜಾ=[ನಿನ್ನನ್ನು] ಹೊಂದಿಸುವ; ಯುಜಾ=ಸಂಬಂಧದಿಂದ; ತ್ವಾ ಯುನಜ್ಮಿ =ನಿನ್ನನ್ನು [ಈ ಕ್ಷೇತ್ರದಲ್ಲಿ] ಸೇರಿಸುತ್ತೇನೆ. ▲ **ಸ್ತೋಮೇಭಿಃ**= ಸಾಮಸ್ತೋತ್ರಗಳೊಡನೆ; ಸಯುಜಾ=[ನಿನ್ನನ್ನು] ಹೊಂದಿಸುವ; ಯುಜಾ=ಸಂಬಂಧದಿಂದ; ತ್ವಾ ಯುನಜ್ಮಿ =ನಿನ್ನನ್ನು [ಈ ಕ್ಷೇತ್ರದಲ್ಲಿ] ಸೇರಿಸುತ್ತೇನೆ. ▲ **ಛಂದೋಭಿಃ**=ಗಾಯತ್ರ್ಯಾದಿ ಛಂದಸ್ಸುಗಳೊಡನೆ; ಸಯುಜಾ=[ನಿನ್ನನ್ನು] ಹೊಂದಿಸುವ; ಯುಜಾ=ಸಂಬಂಧದಿಂದ; ತ್ವಾ ಯುನಜ್ಮಿ=ನಿನ್ನನ್ನು [ಈ ಕ್ಷೇತ್ರದಲ್ಲಿ] ಸೇರಿಸುತ್ತೇನೆ.

ಹೇ ಸಯುಜೇಷ್ಟಕೆಯೇ! ನಿನ್ನನ್ನು ಇಂದ್ರಾಗ್ನಿದೇವತೆಗಳೊಡನೆ ಸೇರಿಸುವ ಯಾವ ಸಂಬಂಧವಿದೆಯೋ, ಆ ಸಂಬಂಧದಿಂದ ಈ ಕ್ಷೇತ್ರದಲ್ಲಿ ಸಂಯುಕ್ತವಾದದ್ದನ್ನಾಗಿ ಮಾಡುತ್ತೇನೆ. ಹಾಗೆಯೇ ಉಳಿದ ಸಯುಜೇಷ್ಟಕೆಗಳೇ! ನಿಮ್ಮನ್ನು ಆಘಾರಹೋಮಗಳೊಡನೆಯೂ, ಕಾಂತಿಯೊಡನೆಯೂ, ಧನ/ಬಲದೊಡನೆಯೂ, ಉಕ್ಥ-ಶಸ್ತ್ರಗಳೊಡನೆಯೂ, ಸಾಮಸ್ತೋತ್ರಗಳೊಡನೆಯೂ, ಗಾಯತ್ರ್ಯಾದಿ ಛಂದಸ್ಸುಗಳೊಡನೆಯೂ

# ರಯ್ಯೈ ಪೋಷಾಯ ಸಜಾತಾನಾಂ ಮಧ್ಯಮಸ್ಥೇಯಾಯ ಮಯಾ ತ್ವಾ ಸಯುಜಾ ಯುಜಾ ಯುನಜ್ಮ್ಯಂಬಾ

---

ರಯ್ಯೈ । ಪೋಷಾಯ । ಸಜಾತಾನಾಮಿತಿ ಸ-ಜಾತಾನಾಮ್ । ಮಧ್ಯಮಸ್ಥೇಯಾಯೇತಿ ಮಧ್ಯಮ-ಸ್ಥೇಯಾಯ । ಮಯಾ । ತ್ವಾ । ಸಯುಜೇತಿ ಸ-ಯುಜಾ । ಯುಜಾ । ಯುನಜ್ಮಿ । ಅಂಬಾ ।

---

| ಮಂತ್ರ | ವಿನಿಯೋಗ |
|---|---|
| ರಯ್ಯೈ...ಯುನಜ್ಮಿ ॥ | ಎಂಟನೆಯ ಸಯುಜೇಷ್ಟಕೋಪಧಾನಕ್ಕಾಗಿ. |
| ಅಂಬಾ ನಾಮಾಸಿ...ದಧಾಮಿ ॥ | ಮೊದಲನೆಯ ಕೃತ್ತಿಕೇಷ್ಟಕೋಪಧಾನಕ್ಕಾಗಿ [ಕೃತ್ತಿಕೇಷ್ಟಕೆಗಳು ಏಳು]. |

---

🔔 ಹೇ ಇಷ್ಟಕೆಯೇ! **ರಯ್ಯೈ**=ಧನಕ್ಕಾಗಿಯೂ; **ಪೋಷಾಯ**=ಸರ್ವವಿಧಪುಷ್ಟಿಗಾಗಿಯೂ; **ಸಜಾತಾನಾಮ್**=ಜ್ಞಾತಿಗಳ ಮಧ್ಯದಲ್ಲಿ; **ಮಧ್ಯಮಸ್ಥೇಯಾಯ**=ಶ್ರೇಷ್ಠನಾಗಿ ಇರುವುದಕ್ಕಾಗಿಯೂ; **ಮಯಾ**=ನನ್ನೊಡನೆ; **ಸಯುಜಾ**=[ನಿನ್ನನ್ನು] ಹೊಂದಿಸುವ; **ಯುಜಾ**=ಸಂಬಂಧದಿಂದ; **ತ್ವಾ ಯುನಜ್ಮಿ**=ನಿನ್ನನ್ನು [ಈ ಪ್ರದೇಶದಲ್ಲಿ] ಉಪಧಾನ ಮಾಡುತ್ತೇನೆ. 🔔 [ಹೇ! ಇಷ್ಟಕೆಯೇ! ನೀನು] **ಅಂಬಾ ನಾಮ ಅಸಿ**=ಅಂಬೆಯೆಂದು ಪ್ರಸಿದ್ಧವಾಗಿರುವ ನಕ್ಷತ್ರದೇವತೆಯಾಗಿರುವೆ. **ಪ್ರಜಾಪತಿನಾ**=ಪ್ರಜಾಪತಿದೇವನಿಂದ [ಪ್ರೇರಿತವಾದ]; **ವಿಶ್ವಾಭಿಃ**=ವೈಚಿತ್ರ್ಯಯುಕ್ತವಾದ ಸಮಸ್ತವಾದ; **ಧೀಭಿಃ**=ಬುದ್ಧಿಗಳಿಂದ; **ತ್ವಾ**=ನಿನ್ನನ್ನು; **ಉಪದಧಾಮಿ**=[ಇಲ್ಲಿ] ಉಪಧಾನ ಮಾಡುತ್ತೇನೆ.

---

ಹೊಂದಿಸಿದ ಸಂಬಂಧದಿಂದ ನಿಮ್ಮನ್ನು ಇಲ್ಲಿ ಉಪಧಾನ ಮಾಡುತ್ತೇನೆ.

ಹೇ! ಸಯುಜೇಷ್ಟಕೆಯೇ! ನಿನ್ನನ್ನು ಧನಕ್ಕಾಗಿಯೂ/ಸರ್ವವಿಧಪುಷ್ಟಿಗಾಗಿಯೂ, ಜ್ಞಾತಿಗಳ ಮಧ್ಯದಲ್ಲಿ ಶ್ರೇಷ್ಠನಾಗಿ ಇರುವುದಕ್ಕಾಗಿಯೂ, ನನ್ನೊಡನೆ ನಿನ್ನನ್ನು ಹೊಂದಿಸುವ ಸಂಬಂಧದಿಂದ ನಿನ್ನನ್ನು ಈ ಪ್ರದೇಶದಲ್ಲಿ ಉಪಧಾನ ಮಾಡುತ್ತೇನೆ.

# ದುಲಾ ನಿತತ್ನಿರಭ್ರಯಂತೀ ಮೇಘಯಂತೀ

ದುಲಾ। ನಿತತ್ನಿರಿತಿ ನಿ-ತತ್ನಿಃ। ಅಭ್ರಯಂತೀ। ಮೇಘಯಂತೀ।

| ಮಂತ್ರ | ವಿನಿಯೋಗ |
| --- | --- |
| ದುಲಾ ನಾಮಾಸಿ...ದಧಾಮಿ ॥ | ಎರಡನೆಯ ಕೃತ್ತಿಕೇಷ್ಟಕೋಪಧಾನಕ್ಕಾಗಿ. |
| ನಿತತ್ನಿರ್ನಾಮಾಸಿ...ದಧಾಮಿ ॥ | ಮೂರನೆಯ ಕೃತ್ತಿಕೇಷ್ಟಕೋಪಧಾನಕ್ಕಾಗಿ. |
| ಅಭ್ರಯಂತೀ ನಾಮಾಸಿ...ದಧಾಮಿ ॥ | ನಾಲ್ಕನೆಯ ಕೃತ್ತಿಕೇಷ್ಟಕೋಪಧಾನಕ್ಕಾಗಿ. |
| ಮೇಘಯಂತೀ ನಾಮಾಸಿ..ದಧಾಮಿ ॥ | ಐದನೆಯ ಕೃತ್ತಿಕೇಷ್ಟಕೋಪಧಾನಕ್ಕಾಗಿ. |

🔔 [ಇಷ್ಟಕೆಯೇ!] [ನೀನು] **ದುಲಾ** ನಾಮ ಅಸಿ=ದುಲೆಯೆಂದು ಪ್ರಸಿದ್ಧವಾಗಿರುವ ನಕ್ಷತ್ರದೇವತೆಯಾಗಿರುವೆ. ಪ್ರಜಾಪತಿನಾ=ಪ್ರಜಾಪತಿದೇವನಿಂದ [ಪ್ರೇರಿತವಾದ]; ವಿಶ್ವಾಭಿಃ ಧೀಭಿಃ=ವೈಚಿತ್ರ್ಯಯುಕ್ತವಾದ ಸಮಸ್ತವಾದ ಬುದ್ಧಿಗಳಿಂದ; ತ್ವಾ ಉಪದಧಾಮಿ=ನಿನ್ನನ್ನು ಇಲ್ಲಿ ಉಪಧಾನ ಮಾಡುತ್ತೇನೆ. 🔔 **ನಿತತ್ನಿಃ** ನಾಮ ಅಸಿ= [ನೀನು] ನಿತತ್ನಿಯೆಂದು ಪ್ರಸಿದ್ಧವಾಗಿರುವ ನಕ್ಷತ್ರದೇವತೆಯಾಗಿರುವೆ. ಪ್ರಜಾಪತಿನಾ =ಪ್ರಜಾಪತಿದೇವನಿಂದ [ಪ್ರೇರಿತವಾದ]; ವಿಶ್ವಾಭಿಃ ಧೀಭಿಃ=ವೈಚಿತ್ರ್ಯಯುಕ್ತವಾದ ಸಮಸ್ತವಾದ ಬುದ್ಧಿಗಳಿಂದ; ತ್ವಾ ಉಪದಧಾಮಿ=ನಿನ್ನನ್ನು ಇಲ್ಲಿ ಉಪಧಾನ ಮಾಡುತ್ತೇನೆ. 🔔 **ಅಭ್ರಯಂತೀ** ನಾಮ ಅಸಿ=[ನೀನು] ಅಭ್ರಯಂತೀ ಎಂದು ಪ್ರಸಿದ್ಧವಾಗಿರುವ ನಕ್ಷತ್ರದೇವತೆಯಾಗಿರುವೆ. ಪ್ರಜಾಪತಿನಾ=ಪ್ರಜಾಪತಿದೇವನಿಂದ [ಪ್ರೇರಿತವಾದ]; ವಿಶ್ವಾಭಿಃ ಧೀಭಿಃ=ವೈಚಿತ್ರ್ಯಯುಕ್ತವಾದ ಸಮಸ್ತವಾದ ಬುದ್ಧಿಗಳಿಂದ; ತ್ವಾ ಉಪದಧಾಮಿ=ನಿನ್ನನ್ನು ಇಲ್ಲಿ ಉಪಧಾನ ಮಾಡುತ್ತೇನೆ. 🔔 **ಮೇಘಯಂತೀ** ನಾಮ ಅಸಿ=[ನೀನು] ಮೇಘಯಂತೀ ಎಂದು ಪ್ರಸಿದ್ಧವಾಗಿರುವ ನಕ್ಷತ್ರದೇವತೆಯಾಗಿರುವೆ. ಪ್ರಜಾಪತಿನಾ=ಪ್ರಜಾಪತಿದೇವನಿಂದ [ಪ್ರೇರಿತವಾದ]; ವಿಶ್ವಾಭಿಃ ಧೀಭಿಃ=ವೈಚಿತ್ರ್ಯಯುಕ್ತವಾದ ಸಮಸ್ತವಾದ ಬುದ್ಧಿಗಳಿಂದ; ತ್ವಾ ಉಪದಧಾಮಿ=ನಿನ್ನನ್ನು ಇಲ್ಲಿ ಉಪಧಾನ ಮಾಡುತ್ತೇನೆ.

**ಏಳು ಕೃತ್ತಿಕೇಷ್ಟಕೆಗಳನ್ನು ಉಪಧಾನ ಮಾಡುವ ಮಂತ್ರಗಳು ಇವು. ಕೃತ್ತಿಕಾನಕ್ಷತ್ರ ದೇವತೆಗಳು ಏಳು . ಅವು ಅಂಬಾ, ದುಲಾ, ನಿತತ್ನಿ, ಅಭ್ರಯಂತೀ, ಮೇಘಯಂತೀ,**

ವರ್ಷಯಂತೀ ಚುಪುಣೀಕಾ ನಾಮಾಸಿ ಪ್ರಜಾಪತಿನಾ ತ್ವಾ
ವಿಶ್ವಾಭಿರ್ಧೀಭಿರುಪದಧಾಮಿ ಪೃಥಿವ್ಯುದಪುರಮನ್ನೇನ
ವಿಷ್ಟಾ ಮನುಷ್ಯಾಸ್ತೇ

---

ವರ್ಷಯಂತೀ । ಚುಪುಣೀಕಾ । ನಾಮ । ಅಸಿ । ಪ್ರಜಾಪತಿನೇತಿ ಪ್ರಜಾ-ಪತಿನಾ । ತ್ವಾ । ವಿಶ್ವಾಭಿಃ । ಧೀಭಿಃ । ಉಪೇತಿ । ದಧಾಮಿ । ಪೃಥಿವೀ । ಉದಪುರಮಿತ್ಯುದ-ಪುರಮ್ । ಅನ್ನೇನ । ವಿಷ್ಟಾ । ಮನುಷ್ಯಾಃ । ತೇ ।

---

| ಮಂತ್ರ | ವಿನಿಯೋಗ |
| --- | --- |
| **ವರ್ಷಯಂತೀ** ನಾಮಾಸಿ...ದಧಾಮಿ ॥ | ಆರನೆಯ ಕೃತ್ತಿಕೇಷ್ಟಕೋಪಧಾನಕ್ಕಾಗಿ. |
| **ಚುಪುಣೀಕಾ** ನಾಮಾಸಿ...ದಧಾಮಿ ॥ | ಏಳನೆಯ ಕೃತ್ತಿಕೇಷ್ಟಕೋಪಧಾನಕ್ಕಾಗಿ. |
| **ಪೃಥಿವ್ಯುದಪುರಂ...ಚಾಸ್ತು** ॥ | ಪ್ರಥಮಚಿತಿಯ ಮಂಡಲೇಷ್ಟಕೆಯ ಉಪಧಾನಕ್ಕಾಗಿ. |

---

▲ **ವರ್ಷಯಂತೀ** ನಾಮ ಅಸಿ=[ನೀನು] ವರ್ಷಯಂತೀ ಎಂದು ಪ್ರಸಿದ್ಧವಾಗಿರುವ ನಕ್ಷತ್ರದೇವತೆಯಾಗಿರುವೆ. ಪ್ರಜಾಪತಿನಾ=ಪ್ರಜಾಪತಿದೇವನಿಂದ [ಪ್ರೇರಿತವಾದ]; ವಿಶ್ವಾಭಿಃ ಧೀಭಿಃ=ವೈಚಿತ್ರ್ಯಯುಕ್ತವಾದ ಸಮಸ್ತವಾದ ಬುದ್ಧಿಗಳಿಂದ; ತ್ವಾ ಉಪದಧಾಮಿ=ನಿನ್ನನ್ನು ಇಲ್ಲಿ ಉಪಧಾನ ಮಾಡುತ್ತೇನೆ. ▲ **ಚುಪುಣೀಕಾ ನಾಮ ಅಸಿ**=ಚುಪುಣೀಕಾ ಎಂದು ಪ್ರಸಿದ್ಧವಾಗಿರುವ ನಕ್ಷತ್ರದೇವತೆಯಾಗಿರುವೆ; **ಪ್ರಜಾಪತಿನಾ**=ಪ್ರಜಾಪತಿದೇವನಿಂದ [ಪ್ರೇರಿತವಾದ]; **ವಿಶ್ವಾಭಿಃ ಧೀಭಿಃ**=ವೈಚಿತ್ರ್ಯಯುಕ್ತವಾದ ಸಮಸ್ತವಾದ ಬುದ್ಧಿಗಳಿಂದ; **ತ್ವಾ ಉಪದಧಾಮಿ**=ನಿನ್ನನ್ನು ಇಲ್ಲಿ ಉಪಧಾನ ಮಾಡುತ್ತೇನೆ. ▲ [ಇಷ್ಟಕೆಯೇ!] **ಅನ್ನೇನ ವಿಷ್ಟಾ**=ಅನ್ನದಿಂದ ಪೂರ್ಣವಾದ; **ಉದಪುರಮ್**=ನೀರಿನಿಂದ ತುಂಬಿದ; **ಪೃಥಿವೀ**=ಭೂಮಿಯು ನಿನ್ನ ಪುರವಾಗಿದೆ. **ತೇ**=ಪೃಥಿವೀರೂಪಳಾದ ನಿನಗೆ; **ಮನುಷ್ಯಾಃ**=ಮನುಷ್ಯರು;

ಗೋಪ್ತಾರೋಽಗ್ನಿರ್ವಿಯತ್ತೋಽಸ್ಯಾಂ ತಾಮಹಂ ಪ್ರಪದ್ಯೇ

ಸಾ [(೧೮)] ಮೇ ಶರ್ಮ ಚ ವರ್ಮ ಚಾಸ್ತ್ವಧಿ

ದ್ಯೌರಂತರಿಕ್ಷಂ ಬ್ರಹ್ಮಣಾ ವಿಷ್ಟಾ ಮರುತಸ್ತೇ

---

ಗೋಪ್ತಾರಃ । ಅಗ್ನಿಃ । ವಿಯತ್ತ ಇತಿ ವಿ-ಯತ್ತಃ । ಅಸ್ಯಾಮ್ । ತಾಮ್ । ಅಹಮ್ । ಪ್ರೇತಿ । ಪದ್ಯೇ । ಸಾ ।(೧೮)। ಮೇ । ಶರ್ಮ । ಚ । ವರ್ಮ । ಚ । ಅಸ್ತು । ಅಧಿದ್ಯೌರಿತ್ಯಧಿ-ದ್ಯೌಃ । ಅಂತರಿಕ್ಷಮ್ । ಬ್ರಹ್ಮಣಾ । ವಿಷ್ಟಾ । ಮರುತಃ । ತೇ ।

---

| ಮಂತ್ರ | ವಿನಿಯೋಗ |
|---|---|
| ಅಧಿದ್ಯೌಃ...ವರ್ಮ ಚಾಸ್ತು ॥ | ಮಧ್ಯಮಚಿತಿಯ ಮಂಡಲೇಷ್ಟಕೋಪಧಾನಕ್ಕಾಗಿ. |

---

**ಗೋಪ್ತಾರಃ**=ರಕ್ಷಕರು; **ಅಸ್ಯಾಮ್**=ಈ ಭೂಮಿಯ ರಕ್ಷಣೆಯಲ್ಲಿ; **ಅಗ್ನಿಃ**=ಅಗ್ನಿ ದೇವನು; **ವಿಯತ್ತಃ**=ವಿಶೇಷವಾಗಿ ಪ್ರಯತ್ನಶೀಲನಾಗಿರುತ್ತಾನೆ. **ತಾಮ್**=ಅಂತಹ; **ತ್ವಾಮ್**=ನಿನ್ನನ್ನು; **ಅಹಮ್**=ಯಜಮಾನನಾದ ನಾನು; **ಪ್ರಪದ್ಯೇ**=ಆಶ್ರಯಿಸುತ್ತೇನೆ. **ಸಾ**=ಆ ಭೂಮಿಯು/ಇಷ್ಟಕೆಯು; **ಮೇ**=ನನಗೆ; **ಶರ್ಮ ಚ**=ಗೃಹವೂ; **ವರ್ಮ ಚ ಅಸ್ತು**=ಕವಚರೂಪವೂ ಆಗಲಿ. 🔔 [ಇಷ್ಟಕೆಯೇ!] **ಅಧಿದ್ಯೌಃ**=ದ್ಯುಲೋಕಕ್ಕಿಂತಲೂ ಅಧಿಕವಾದ; **ಅಂತರಿಕ್ಷಮ್**=ಅಂತರಿಕ್ಷಪುರವು; **ಬ್ರಹ್ಮಣಾ**=ಪ್ರೌಢರಿಂದ; **ವಿಷ್ಟಾ**=ಪೂರ್ಣವಾಗಿದೆ. **ತೇ**=ಅಂತರಿಕ್ಷರೂಪವಾದ ನಿನಗೆ; **ಮರುತಃ**=ಮರುದ್ದೇವತೆಗಳು;

---

ವರ್ಷಯಂತೀ, ಚುಪುಣೀಕಾ. ಈ ಏಳೂ ಕೃತ್ತಿಕೇಷ್ಟಕೆಗಳನ್ನು ಪ್ರಜಾಪತಿಪ್ರೇರಿತವಾದ ಸಕಲಬುದ್ಧಿಗಳಿಂದ ಈ ಪ್ರದೇಶದಲ್ಲಿ ಉಪಧಾನ ಮಾಡುತ್ತೇನೆ.

ಮೂರು ಮಂಡಲೇಷ್ಟಕೆಗಳನ್ನು ಕ್ರಮವಾಗಿ ಪ್ರಥಮ, ಮಧ್ಯಮ ಹಾಗೂ ತೃತೀಯ ಚಿತಿಗಳಲ್ಲಿ ಉಪಧಾನ ಮಾಡಬೇಕು. ಆ ಮಂತ್ರಗಳ ತಾತ್ಪರ್ಯವು ಹೀಗಿದೆ:-

# ಗೋಪ್ತಾರೋ ವಾಯುರ್ವಿಯತ್ತೋಽಸ್ಯಾಂ ತಾಮಹಂ ಪ್ರಪದ್ಯೇ ಸಾ ಮೇ ಶರ್ಮ ಚ ವರ್ಮ ಚಾಸ್ತು ದ್ಯೌರಪರಾಜಿತಾಽಮೃತೇನ ವಿಷ್ಟಾಽಽದಿತ್ಯಾಸ್ತೇ

---

ಗೋಪ್ತಾರಃ । ವಾಯುಃ । ವಿಯತ್ತ ಇತಿ ವಿ–ಯತ್ತಃ । ಅಸ್ಯಾಮ್ । ತಾಮ್ । ಅಹಮ್ । ಪ್ರೇತಿ । ಪದ್ಯೇ । ಸಾ । ಮೇ । ಶರ್ಮ । ಚ । ವರ್ಮ । ಚ । ಅಸ್ತು । ದ್ಯೌಃ । ಅಪರಾಜಿತೇತ್ಯಪರಾ–ಜಿತಾ । ಅಮೃತೇನ । ವಿಷ್ಟಾ । ಅದಿತ್ಯಾಃ । ತೇ ।

---

| ಮಂತ್ರ | ವಿನಿಯೋಗ |
|---|---|
| ದ್ಯೌರಪರಾಜಿತಾ...ಚಾಸ್ತು ॥ | ತೃತೀಯಚಿತಿಯ ಮಂಡಲೇಷ್ಟಕೋಪಧಾನಕ್ಕಾಗಿ. |

---

**ಗೋಪ್ತಾರಃ**=ರಕ್ಷಕರು; **ಅಸ್ಯಾಮ್**=ಈ ಅಂತರಿಕ್ಷದ ರಕ್ಷಣೆಯ ವಿಷಯದಲ್ಲಿ; **ವಾಯುಃ**=ಮುಖ್ಯವಾಯುವು; **ವಿಯತ್ತಃ**=ವಿಶೇಷವಾಗಿ ಪ್ರಯತ್ನಶೀಲನಾಗಿರುತ್ತಾನೆ; **ತಾಮ್**=ಅಂತಹ; ತ್ವಾಮ್=ನಿನ್ನನ್ನು; **ಅಹಮ್**=ಯಜಮಾನನಾದ ನಾನು; ಪ್ರಪದ್ಯೇ=ಆಶ್ರಯಿಸುತ್ತೇನೆ. **ಸಾ**=ಆ ಅಂತರಿಕ್ಷರೂಪವಾದ ಇಷ್ಟಕೆಯು; **ಮೇ**=ನನಗೆ; **ಶರ್ಮ ಚ**=ಗೃಹಸ್ಥಾನವೂ; **ವರ್ಮ ಚ ಅಸ್ತು**=ಕವಚರೂಪವೂ ಆಗಲಿ. 🔔 [ಹೇ! ಮಂಡಲೇಷ್ಟಕೆಯೇ!] **ಅಮೃತೇನ ವಿಷ್ಟಾ**=ಅಮೃತದಿಂದ ಪೂರ್ಣವಾದ; **ಅಪರಾಜಿತಾ**=ಯಾರಿಂದಲೂ ಜಯಿಸಲಾಗದ; **ದ್ಯೌಃ**=ದ್ಯುಲೋಕವು; [ನಿನ್ನ ಪುರರೂಪವಾಗಿದೆ]. **ತೇ**=ದ್ಯುಲೋಕರೂಪವಾದ ನಿನಗೆ; **ಆದಿತ್ಯಾಃ**=ದ್ವಾದಶಾದಿತ್ಯರು;

---

ಅನ್ನದಿಂದಲೂ, ಜಲದಿಂದಲೂ ಪೂರ್ಣವಾದ ಪೃಥಿವಿಯು ಪುರವಾಗಿದೆ. ಮಂಡಲೇಷ್ಟಕೆಯು ಪೃಥಿವೀರೂಪವಾಗಿದೆ. ಮನುಷ್ಯರು ಇದರ ರಕ್ಷಕರು. ಅಗ್ನಿಯು ವಿಶೇಷರಕ್ಷಕನು. ಆ ಇಷ್ಟಕೆಯನ್ನು ಯಜಮಾನನಾದ ನಾನು ಆಶ್ರಯಿಸುತ್ತೇನೆ. ಅವಳು ನನಗೆ ಗೃಹರೂಪವೂ, ಕವಚರೂಪವೂ ಆಗಲಿ.

ಗೋಪ್ತಾರಸ್ಸೂರ್ಯೋ ವಿಯತ್ತೋಽಸ್ಯಾಂ ತಾಮಹಂ

ಪ್ರಪದ್ಯೇ ಸಾ ಮೇ ಶರ್ಮ ಚ ವರ್ಮ ಚಾಸ್ತು ॥ ೧೯-5 ॥

[ಸಾಽಷ್ಟಾಚತ್ವಾರಿಗ್ಂಶಚ್ಚ ॥]

---

ಗೋಪ್ತಾರಃ । ಸೂರ್ಯಃ । ವಿಯತ್ತ ಇತಿ ವಿ-ಯತ್ತಃ । ಅಸ್ಯಾಮ್ । ತಾಮ್ ।

ಅಹಮ್ । ಪ್ರೇತಿ । ಪದ್ಯೇ । ಸಾ । ಮೇ । ಶರ್ಮ । ಚ । ವರ್ಮ । ಚ । ಅಸ್ತು ॥ ೧೯ ॥

---

**ಗೋಪ್ತಾರಃ**=ರಕ್ಷಕರಾಗಿರುತ್ತಾರೆ. **ಅಸ್ಯಾಮ್**=ಈ ದ್ಯುಲೋಕದ ರಕ್ಷಣೆಯ ವಿಷಯದಲ್ಲಿ; **ಸೂರ್ಯಃ**=ಆದಿತ್ಯರಲ್ಲಿ ಮುಖ್ಯನಾದ ಸೂರ್ಯನು; **ವಿಯತ್ತಃ**=ವಿಶೇಷ ಪ್ರಯತ್ನಶೀಲನಾಗಿರುತ್ತಾನೆ; **ತಾಮ್**=ಅಂತಹ; ತ್ವಾಮ್=ನಿನ್ನನ್ನು; **ಅಹಮ್**=ಯಜಮಾನನಾದ ನಾನು; ಪ್ರಪದ್ಯೇ=ಆಶ್ರಯಿಸುತ್ತೇನೆ. **ಸಾ**=ಆ ದ್ಯುಲೋಕರೂಪವಾದ ಇಷ್ಟಕೆಯು; **ಮೇ**=ನನಗೆ; **ಶರ್ಮ ಚ**=ಗೃಹಸ್ಥಾನವೂ; **ವರ್ಮ ಚ**=ಕವಚರೂಪವೂ; **ಅಸ್ತು**=ಆಗಲಿ.

---

ಪ್ರೌಢರಿಂದ ಪೂರ್ಣವಾದ ಅಂತರಿಕ್ಷವು ಪುರವಾಗಿದೆ. ಮಂಡಲೇಷ್ಟಕೆಯು ಅಂತರಿಕ್ಷರೂಪವಾಗಿದೆ. ಮರುದ್ದೇವತೆಗಳು ಇದರ ರಕ್ಷಕರು. ವಾಯುವು ವಿಶೇಷ ರಕ್ಷಕನು. ಆ ಇಷ್ಟಕೆಯನ್ನು ಯಜಮಾನನಾದ ನಾನು ಆಶ್ರಯಿಸುತ್ತೇನೆ. ಅವಳು ನನಗೆ ಗೃಹ ರೂಪವೂ, ಕವಚರೂಪವೂ ಆಗಲಿ.

ಅಮೃತಪೂರ್ಣವಾದ ದ್ಯುಲೋಕವು ಯಾರಿಂದಲೂ ಜಯಿಸಲಾಗದುದು. ಅದು ಇಷ್ಟಕೆಯ ಪುರರೂಪವಾಗಿದೆ. ಆದಿತ್ಯರು ಇದರ ರಕ್ಷಕರು. ಸೂರ್ಯನು ಮುಖ್ಯ ರಕ್ಷಕನು. ಇಂತಹ ಇಷ್ಟಕೆಯನ್ನು ಯಜಮಾನನಾದ ನಾನು ಆಶ್ರಯಿಸುತ್ತೇನೆ.

ಆ ಇಷ್ಟಕೆಯು ನನಗೆ ಗೃಹರೂಪವೂ, ಕವಚರೂಪವೂ ಆಗಲಿ.

---

## ವಿನಿಯೋಗಸಂಗ್ರಹ

1-7 ಇಂದ್ರೇತಿ ಸಯುಜಸ್ತ್ವಷ್ಟಾವಾಘಾರಾದಿ ಪದೇಷ್ವಪಿ ।
ಅನುಷಂಗಸ್ತ್ವೇತಿ ತಥಾ ರಯ್ಯಾ[8] ಇತ್ಯಷ್ಟಮೋ ಮತಃ ॥
9-15 ಅಂಬೇತಿ ಕೃತ್ತಿಕಾಃ ಸಪ್ತ ನಾಮಾಸೀತ್ಯನುಷಜ್ಯತೇ ।
16-18 ಪೃಥಿ ತ್ರಿಭಿರ್ಮಂಡಲಾಖ್ಯಾ ಮಂತ್ರಾ ಅಷ್ಟಾದಶೇರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–18

## ॥ ಷಷ್ಠೋಽನುವಾಕಃ ॥

ಬೃಹಸ್ಪತಿಸ್ತ್ವಾ ಸಾದಯತು ಪೃಥಿವ್ಯಾಃ ಪೃಷ್ಠೇ
ಜ್ಯೋತಿಷ್ಮತೀಂ ವಿಶ್ವಸ್ಮೈ ಪ್ರಾಣಾಯಾಪಾನಾಯ

---

ಬೃಹಸ್ಪತಿಃ । ತ್ವಾ । ಸಾದಯತು । ಪೃಥಿವ್ಯಾಃ । ಪೃಷ್ಠೇ । ಜ್ಯೋತಿಷ್ಮತೀಮ್ । ವಿಶ್ವಸ್ಮೈ । ಪ್ರಾಣಾಯೇತಿ ಪ್ರ–ಅನಾಯ । ಅಪಾನಾಯೇತ್ಯಪ–ಅನಾಯ ।

---

ಐದನೆಯ ಅನುವಾಕದಲ್ಲಿ ಸಯುಜಾದೀಷ್ಟಕೆಗಳು ಉಕ್ತವಾಗಿವೆ. ಈ ಆರನೆಯ ಅನುವಾಕದಲ್ಲಿ ವಿಶ್ವಜ್ಯೋತಿಯೇ ಮುಂತಾದ ಇಷ್ಟಕೆಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
|---|---|
| ಬೃಹಸ್ಪತಿಸ್ತ್ವಾ...ಅಗ್ನಿಸ್ತೇಽಧಿಪತಿಃ ॥ | ಪ್ರಥಮಚಿತಿಯ ವಿಶ್ವಜ್ಯೋತೀಷ್ಟಕೆಯ ಉಪಧಾನಕ್ಕಾಗಿ. |

---

[ಇಷ್ಟಕೆಯೇ!] ಬೃಹಸ್ಪತಿಃ=ಬೃಹಸ್ಪತಿದೇವನು; ಪೃಥಿವ್ಯಾಃ ಪೃಷ್ಠೇ=ಭೂಮಿಯ ಮೇಲ್ಭಾಗದಲ್ಲಿ; ಜ್ಯೋತಿಷ್ಮತೀಮ್=ಪ್ರಕಾಶವತಿಯಾದ; ತ್ವಾ=ನಿನ್ನನ್ನು; ವಿಶ್ವಸ್ಮೈ ಪ್ರಾಣಾಯ=ಸಮಸ್ತಪ್ರಾಣಿಗಳ ಪ್ರಾಣವೃತ್ತಿಗಾಗಿಯೂ; ಅಪಾನಾಯ=ಅಪಾನವೃತ್ತಿಗಾಗಿಯೂ; ಸಾದಯತು=ಸ್ಥಾಪಿಸಲಿ.

---

ಹೇ! ಇಷ್ಟಕೆಯೇ! ಬೃಹಸ್ಪತಿದೇವನು ಜ್ಯೋತಿಷ್ಮತಿಯಾದ ಇಷ್ಟಕೆಯನ್ನು ಭೂಮಿಯ ಮೇಲೆ ಉಪಧಾನ ಮಾಡಲಿ. ಇದರಿಂದ ಸಮಸ್ತ ಪ್ರಾಣಿಗಳ ಪ್ರಾಣಾಪಾನ ವೃತ್ತಿಗಳು ಸರಿಯಾಗಿರಲಿ. ನೀನು ಸ್ವರ್ಗಕ್ಕೆ ಪ್ರಕಾಶಕವಾದ ಜ್ಯೋತಿಸ್ಸನ್ನು ನಿಯಮಿಸು. ಅಗ್ನಿಯು ನಿನ್ನ ಒಡೆಯನು.

ವಿಶ್ವಂ ಜ್ಯೋತಿರ್ಯಚ್ಛಾಗ್ನಿಸ್ತೇಽಧಿಪತಿರ್ವಿಶ್ವಕರ್ಮಾ ತ್ವಾ ಸಾದಯತ್ವಂತರಿಕ್ಷಸ್ಯ ಪೃಷ್ಠೇ ಜ್ಯೋತಿಷ್ಮತೀಂ ವಿಶ್ವಸ್ಮೈ ಪ್ರಾಣಾಯಾಪಾನಾಯ ವಿಶ್ವಂ ಜ್ಯೋತಿರ್ಯಚ್ಛ ವಾಯುಸ್ತೇಽಧಿಪತಿಃ

---

ವಿಶ್ವಮ್ । ಜ್ಯೋತಿಃ । ಯಚ್ಛ । ಅಗ್ನಿಃ । ತೇ । ಅಧಿಪತಿರಿತ್ಯಧಿ-ಪತಿಃ । ವಿಶ್ವಕರ್ಮೇತಿ ವಿಶ್ವ-ಕರ್ಮಾ । ತ್ವಾ । ಸಾದಯತು । ಅಂತರಿಕ್ಷಸ್ಯ । ಪೃಷ್ಠೇ । ಜ್ಯೋತಿಷ್ಮತೀಮ್ । ವಿಶ್ವಸ್ಮೈ । ಪ್ರಾಣಾಯೇತಿ ಪ್ರ-ಅನಾಯ । ಅಪಾನಾಯೇತ್ಯಪ-ಅನಾಯ । ವಿಶ್ವಮ್ । ಜ್ಯೋತಿಃ । ಯಚ್ಛ । ವಾಯುಃ । ತೇ । ಅಧಿಪತಿರಿತ್ಯಧಿ-ಪತಿಃ ।

---

| ಮಂತ್ರ | ವಿನಿಯೋಗ |
| --- | --- |
| ವಿಶ್ವಕರ್ಮಾ...ವಾಯುಸ್ತೇಽಧಿಪತಿಃ ॥ | ಮಧ್ಯಮಚಿತಿಯ ವಿಶ್ವಜ್ಯೋತೀಷ್ಟಕೆಯ ಉಪಧಾನಕ್ಕಾಗಿ. |

---

ವಿಶ್ವಮ್=ಸಮಸ್ತಸ್ವರ್ಗಪ್ರಕಾಶಕವಾದ; ಜ್ಯೋತಿಃ=ಜ್ಯೋತಿಸ್ಸನ್ನು; ಯಚ್ಛ= ನಿಯಮಿಸು/ನನಗೆ ಕೊಡು; ತೇ=ನಿನಗೆ; ಅಗ್ನಿಃ=ಅಗ್ನಿಯು; ಅಧಿಪತಿಃ=ಅಧಿಪತಿ ಯಾಗಿರುತ್ತಾನೆ. ▲ ವಿಶ್ವಕರ್ಮಾ=ವಿಶ್ವಕರ್ಮದೇವನು; ಜ್ಯೋತಿಷ್ಮತೀಮ್ ತ್ವಾ= ಪ್ರಕಾಶವತಿಯಾದ ನಿನ್ನನ್ನು; ಅಂತರಿಕ್ಷಸ್ಯ=ಅಂತರಿಕ್ಷದ; ಪೃಷ್ಠೇ=ಮೇಲ್ಭಾಗದಲ್ಲಿ; ವಿಶ್ವಸ್ಮೈ ಪ್ರಾಣಾಯ=ಸಮಸ್ತಪ್ರಾಣಿಗಳ ಪ್ರಾಣವೃತ್ತಿಗಾಗಿಯೂ; ಅಪಾನಾಯ= ಅಪಾನವೃತ್ತಿಗಾಗಿಯೂ; ಸಾದಯತು=ಸ್ಥಾಪಿಸಲಿ. ವಿಶ್ವಮ್=ಸಮಸ್ತಸ್ವರ್ಗಪ್ರಕಾಶ ಕವಾದ; ಜ್ಯೋತಿಃ=ಜ್ಯೋತಿಯನ್ನು; ಯಚ್ಛ=ನಿಯಮಿಸು/ಕೊಡು; ತೇ=ನಿನಗೆ; ವಾಯುಃ ಅಧಿಪತಿಃ=ವಾಯುವು ಒಡೆಯನಾಗಿದ್ದಾನೆ.

**ಪ್ರಜಾಪತಿಸ್ತ್ವಾ ಸಾದಯತು ದಿವಃ ಪೃಷ್ಠೇ ಜ್ಯೋತಿಷ್ಮತೀಂ ವಿಶ್ವಸ್ಮೈ ಪ್ರಾಣಾಯಾಪಾನಾಯ ವಿಶ್ವಂ ಜ್ಯೋತಿರ್ಯಚ್ಛ ಪರಮೇಷ್ಠೀ ತೇಽಧಿಪತಿಃ**

---

ಪ್ರಜಾಪತಿರಿತಿ ಪ್ರಜಾ-ಪತಿಃ । ತ್ವಾ । ಸಾದಯತು । ದಿವಃ । ಪೃಷ್ಠೇ । ಜ್ಯೋತಿಷ್ಮತೀಮ್ । ವಿಶ್ವಸ್ಮೈ । ಪ್ರಾಣಾಯೇತಿ ಪ್ರ-ಅನಾಯ । ಅಪಾನಾಯೇತ್ಯಪ-ಅನಾಯ । ವಿಶ್ವಮ್ । ಜ್ಯೋತಿಃ । ಯಚ್ಛ । ಪರಮೇಷ್ಠೀ । ತೇ । ಅಧಿಪತಿರಿತ್ಯಧಿ-ಪತಿಃ ।

---

| ಮಂತ್ರ | ವಿನಿಯೋಗ |
| --- | --- |
| **ಪ್ರಜಾಪತಿಃ...ಪರಮೇಷ್ಠೀ ತೇಽಧಿಪತಿಃ** ॥ | ಉತ್ತಮಚಿತಿಯಲ್ಲಿ ವಿಶ್ವಜ್ಯೋತೀಷ್ಟಕೆಯ ಉಪಧಾನಕ್ಕಾಗಿ. |

---

🔔 ಪ್ರಜಾಪತಿಃ=ಪ್ರಜಾಪತಿದೇವನು; **ಜ್ಯೋತಿಷ್ಮತೀಮ್**=ಪ್ರಕಾಶವತಿಯಾದ; **ತ್ವಾ**=ನಿನ್ನನ್ನು/ಇಷ್ಟಕೆಯನ್ನು; **ದಿವಃ ಪೃಷ್ಠೇ**=ದ್ಯುಲೋಕದ ಮೇಲೆ; **ವಿಶ್ವಸ್ಮೈ ಪ್ರಾಣಾಯ ಅಪಾನಾಯ**=ಸಕಲಪ್ರಾಣಿಗಳ ಪ್ರಾಣಾಪಾನವೃತ್ತಿಗಾಗಿ; **ಸಾದಯತು**= ಉಪಧಾನ ಮಾಡಲಿ; **ವಿಶ್ವಮ್ ಜ್ಯೋತಿಃ ಯಚ್ಛ**=ಸಮಸ್ತಸ್ವರ್ಗಪ್ರಕಾಶಕವಾದ ಜ್ಯೋತಿಯನ್ನು ನಿಯಮಿಸು/ಅನುಗ್ರಹಿಸು; **ತೇ**=ನಿನಗೆ; **ಪರಮೇಷ್ಠೀ ಅಧಿಪತಿಃ**= ಶ್ರೇಷ್ಠಸ್ಥಾನದಲ್ಲಿರುವ ಬ್ರಹ್ಮದೇವನು ಅಧಿಪತಿಯಾಗಿರುತ್ತಾನೆ.

---

**ಈ ಮೂರು ವಿಶ್ವಜ್ಯೋತೀಷ್ಟಕೆಗಳು ಪ್ರಥಮ, ಮಧ್ಯಮ ಮತ್ತು ಉತ್ತಮ ಚಿತಿಗಳಲ್ಲಿ ಕ್ರಮವಾಗಿ ಉಪಧಾನ ಮಾಡಬೇಕಾದವುಗಳಾಗಿವೆ.**

**ಹೇ! ಮಧ್ಯಮಚಿತಿಯ ವಿಶ್ವಜ್ಯೋತೀಷ್ಟಕೆಯೇ! ವಿಶ್ವಕರ್ಮದೇವನು ನಿನ್ನನ್ನು ಸರ್ವಪ್ರಾಣಿಗಳ ಪ್ರಾಣಾಪಾನವೃತ್ತಿಗಾಗಿ ಅಂತರಿಕ್ಷದ ಮೇಲ್ಭಾಗದಲ್ಲಿ ಸ್ಥಾಪಿಸಲಿ. ಸ್ವರ್ಗಪ್ರಕಾಶಕವಾದ ಕಾಂತಿಯನ್ನು ನೀನು ಕೊಡು. ವಾಯುವು ನಿನ್ನ ಒಡೆಯನು.**

ಪುರೋವಾತಸನಿರಸ್ಯಭ್ರಸನಿರಸಿ ವಿದ್ಯುತ್ಸನಿ [ತ್ಸನಿಃ (೨೦)

ಅಸಿ ಸ್ತನಯಿತ್ನು] ರಸಿ ಸ್ತನಯಿತ್ನುಸನಿರಸಿ ವೃಷ್ಟಿಸನಿರಸ್ಯ-

---

ಪುರೋವಾತಸನಿರಿತಿ ಪುರೋವಾತ-ಸನಿಃ । ಅಸಿ । ಅಭ್ರಸನಿರಿತ್ಯಭ್ರ-ಸನಿಃ । ಅಸಿ । ವಿದ್ಯುತ್ಸನಿರಿತಿ ವಿದ್ಯುತ್-ಸನಿಃ । (೨೦) । ಅಸಿ । ಸ್ತನಯಿತ್ನುಸನಿರಿತಿ ಸ್ತನಯಿತ್ನು-ಸನಿಃ । ಅಸಿ । ವೃಷ್ಟಿಸನಿರಿತಿ ವೃಷ್ಟಿ-ಸನಿಃ । ಅಸಿ ।

---

| ಮಂತ್ರ | ವಿನಿಯೋಗ |
|---|---|
| ಪುರೋವಾತಸನಿರಸಿ ॥ | ಮೊದಲನೆಯ ವೃಷ್ಟಿಸನೀಷ್ಟಕೆಯ ಉಪಧಾನಕ್ಕಾಗಿ. |
| ಅಭ್ರಸನಿರಸಿ ॥ | ಎರಡನೆಯ ವೃಷ್ಟಿಸನೀಷ್ಟಕೋಪಧಾನಕ್ಕಾಗಿ. |
| ವಿದ್ಯುತ್ಸನಿರಸಿ ॥ | ಮೂರನೆಯ ವೃಷ್ಟಿಸನೀಷ್ಟಕೋಪಧಾನಕ್ಕಾಗಿ. |
| ಸ್ತನಯಿತ್ನುಸನಿರಸಿ ॥ | ನಾಲ್ಕನೆಯ ವೃಷ್ಟಿಸನೀಷ್ಟಕೋಪಧಾನಕ್ಕಾಗಿ. |
| ವೃಷ್ಟಿಸನಿರಸಿ ॥ | ಐದನೆಯ ವೃಷ್ಟಿಸನೀಷ್ಟಕೋಪಧಾನಕ್ಕಾಗಿ. |

---

▲ ಎಲೈ! ಇಷ್ಟಕೆಯೇ! **ಪುರೋವಾತಸನಿಃ ಅಸಿ**=[ನೀನು] ಮಳೆಯ ಗಾಳಿಯನ್ನು ತಂದು ಕೊಡುವವಳಾಗಿರುವೆ. ತ್ವಾ ಉಪದಧಾಮಿ=ನಿನ್ನನ್ನು ಉಪಧಾನ ಮಾಡುತ್ತೇನೆ. ▲ **ಅಭ್ರಸನಿಃ ಅಸಿ**=ನೀನು ಮೋಡವನ್ನು ಕೊಡುವವಳು; [ನಿನ್ನನ್ನು ಉಪಧಾನ ಮಾಡುತ್ತೇನೆ.] ▲ **ವಿದ್ಯುತ್ಸನಿಃ ಅಸಿ**=[ನೀನು] ಮಿಂಚನ್ನು ಉಂಟುಮಾಡುತ್ತೀಯೆ; [ನಿನ್ನನ್ನು ಉಪಧಾನ ಮಾಡುತ್ತೇನೆ.] ▲ **ಸ್ತನಯಿತ್ನುಸನಿಃ ಅಸಿ**=ಗುಡುಗನ್ನು ಉಂಟು ಮಾಡುವವಳು ನೀನು; [ನಿನ್ನನ್ನು ಉಪಧಾನ ಮಾಡುತ್ತೇನೆ.] ▲ **ವೃಷ್ಟಿಸನಿಃ ಅಸಿ**= [ನೀನು] ಮಳೆಯನ್ನು ಕೊಡತಕ್ಕವಳು. [ನಿನ್ನನ್ನು ಉಪಧಾನ ಮಾಡುತ್ತೇನೆ.]

---

ಎಲೈ! ಮೂರನೆಯ ವಿಶ್ವಜ್ಯೋತೀಷ್ಟಕೆಯೇ! ಪ್ರಜಾಪತಿದೇವನು ನಿನ್ನನ್ನು ಸಮಸ್ತಪ್ರಾಣಿಗಳ ಪ್ರಾಣಾಪಾನವೃತ್ತಿಗಾಗಿ ದ್ಯುಲೋಕದ ಮೇಲೆ ಸ್ಥಾಪಿಸಲಿ. ನೀನು

–ಗ್ನೇರ್ಯಾನ್ಯಸಿ ದೇವಾನಾಮಗ್ನೇಯಾನ್ಯಸಿ ವಾಯೋ

ರ್ಯಾನ್ಯಸಿ ದೇವಾನಾಂ ವಾಯೋಯಾನ್ಯಸ್ಯಂತರಿಕ್ಷಸ್ಯ

ಯಾನ್ಯಸಿ

---

ಅಗ್ನೇಃ । ಯಾನೀ । ಅಸಿ । ದೇವಾನಾಮ್ । ಅಗ್ನೇಯಾನೀತ್ಯಗ್ನೇ–ಯಾನೀ । ಅಸಿ ।

ವಾಯೋಃ । ಯಾನೀ । ಅಸಿ । ದೇವಾನಾಮ್ । ವಾಯೋಯಾನೀತಿ ವಾಯೋ–

ಯಾನೀ । ಅಸಿ । ಅಂತರಿಕ್ಷಸ್ಯ । ಯಾನೀ । ಅಸಿ ।

---

| ಮಂತ್ರ | ವಿನಿಯೋಗ |
|---|---|
| ಅಗ್ನೇರ್ಯಾನ್ಯಸಿ ದೇವಾನಾ ಮಗ್ನೇಯಾನ್ಯಸಿ ॥ | ಮೊದಲಿನ ಎರಡು ಸಂಯಾನೀಷ್ಟಕೋಪಧಾನಕ್ಕಾಗಿ. |
| ವಾಯೋರ್ಯಾನ್ಯಸಿ ದೇವಾನಾಂ ವಾಯೋ ಯಾನ್ಯಸಿ ॥ | ಪುನಃ ಎರಡು ಸಂಯಾನೀಷ್ಟಕೋಪಧಾನಕ್ಕಾಗಿ. |
| ಅಂತರಿಕ್ಷಸ್ಯ ಯಾನ್ಯಸಿ | ಪುನಃ ಎರಡು ಸಂಯಾನೀಷ್ಟಕೋಪಧಾನಕ್ಕಾಗಿ. |

---

▲ [ಹೇ! ಇಷ್ಟಕೆಯೇ!] [ನೀನು] **ಅಗ್ನೇಃ**=[ಚಯನ ಮಾಡಲ್ಪಡುತ್ತಿರುವ] ಅಗ್ನಿಯನ್ನು; **ಯಾನೀ ಅಸಿ**=ಹೊಂದಿಸಿಕೊಡುವವಳಾಗಿರುವೆ. ▲ **ದೇವಾನಾಮ್**=ದೇವತೆಗಳಿಗೆ; **ಅಗ್ನೇಯಾನೀ ಅಸಿ**=ಅಗ್ನಿಪ್ರಾಪಿಕೆಯೂ ಆಗಿರುತ್ತೀಯೆ. ▲ [ಹೇ! ಇಷ್ಟಕೆಯೇ! ನೀನು] **ವಾಯೋಃ**=ವಾಯುವಿನ; **ಯಾನೀ ಅಸಿ**=ಪ್ರಾಪಿಕೆಯಾಗಿರುತ್ತೀಯೆ. **ದೇವಾನಾಮ್**=ದೇವತೆಗಳಿಗೆ; **ವಾಯೋಯಾನೀ ಅಸಿ**=ವಾಯುವನ್ನು ಹೊಂದಿಸಿ ಕೊಡುವವಳಾಗಿರುತ್ತೀಯೆ. ▲ [ಹೇ! ಸಂಯಾನೀಷ್ಟಕೆಯೇ! ನೀನು] **ಅಂತರಿಕ್ಷಸ್ಯ**=[ಯಜಮಾನನಿಗೆ] ಅಂತರಿಕ್ಷಲೋಕವನ್ನು; **ಯಾನೀ ಅಸಿ**=ಹೊಂದಿಸಿಕೊಡುವವಳಾಗಿದ್ದೀಯೆ.

ದೇವಾನಾಮಂತರಿಕ್ಷಯಾನ್ಯಸ್ಯಂತರಿಕ್ಷಮಸ್ಯಂತರಿಕ್ಷಾಯ ತ್ವಾ

ದೇವಾನಾಮ್ । ಅಂತರಿಕ್ಷಯಾನೀತ್ಯಂತರಿಕ್ಷ–ಯಾನೀ । ಅಸಿ । ಅಂತರಿಕ್ಷಮ್ । ಅಸಿ । ಅಂತರಿಕ್ಷಾಯ । ತ್ವಾ ।

| ಮಂತ್ರ | ವಿನಿಯೋಗ |
| --- | --- |
| **ದೇವಾನಾಮಂತರಿಕ್ಷಯಾನ್ಯಸಿ ॥** | |
| **ಅಂತರಿಕ್ಷಮಸಿ ॥** | ಪುನಃ ಎರಡು ಸಂಯಾನೀಷ್ಟಕೋಪಧಾನಕ್ಕಾಗಿ. |
| **ಅಂತರಿಕ್ಷಾಯ ತ್ವಾ ॥** | |

▲ ದೇವಾನಾಮ್=[ಇಷ್ಟಕೆಯೇ!] [ನೀನು] ದೇವತೆಗಳಿಗೆ; **ಅಂತರಿಕ್ಷಯಾನೀ ಅಸಿ**=ಅಂತರಿಕ್ಷಲೋಕವನ್ನು ಹೊಂದಿಸಿಕೊಡುವವಳಾಗಿದ್ದೀಯೆ. ▲ **ಅಂತರಿಕ್ಷಮ್ ಅಸಿ**=[ಹೇ! ಇಷ್ಟಕೆಯೇ!] ನೀನು ಅಂತರಿಕ್ಷಸ್ವರೂಪಳಾಗಿದ್ದೀಯೆ. ▲ **ಅಂತರಿಕ್ಷಾಯ** =ಅಂತರಿಕ್ಷಲೋಕದ ಪ್ರಾಪ್ತಿಗಾಗಿ/ಅಂತರಿಕ್ಷದ ಪ್ರೀತಿಗಾಗಿ; **ತ್ವಾ**=ನಿನ್ನನ್ನು; [ಉಪಧಾನ ಮಾಡುತ್ತೇನೆ].

**ಸ್ವರ್ಗಪ್ರಕಾಶಕವಾದ ಜ್ಯೋತಿಯನ್ನು ನೀಡು. ನಿನಗೆ ಬ್ರಹ್ಮದೇವನು ಅಧಿಪತಿಯಾಗಿರುವನು. ಇಂತಹ ನೀವು [ಇಷ್ಟಕೆಗಳು] ನಮ್ಮನ್ನು ಅನುಗ್ರಹಿಸಿರಿ.**

**ಈ ವೃಷ್ಟಿಸನೀಷ್ಟಕೆಗಳು ಐದು. ಮೋಡಗಳಿಗೆ ಕಾರಣವಾದ ಮಳೆಯ ಗಾಳಿ [ಪುರೋವಾತ]ಯು ಮೊದಲು ಉಂಟಾಗುತ್ತದೆ. ಆ ಮೇಲೆ ಮೋಡಗಳು ಒಟ್ಟುಗೂಡುತ್ತವೆ. ಮಿಂಚು ಉಂಟಾಗುತ್ತದೆ. ಮೋಡವು ಗುಡುಗುತ್ತದೆ. ಬಳಿಕ ಮಳೆಯಾಗುತ್ತದೆ. ಈ ವೃಷ್ಟಿಸನೀಷ್ಟಕೆಗಳ ಉಪಧಾನವು ಮಳೆಗೆ ಕಾರಣವಾಗುತ್ತದೆ. ಪುರೋವಾತ, ಮೋಡ, ಮಿಂಚು, ಗುಡುಗು ಮತ್ತು ಮಳೆ–ಈ ಐದು ಮಳೆಯ ರೂಪ. ಮಳೆಯ ರೂಪವನ್ನು ಹೇಳುವ ಮಂತ್ರದಿಂದ ಮಳೆಯು ಉಂಟಾಗುವುದು.**

**ಇವು ಮೊದಲಿನ ಎರಡು ಸಂಯಾನೀಷ್ಟಕೆಗಳ ಮಂತ್ರಗಳು. ಯಾನೀಶಬ್ದದಿಂದ ಕೂಡಿದ ಮಂತ್ರಗಳಿಂದ ಉಪಧಾನ ಮಾಡುವ ಇಷ್ಟಕೆಗಳಾದುದರಿಂದ ಈ ಇಷ್ಟಕೆಗಳಿಗೆ ಸಂಯಾನೀಷ್ಟಕೆಗಳೆಂದು ಹೆಸರು.**

## ಸಲಿಲಾಯ ತ್ವಾ ಸರ್ಣೀಕಾಯ ತ್ವಾ ಸತೀಕಾಯ ತ್ವಾ ಕೇತಾಯ ತ್ವಾ

---

ಸಲಿಲಾಯ । ತ್ವಾ । ಸರ್ಣೀಕಾಯ । ತ್ವಾ । ಸತೀಕಾಯೇತಿ ಸ-ತೀಕಾಯ । ತ್ವಾ । ಕೇತಾಯ । ತ್ವಾ ।

---

| ಮಂತ್ರ | ವಿನಿಯೋಗ |
|---|---|
| ಸಲಿಲಾಯ ತ್ವಾ ॥ | ಮೊದಲನೆಯ *ಆದಿತ್ಯೇಷ್ಟಕೋಪಧಾನಕ್ಕಾಗಿ. |
| ಸರ್ಣೀಕಾಯ ತ್ವಾ ॥ | ಎರಡನೆಯ ಆದಿತ್ಯೇಷ್ಟಕೋಪಧಾನಕ್ಕಾಗಿ. |
| ಸತೀಕಾಯ ತ್ವಾ ॥ | ಮೂರನೆಯ ಆದಿತ್ಯೇಷ್ಟಕೋಪಧಾನಕ್ಕಾಗಿ. |
| ಕೇತಾಯ ತ್ವಾ ॥ | ನಾಲ್ಕನೆಯ ಆದಿತ್ಯೇಷ್ಟಕೋಪಧಾನಕ್ಕಾಗಿ. |

---

▲ [ಹೇ ಆದಿತ್ಯೇಷ್ಟಕೆಯೇ!] ತ್ವಾ=ನಿನ್ನನ್ನು; ಸಲಿಲಾಯ=ಆಳವಾದ ನೀರಿನ ಸಿದ್ಧಿಗಾಗಿ [ಉಪಧಾನ ಮಾಡುತ್ತೇನೆ]. ▲ ಸರ್ಣೀಕಾಯ ತ್ವಾ=ನಿನ್ನನ್ನು ಹರಿಯುವ ನೀರಿನ ಸಿದ್ಧಿಗಾಗಿ [ಉಪಧಾನ ಮಾಡುತ್ತೇನೆ]. ▲ ಸತೀಕಾಯ ತ್ವಾ=ನಿನ್ನನ್ನು ನಿಂತಿರುವ ನೀರಿನ ಸಿದ್ಧಿಗಾಗಿ [ಉಪಧಾನ ಮಾಡುತ್ತೇನೆ]. ▲ ಕೇತಾಯ ತ್ವಾ=ನಿನ್ನನ್ನು ಸಾಮಾನ್ಯಜ್ಞಾನಸಿದ್ಧಿಗಾಗಿ [ಉಪಧಾನ ಮಾಡುತ್ತೇನೆ].

---

ಹೇ! ಸಂಯಾನೀಷ್ಟಕೆಯೇ! ನೀನು ಚಯನ ಮಾಡಲ್ಪಡುತ್ತಿರುವ ಅಗ್ನಿಯನ್ನು ಹೊಂದಿಸಿಕೊಡುವವಳಾಗಿದ್ದೀಯೆ. ಅಲ್ಲದೆ ದೇವತೆಗಳಿಗೆ ಅಗ್ನಿಯನ್ನು ಹೊಂದಿಸಿಕೊಡುವೆ. ಹೀಗೆಯೇ ವಾಯುವನ್ನೂ, ವಾಯುವನ್ನು ದೇವತೆಗಳಿಗೆ ಹೊಂದಿಸಿಕೊಡುವ ಎರಡು ಸಂಯಾನೀಷ್ಟಕೆಗಳ ಸ್ತುತಿ.

---

* ಆದಿತ್ಯಶಬ್ದದಿಂದ ಕೂಡಿರುವ ಮಂತ್ರಗಳಿಂದ ಉಪಧಾನ ಮಾಡುವ ಇಷ್ಟಕೆಗಳು ಆದಿತ್ಯೇಷ್ಟಕೆಗಳು. **ಆದಿತ್ಯೇಭ್ಯಃ** ಎಂಬುದನ್ನು ಪ್ರತಿಮಂತ್ರದಲ್ಲಿಯೂ ಅನುಷಂಗ ಮಾಡುವುದರಿಂದ ಅಥವಾ ಅಂತಿಮ ಮಂತ್ರದಲ್ಲಿರುವ **ಆದಿತ್ಯೇಭ್ಯಃ** ಎಂಬುದರ ಸಾಹಚರ್ಯದಿಂದ ಉಳಿದವುಗಳು ಆದಿತ್ಯೇಷ್ಟಕೆಗಳು.

# ಪ್ರಚೇತಸೇ ತ್ವಾ ವಿವಸ್ವತೇ ತ್ವಾ ದಿವಸ್ತ್ವಾ ಜ್ಯೋತಿಷ ಆದಿತ್ಯೇಭ್ಯಸ್ತ್ವರ್ಚೇ ತ್ವಾ

ಪ್ರಚೇತಸ ಇತಿ ಪ್ರ–ಚೇತಸೇ । ತ್ವಾ । ವಿವಸ್ವತೇ । ತ್ವಾ । ದಿವಃ । ತ್ವಾ । ಜ್ಯೋತಿಷೇ । ಆದಿತ್ಯೇಭ್ಯಃ । ತ್ವಾ । ಋಚೇ । ತ್ವಾ ।

| ಮಂತ್ರ | ವಿನಿಯೋಗ |
|---|---|
| ಪ್ರಚೇತಸೇ ತ್ವಾ ॥ | ಐದನೆಯ ಆದಿತ್ಯೇಷ್ಟಕೋಪಧಾನಕ್ಕಾಗಿ. |
| ವಿವಸ್ವತೇ ತ್ವಾ ॥ | ಆರನೆಯ ಆದಿತ್ಯೇಷ್ಟಕೋಪಧಾನಕ್ಕಾಗಿ. |
| ದಿವಸ್ತ್ವಾ ಜ್ಯೋತಿಷೇ ॥ | ಏಳನೆಯ ಆದಿತ್ಯೇಷ್ಟಕೋಪಧಾನಕ್ಕಾಗಿ. |
| ಆದಿತ್ಯೇಭ್ಯಸ್ತ್ವಾ ॥ | ಎಂಟನೆಯ ಆದಿತ್ಯೇಷ್ಟಕೋಪಧಾನಕ್ಕಾಗಿ. |
| ಋಚೇ ತ್ವಾ ॥ | ಮೊದಲನೆಯ ಘೃತೇಷ್ಟಕೋಪಧಾನಕ್ಕಾಗಿ. |

▲ ಪ್ರಚೇತಸೇ ತ್ವಾ=ವಿಶೇಷಜ್ಞಾನಸಿದ್ಧಿಗಾಗಿ ನಿನ್ನನ್ನು [ಇಲ್ಲಿ ಸ್ಥಾಪಿಸುತ್ತೇನೆ]. ▲ ವಿವಸ್ವತೇ ತ್ವಾ=ವಿಶೇಷವಾಸಕ್ಕೆ ಕಾರಣವಾದ ಆದಿತ್ಯಪ್ರಕಾಶಸಿದ್ಧಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]. ▲ ದಿವಃ ಜ್ಯೋತಿಷೇ=ದ್ಯುಲೋಕದಲ್ಲಿರುವ ನಕ್ಷತ್ರಾದಿ ಪ್ರಕಾಶಸಿದ್ಧಿಗಾಗಿ; ತ್ವಾ=ನಿನ್ನನ್ನು; [ಉಪಧಾನ ಮಾಡುತ್ತೇನೆ]. ▲ ಆದಿತ್ಯೇಭ್ಯಃ ತ್ವಾ=ದ್ವಾದಶಾದಿತ್ಯರ ಪ್ರೀತಿಗಾಗಿ ನಿನ್ನನ್ನು; [ಉಪಧಾನ ಮಾಡುತ್ತೇನೆ]. ▲ [ಹೇ! ಇಷ್ಟಕೆಯೇ!] ಋಚೇ ತ್ವಾ=ಋಙ್ಮಂತ್ರಗಳಿಂದ ಮಾಡುವ ಸ್ತುತಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ].

ಹೇ! ಎರಡು ಸಂಯಾನೀಷ್ಟಕೆಗಳೇ! ನೀವು ಯಜಮಾನನಿಗೆ ಅಂತರಿಕ್ಷ ಪ್ರಾಪ್ತಿಯನ್ನೂ, ದೇವತೆಗಳಿಗೆ ಅಂತರಿಕ್ಷಲೋಕವನ್ನು ಹೊಂದಿಸಿಕೊಡುವವರೂ ಆಗಿರುವಿರಿ. ನಿಮ್ಮನ್ನು ಉಪಧಾನ ಮಾಡುತ್ತೇನೆ.

'ಅಂತರಿಕ್ಷಮಸಿ' ಎಂಬ ಮಂತ್ರ ಮತ್ತು ಇದರ ಮುಂದಿನ ಮಂತ್ರದಲ್ಲಿ ಯಾನೀ

# ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ ಯಶೋದಾಂ ತ್ವಾ ಯಶಸಿ

---

ರುಚೇ । ತ್ವಾ । ದ್ಯುತೇ । ತ್ವಾ । ಭಾಸೇ । ತ್ವಾ । ಜ್ಯೋತಿಷೇ । ತ್ವಾ । ಯಶೋದಾಮಿತಿ ಯಶಃ-ದಾಮ್ । ತ್ವಾ । ಯಶಸಿ ।

---

| ಮಂತ್ರ | ವಿನಿಯೋಗ |
|---|---|
| ರುಚೇ ತ್ವಾ ॥ | ಎರಡನೆಯ ಘೃತೇಷ್ಟಕೋಪಧಾನಕ್ಕಾಗಿ. |
| ದ್ಯುತೇ ತ್ವಾ ॥ | ಮೂರನೆಯ ಘೃತೇಷ್ಟಕೋಪಧಾನಕ್ಕಾಗಿ. |
| ಭಾಸೇ ತ್ವಾ ॥ | ನಾಲ್ಕನೆಯ ಘೃತೇಷ್ಟಕೋಪಧಾನಕ್ಕಾಗಿ. |
| ಜ್ಯೋತಿಷೇ ತ್ವಾ ॥ | ಐದನೆಯ ಘೃತೇಷ್ಟಕೋಪಧಾನಕ್ಕಾಗಿ. |
| ಯಶೋದಾಂ..ಸಾದಯಾಮಿ..ಧ್ರುವಾ ಸೀದ ॥ | ಯಶೋದೇಷ್ಟಕೋಪಧಾನಕ್ಕಾಗಿ. |

---

▲ ರುಚೇ ತ್ವಾ=ಸೂರ್ಯಪ್ರಕಾಶಸಿದ್ಧಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]. ▲ ದ್ಯುತೇ ತ್ವಾ=ಚಂದ್ರಪ್ರಕಾಶಸಿದ್ಧಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]. ▲ ಭಾಸೇ ತ್ವಾ=ಅಗ್ನಿಪ್ರಕಾಶಸಿದ್ಧಿಗಾಗಿ ನಿನ್ನನ್ನು [ಇಲ್ಲಿಡುತ್ತೇನೆ]. ▲ ಜ್ಯೋತಿಷೇ ತ್ವಾ= ನಕ್ಷತ್ರದೀಪ್ತಿಗಾಗಿ ನಿನ್ನನ್ನು [ಉಪಧಾನ ಮಾಡುತ್ತೇನೆ]. ▲ [ಎಲೈ! ಇಷ್ಟಕೆಯೇ!] **ಯಶೋದಾಮ್**=ಕೀರ್ತಿಪ್ರದಳಾದ; **ತ್ವಾ**=ನಿನ್ನನ್ನು; **ಯಶಸಿ**=ಕೀರ್ತಿನಿಮಿತ್ತವಾಗಿ; ತೇನ ಋಷಿಣಾ=ನಿನ್ನನ್ನು ತಿಳಿದಿರುವ ಋಷಿಯಿಂದ; ತೇನ ಬ್ರಹ್ಮಣಾ=ನಿನ್ನನ್ನು ಪ್ರತಿಪಾದಿಸುವ ಮಂತ್ರದಿಂದಲೂ; ತಯಾ ದೇವತಯಾ=ನಿನ್ನ ಅಭಿಮಾನಿದೇವತೆಯಿಂದಲೂ; ಅಂಗಿರಸ್ವತ್=ಅಂಗಿರೋಮುನಿಗಳಂತೆ; ಸಾದಯಾಮಿ=ಉಪಧಾನ ಮಾಡುತ್ತೇನೆ; ಧ್ರುವಾ ಸೀದ=ಸ್ಥಿರವಾಗಿರು.

---

ಶಬ್ದವಿಲ್ಲದಿದ್ದರೂ ಯಾನೀಶಬ್ದದಿಂದ ಕೂಡಿರುವ ಮಂತ್ರಗಳ ಜೊತೆಯಲ್ಲಿರುವುದರಿಂದ ಇವೂ ಸಂಯಾನೀಷ್ಟಕೆಗಳ ಮಂತ್ರಗಳೇ ಆಗಿವೆ. ಯಾವ ಇಷ್ಟಕೆಗಳ ಉಪಧಾನ

## ತೇಜೋದಾಂ ತ್ವಾ ತೇಜಸಿ ಪಯೋದಾಂ ತ್ವಾ ಪಯಸಿ ವರ್ಚೋದಾಂ ತ್ವಾ ವರ್ಚಸಿ

---

ತೇಜೋದಾಮಿತಿ ತೇಜಃ-ದಾಮ್ । ತ್ವಾ । ತೇಜಸಿ । ಪಯೋದಾಮಿತಿ ಪಯಃ-ದಾಮ್ । ತ್ವಾ । ಪಯಸಿ । ವರ್ಚೋದಾಮಿತಿ ವರ್ಚಃ-ದಾಮ್ । ತ್ವಾ । ವರ್ಚಸಿ ।

---

| ಮಂತ್ರ | ವಿನಿಯೋಗ |
|---|---|
| ತೇಜೋದಾಂ..ಸಾದಯಾಮಿ..ಸೀದ ॥ | ಎರಡನೆಯ ಯಶೋದೇಷ್ಟಕೋಪಧಾನಕ್ಕಾಗಿ. |
| ಪಯೋದಾಂ..ಸಾದಯಾಮಿ..ಸೀದ ॥ | ಮೂರನೆಯ ಯಶೋದೇಷ್ಟಕೋಪಧಾನಕ್ಕಾಗಿ. |
| ವರ್ಚೋದಾಂ..ಸಾದಯಾಮಿ..ಸೀದ ॥ | ನಾಲ್ಕನೆಯ ಯಶೋದೇಷ್ಟಕೋಪಧಾನಕ್ಕಾಗಿ. |

---

🔔 [ಇಷ್ಟಕೆಯೇ!] **ತೇಜೋದಾಮ್**=ಕಾಂತಿಯನ್ನು ಕೊಡುವ; **ತ್ವಾ**=ನಿನ್ನನ್ನು; **ತೇಜಸಿ**=ಕಾಂತಿನಿಮಿತ್ತವಾಗಿ; ತೇನ ಋಷಿಣಾ ತೇನ ಬ್ರಹ್ಮಣಾ ತಯಾ ದೇವತಯಾ= ನಿನ್ನನ್ನು ತಿಳಿದಿರುವ ಋಷಿ, ನಿನ್ನನ್ನು ಪ್ರತಿಪಾದಿಸುವ ಮಂತ್ರವಾಕ್ಯ, ನೀನು ಪ್ರತಿಪಾದಿಸುವ ದೇವತೆಗಳೊಡನೆ; ಅಂಗಿರಸ್ವತ್=ಹಿಂದೆ ಅಂಗಿರೋಮುನಿಗಳಂತೆ [ನಾನು] ಸಾದಯಾಮಿ=ಸಾದನ ಮಾಡುತ್ತೇನೆ; ಧ್ರುವಾ ಸೀದ=ನೀನು ಸ್ಥಿರವಾಗಿರು.

🔔 **ಪಯೋದಾಮ್ ತ್ವಾ**=ಹಾಲನ್ನು ಕೊಡುವ ನಿನ್ನನ್ನು; **ಪಯಸಿ**=ಕ್ಷೀರನಿಮಿತ್ತವಾಗಿ; ತೇನ ಋಷಿಣಾ ತೇನ ಬ್ರಹ್ಮಣಾ ತಯಾ ದೇವತಯಾ ಅಂಗಿರಸ್ವತ್ ಸಾದಯಾಮಿ ಧ್ರುವಾ ಸೀದ=ನಿನಗೆ ಸಂಬಂಧಿಸಿದ ಋಷಿ, ಮಂತ್ರ, ದೇವತೆಗಳೊಡನೆ ಹಿಂದೆ ಅಂಗಿರೋಮುನಿಗಳು ಉಪಧಾನ ಮಾಡಿದಂತೆ ಇಲ್ಲಿ ಇಡುತ್ತೇನೆ. ನೀನು ಇಲ್ಲಿ ಸ್ಥಿರವಾಗಿ ನೆಲಸು. 🔔 **ವರ್ಚೋದಾಮ್ ತ್ವಾ**=ಬಲವನ್ನು ಕೊಡುವ ನಿನ್ನನ್ನು; **ವರ್ಚಸಿ**=ಬಲನಿಮಿತ್ತವಾಗಿ, ತೇನ ಋಷಿಣಾ ತೇನ ಬ್ರಹ್ಮಣಾ ತಯಾ ದೇವತಯಾ ಅಂಗಿರಸ್ವತ್ ಸಾದಯಾಮಿ ಧ್ರುವಾ ಸೀದ=ನಿನಗೆ ಸಂಬಂಧಿಸಿದ ಋಷಿಯಿಂದಲೂ, ಮಂತ್ರದಿಂದಲೂ, ದೇವತೆಯಿಂದಲೂ ಕೂಡಿ ಅಂಗಿರೋಮುನಿಗಳಂತೆ ಇಲ್ಲಿ ಸಾದನ ಮಾಡುತ್ತೇನೆ. ನೀನು ಇಲ್ಲಿ ಸ್ಥಿರವಾಗಿರು.

ದ್ರವಿಣೋದಾಂ ತ್ವಾ ದ್ರವಿಣೇ ಸಾದಯಾಮಿ ತೇನರ್ಷಿಣಾ

ತೇನ ಬ್ರಹ್ಮಣಾ ತಯಾ ದೇವತಯಾಙ್ಗಿರಸ್ವದ್ಧ್ರುವಾ ಸೀದ

॥ ೨೧-6 ॥

[ವಿದ್ಯುತ್ಸನಿರ್ದ್ಯುತೇ ತ್ವೈಕಾನ್ನತ್ರಿಗ್ಂಶಚ್ಚ ॥]

---

ದ್ರವಿಣೋದಾಮಿತಿ ದ್ರವಿಣಃ-ದಾಮ್ । ತ್ವಾ । ದ್ರವಿಣೇ । ಸಾದಯಾಮಿ । ತೇನ । ಋಷಿಣಾ । ತೇನ । ಬ್ರಹ್ಮಣಾ । ತಯಾ । ದೇವತಯಾ । ಅಙ್ಗಿರಸ್ವತ್ । ಧ್ರುವಾ । ಸೀದ ॥ ೨೧ ॥

---

| ಮಂತ್ರ | ವಿನಿಯೋಗ |
|---|---|
| ದ್ರವಿಣೋದಾಂ...ಸಾದಯಾಮಿ...ಸೀದ ॥ | ಐದನೆಯ ಯಶೋದೇಷ್ಟಕೋಪಧಾನಕ್ಕಾಗಿ. |

---

🔔 ದ್ರವಿಣೋದಾಮ್=ಧನವನ್ನು ಕೊಡುವ; ತ್ವಾ=ನಿನ್ನನ್ನು; ದ್ರವಿಣೇ=ಧನನಿಮಿತ್ತವಾಗಿ; **ತೇನ ಋಷಿಣಾ**=ನಿನ್ನನ್ನರಿತ ಮುನಿಯೊಡನೆಯೂ; **ತೇನ ಬ್ರಹ್ಮಣಾ**=ನಿನ್ನನ್ನು ಪ್ರತಿಪಾದಿಸುವ ಮಂತ್ರದೊಡನೆಯೂ; **ತಯಾ ದೇವತಯಾ**=ನೀನು ಪ್ರತಿಪಾದಿಸುವ ದೇವತೆಯೊಡನೆಯೂ; [ಕೂಡಿಕೊಂಡು] **ಅಙ್ಗಿರಸ್ವತ್**=ಹಿಂದೆ ಅಂಗಿರೋಮುನಿಗಳು [ಸಾದನ ಮಾಡಿದಂತೆ] **ಸಾದಯಾಮಿ**=[ನಾನು ಇಲ್ಲಿ] ಸಾದನ ಮಾಡುತ್ತೇನೆ. **ಧ್ರುವಾ ಸೀದ**=[ನೀನು] ಸ್ಥಿರವಾಗಿ ನೆಲಸು.

---

ದಿಂದ ಲೋಕಗಳ ಪ್ರಾಪ್ತಿಯು ಚೆನ್ನಾಗಿ ಆಗುವುದೋ ಅವು **'ಸಂಯಾನಿಗಳು'** ಎಂಬ ಶಬ್ದವಿವರಣೆಯೂ ಭಾಷ್ಯದಲ್ಲಿ ಇದೆ.

ಈ ಆದಿತ್ಯೇಷ್ಟಕೆಗಳ ಮಂತ್ರಗಳು ಎಂಟು ಇವೆ. ಆದಿತ್ಯಶಬ್ದದಿಂದ ಕೂಡಿರುವ ಮಂತ್ರಗಳಿಂದ ಉಪಧಾನ ಮಾಡುವುದರಿಂದ ಆದಿತ್ಯೇಷ್ಟಕೆಗಳು. ನೀರಿನ ಬಗೆಬಗೆಯ ಭೇದಗಳನ್ನು ಭಾಷ್ಯಾನುಸಾರಿಯಾಗಿ ತಿಳಿಸಲಾಗಿದೆ.

ಆದಿತ್ಯೇಷ್ಟಕೆಯ ಉಪಧಾನದಿಂದ–ಐಶ್ವರ್ಯವನ್ನು ಹೊಂದಲು ಸಮರ್ಥನಾದವನೂ ಅದನ್ನು ಪಡೆಯದೇ ಇರುವಾಗ ಆದಿತ್ಯರಿಂದ–ಅದು ದೊರೆಯುತ್ತದೆ ಎಂದು ಹೇಳಿದೆ.

ಹೇ! ಆದಿತ್ಯೇಷ್ಟಕೆಯೇ! ನಿನ್ನನ್ನು ವಿಶೇಷಜ್ಞಾನಸಿದ್ಧಿಗಾಗಿಯೂ, ಆದಿತ್ಯಪ್ರಕಾಶಸಿದ್ಧಿಗಾಗಿಯೂ, ನಕ್ಷತ್ರಪ್ರಕಾಶಸಿದ್ಧಿಗಾಗಿಯೂ, ಆದಿತ್ಯರ ಪ್ರೀತಿಗಾಗಿಯೂ ಉಪಧಾನ ಮಾಡುತ್ತೇನೆ.

ಹೇ! ಘೃತೇಷ್ಟಕೆಯೇ! ನಿನ್ನನ್ನು ಋಙ್ಮಂತ್ರದಿಂದ ಸಾಧ್ಯಸ್ತುತಿಗಾಗಿ ಉಪಧಾನ ಮಾಡುವೆನು.

ಪ್ರಕಾಶದ ಭೇದಗಳನ್ನು ಭಾಷ್ಯಾನುಸಾರಿಯಾಗಿ ಹೀಗೆ ತಿಳಿಸಬಹುದು. ಹೇ ಘೃತೇಷ್ಟಕೆಗಳೇ! ನಿಮ್ಮನ್ನು ಸೂರ್ಯ–ಚಂದ್ರ–ಅಗ್ನಿ–ನಕ್ಷತ್ರಗಳ ಪ್ರಕಾಶಸಿದ್ಧಿಗಾಗಿ ಉಪಧಾನ ಮಾಡುತ್ತೇನೆ.

ಎಲೈ! ಯಶೋದೇಷ್ಟಕೆಯೇ! ಕೀರ್ತಿಯನ್ನು ತಂದೀಯುವ ನಿನ್ನನ್ನು ಕೀರ್ತಿಯ ಸಲುವಾಗಿ ನಿನ್ನನ್ನು ದರ್ಶನ ಮಾಡಿರುವ ಋಷಿ, ನಿನ್ನನ್ನು ಪ್ರತಿಪಾದಿಸುವ ಮಂತ್ರ, ನೀನು ಪ್ರತಿಪಾದಿಸುವ ದೇವತೆ–ಇವುಗಳೊಡನೆ ಅಂಗಿರೋಮುನಿಗಳಂತೆ ಉಪಧಾನ ಮಾಡುತ್ತೇನೆ. ನೀನು ಸ್ಥಿರವಾಗಿರು.

ಎಲೈ! ಕಾಂತಿಯನ್ನೂ, ಹಾಲನ್ನೂ, ಬಲವನ್ನೂ, ಧನವನ್ನೂ ನೀಡುವ ಯಶೋದೇಷ್ಟಕೆಗಳೇ! ನಿಮ್ಮನ್ನು ಕಾಂತಿ–ಹಾಲು–ಬಲ–ಧನಗಳಿಗಾಗಿ ನಿಮ್ಮನ್ನು ದರ್ಶನ ಮಾಡಿರುವ ಋಷಿಗಳು, ನಿಮ್ಮನ್ನು ಪ್ರತಿಪಾದಿಸುವ ಮಂತ್ರ, ಮತ್ತು ನಿಮ್ಮ ಅಭಿಮಾನಿದೇವತೆಗಳೊಡನೆ ನಾನು ಇಲ್ಲಿ ಹಿಂದೆ ಅಂಗಿರೋಮುನಿಗಳು ಚಯನಯಾಗದಲ್ಲಿ ಆಸಾದನ ಮಾಡಿದಂತೆ ಮಾಡುತ್ತೇನೆ. ನೀವು ಇಲ್ಲಿ ಸ್ಥಿರವಾಗಿರಿ.

---

## ವಿನಿಯೋಗಸಂಗ್ರಹ

1ಬೃಹ 2ವಿಶ್ವ 3ಪ್ರಜೇತ್ಯೇತಾ ವಿಶ್ವಜ್ಯೋತಿಷ ಈರಿತಾಃ ।

4-8 ಪುರೋ ವೃಷ್ಟಿಸನೀಃ ಪಂಚ ಹ್ಯಗ್ನೇಃ 9-16ಸಂಯಾನಿಕಾಷ್ಟಕಮ್ ॥

17-24 ಸಲ್ಯಾದಿತ್ಯೇಷ್ಟಕಾ ಅಷ್ಟಾವೃಚೇ 25-29 ಪಂಚ ಘೃತೇಷ್ಟಕಾಃ ।

30-34 ಯಶಃ ಪಂಚ ಯಶೋದಾಃ ಸ್ಯುಃ ಸಾದಯಾಮ್ಯನುಷಜ್ಯತೇ ॥

ಷಷ್ಠಾನುವಾಕೇ ಸಂಪ್ರೋಕ್ತಾಶ್ಚತುಸ್ತ್ರಿಂಶತ್ತು ಮಂತ್ರಕಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–34



## ॥ ಸಪ್ತಮೋಽನುವಾಕಃ ॥

**ಭೂಯಸ್ಕೃದಸಿ ವರಿವಸ್ಕೃದಸಿ**

**ಪ್ರಾಚ್ಯಸ್ಯೂರ್ಧ್ವಾಽಸ್ಯಂತರಿಕ್ಷಸದ-**

---

ಭೂಯಸ್ಕೃದಿತಿ ಭೂಯಃ -ಕೃತ್ । ಅಸಿ । ವರಿವಸ್ಕೃದಿತಿ ವರಿವಃ-ಕೃತ್ । ಅಸಿ ।

ಪ್ರಾಚೀ । ಅಸಿ । ಊರ್ಧ್ವಾ । ಅಸಿ । ಅಂತರಿಕ್ಷಸದಿತ್ಯಂತರಿಕ್ಷ-ಸತ್ । ಅಸಿ ।

---

ಆರನೆಯ ಅನುವಾಕದಲ್ಲಿ ವಿಶ್ವಜ್ಯೋತಿರಾದಿ ಇಷ್ಟಕೆಗಳು ಹೇಳಲ್ಪಟ್ಟವು. ಈ ಏಳನೆಯ ಅನುವಾಕದಲ್ಲಿ ಭೂಯಸ್ಕೃದಾದಿ ಇಷ್ಟಕೆಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
|---|---|
| ಭೂಯಸ್ಕೃದಸಿ ॥ ವರಿವಸ್ಕೃದಸಿ ॥<br>ಪ್ರಾಚ್ಯಸಿ ॥ ಊರ್ಧ್ವಾಽಸಿ ॥<br>ಅಂತರಿಕ್ಷ..ಸೀದ ॥ | ಐದು ಭೂಯಸ್ಕೃದಿಷ್ಟಕೆಗಳ ಉಪಧಾನಕ್ಕಾಗಿ ಐದು ಮಂತ್ರಗಳು. |

---

▲ [ಎಲೈ! ಇಷ್ಟಕೆಯೇ! ನೀನು] **ಭೂಯಸ್ಕೃತ್ ಅಸಿ**=ಹೆಚ್ಚಳವನ್ನುಂಟುಮಾಡುವವಳಾಗಿದ್ದೀಯೆ; [ನಿನ್ನನ್ನು ಉಪಧಾನ ಮಾಡುತ್ತೇನೆ]. ▲ **ವರಿವಸ್ಕೃತ್ ಅಸಿ**= ಭೂಮಿಗೆ ಪೂಜ್ಯನಾಗುವಂತೆ ಮಾಡತಕ್ಕವಳಾಗಿದ್ದಿಯೆ. ▲ **ಪ್ರಾಚೀ ಅಸಿ**=[ಇಷ್ಟಕೆಯೇ!] ನೀನು ಪೂರ್ವದಿಗ್ರೂಪಳಾಗಿರುತ್ತೀಯೆ. ▲ **ಊರ್ಧ್ವಾ ಅಸಿ**=[ಇಷ್ಟಕೆಯೇ!] ನೀನು ಊರ್ಧ್ವದಿಗ್ರೂಪಳಾಗಿದ್ದೀಯೆ. ▲ **ಅಂತರಿಕ್ಷಸತ್ ಅಸಿ**=[ಇಷ್ಟಕೆಯೇ!] ನೀನು ಅಂತರಿಕ್ಷದಲ್ಲಿ ಇರುವವಳು;

# –ಸ್ಯಂತರಿಕ್ಷೇ ಸೀದಾಪ್ಸುಷದಸಿ ಶ್ಯೇನಸದಸಿ ಗೃಧ್ರಸದಸಿ ಸುಪರ್ಣಸದಸಿ ನಾಕಸದಸಿ

ಅಂತರಿಕ್ಷೇ । ಸೀದ । ಅಪ್ಸುಷದಿತ್ಯಪ್ಸು–ಸತ್ । ಅಸಿ । ಶ್ಯೇನಸದಿತಿ ಶ್ಯೇನ–ಸತ್ । ಅಸಿ । ಗೃಧ್ರಸದಿತಿ ಗೃಧ್ರ–ಸತ್ । ಅಸಿ । ಸುಪರ್ಣಸದಿತಿ ಸುಪರ್ಣ–ಸತ್ । ಅಸಿ । ನಾಕಸದಿತಿ ನಾಕ–ಸತ್ । ಅಸಿ ।

| ಮಂತ್ರ | ವಿನಿಯೋಗ |
| --- | --- |
| ಅಪ್ಸುಷದಸಿ ॥ ಶ್ಯೇನಸದಸಿ ॥<br>ಗೃಧ್ರಸದಸಿ ॥ ಸುಪರ್ಣಸದಸಿ ॥<br>ನಾಕಸದಸಿ ॥ | ಐದು ಅಗ್ನಿರೂಪೇಷ್ಟಕೆಗಳ ಉಪಧಾನಕ್ಕಾಗಿ ಐದು ಮಂತ್ರಗಳು. |

**ಅಂತರಿಕ್ಷೇ ಸೀದ**=ಅಂತರಿಕ್ಷದಲ್ಲಿ ಕುಳಿತುಕೋ. [ನಿನ್ನನ್ನು ಉಪಧಾನ ಮಾಡುತ್ತೇನೆ]. ▲ [ಹೇ! ಇಷ್ಟಕೆಯೇ! ನೀನು] **ಅಪ್ಸುಷತ್ ಅಸಿ**=[ಆರುಣಕೇತುಕಚಯನದಲ್ಲಿ] ನೀರಿನಲ್ಲಿ ಇರುವವಳಾಗಿರುವೆ. ▲ **ಶ್ಯೇನಸತ್ ಅಸಿ**=[ಅಗ್ನಿಚಯನದಲ್ಲಿ] ಗಿಡಗದ ಆಕಾರದಲ್ಲಿ ಇರುತ್ತೀಯೆ. ▲ **ಗೃಧ್ರಸತ್ ಅಸಿ**=[ಚಯನದಲ್ಲಿ] ಹದ್ದಿನ ಆಕಾರದಲ್ಲಿ ಇರುತ್ತೀಯೆ. ▲ **ಸುಪರ್ಣಸತ್ ಅಸಿ**=[ಚಯನದಲ್ಲಿ] ಗರುಡನ ಆಕಾರದಲ್ಲಿ ಇರುವವಳಾಗಿದ್ದೀಯೆ. [ನಿನ್ನನ್ನು ಉಪಧಾನ ಮಾಡುತ್ತೇನೆ]. ▲ **ನಾಕಸತ್ ಅಸಿ**=ನೀನು ಸ್ವರ್ಗದಲ್ಲಿ ಇರುವವಳು/ಸ್ವರ್ಗವನ್ನು ಹೊಂದಿಸಿಕೊಡುವವಳು; [ನಿನ್ನನ್ನು ಉಪಧಾನ ಮಾಡುತ್ತೇನೆ].

ಈ ಅನುವಾಕದಲ್ಲಿ ಭೂಯಸ್ಕೃದಿಷ್ಟಕೋಪಧಾನದ ಮಂತ್ರಗಳು ಆರಂಭಗೊಳ್ಳುತ್ತವೆ. ಮೊದಲನೆಯ ಮಂತ್ರದಲ್ಲಿ 'ಭೂಯಸ್ಕೃದಸಿ' ಎಂದು ಇರುವುದರಿಂದ ಈ ಐದು ಇಷ್ಟಕೆಗಳನ್ನೂ ಸಹ ಭೂಯಸ್ಕೃದಿಷ್ಟಕೆಗಳೆಂದು ಹೇಳುತ್ತಾರೆ.

ಈ ಇಷ್ಟಕೆಗಳ ವಿಧಾನವನ್ನು ತಿಳಿಸುವಾಗ ಅರ್ಥವಾದಬ್ರಾಹ್ಮಣದಲ್ಲಿ 'ಏತದ್ವಾ

ಪೃಥಿವ್ಯಾಸ್ತ್ವಾ ದ್ರವಿಣೇ ಸಾದಯಾಮ್ಯಂತರಿಕ್ಷಸ್ಯ ತ್ವಾ ದ್ರವಿಣೇ ಸಾದಯಾಮಿ ದಿವಸ್ತ್ವಾ ದ್ರವಿಣೇ ಸಾದಯಾಮಿ ದಿಶಾಂ ತ್ವಾ ದ್ರವಿಣೇ ಸಾದಯಾಮಿ

---

ಪೃಥಿವ್ಯಾಃ । ತ್ವಾ । ದ್ರವಿಣೇ । ಸಾದಯಾಮಿ । ಅಂತರಿಕ್ಷಸ್ಯ । ತ್ವಾ । ದ್ರವಿಣೇ । ಸಾದಯಾಮಿ । ದಿವಃ । ತ್ವಾ । ದ್ರವಿಣೇ । ಸಾದಯಾಮಿ । ದಿಶಾಮ್ । ತ್ವಾ । ದ್ರವಿಣೇ । ಸಾದಯಾಮಿ ।

---

| ಮಂತ್ರ | ವಿನಿಯೋಗ |
|---|---|
| **ಪೃಥಿವ್ಯಾಸ್ತ್ವಾ...ಸಾದಯಾಮಿ ॥** | ಮೊದಲನೆಯ ದ್ರವಿಣೋದೇಷ್ಟಕೋಪಧಾನಕ್ಕಾಗಿ. |
| **ಅಂತರಿಕ್ಷಸ್ಯ...ಸಾದಯಾಮಿ ॥** | ಎರಡನೆಯ ದ್ರವಿಣೋದೇಷ್ಟಕೋಪಧಾನಕ್ಕಾಗಿ. |
| **ದಿವಃ...ಸಾದಯಾಮಿ ॥** | ಮೂರನೆಯ ದ್ರವಿಣೋದೇಷ್ಟಕೋಪಧಾನಕ್ಕಾಗಿ. |
| **ದಿಶಾಮ್...ಸಾದಯಾಮಿ ॥** | ನಾಲ್ಕನೆಯ ದ್ರವಿಣೋದೇಷ್ಟಕೋಪಧಾನಕ್ಕಾಗಿ. |

---

▲ [ಹೇ! ಇಷ್ಟಕೆಯೇ!] **ತ್ವಾ**=ನಿನ್ನನ್ನು; **ಪೃಥಿವ್ಯಾಃ**=ಭೂಮಿಗೆ ಸಂಬಂಧಿಸಿದ; **ದ್ರವಿಣೇ**=ಧನನಿಮಿತ್ತವಾಗಿ; **ಸಾದಯಾಮಿ**=ಉಪಧಾನ ಮಾಡುತ್ತೇನೆ. ▲ **ತ್ವಾ**=ನಿನ್ನನ್ನು; **ಅಂತರಿಕ್ಷಸ್ಯ**=ಆಕಾಶಕ್ಕೆ ಸಂಬಂಧಿಸಿದ; **ದ್ರವಿಣೇ**=ಧನನಿಮಿತ್ತವಾಗಿ; **ಸಾದಯಾಮಿ**=ಉಪಧಾನ ಮಾಡುತ್ತೇನೆ. ▲ **ತ್ವಾ**=ನಿನ್ನನ್ನು; **ದಿವಃ**=ದ್ಯುಲೋಕಕ್ಕೆ ಸಂಬಂಧಿಸಿದ; **ದ್ರವಿಣೇ**=ಧನನಿಮಿತ್ತವಾಗಿ; **ಸಾದಯಾಮಿ**=ಉಪಧಾನ ಮಾಡುತ್ತೇನೆ. ▲ **ತ್ವಾ**=ನಿನ್ನನ್ನು; **ದಿಶಾಮ್**=ದಿಕ್ಕುಗಳಿಗೆ ಸಂಬಂಧಿಸಿದ; **ದ್ರವಿಣೇ**=ಧನನಿಮಿತ್ತವಾಗಿ; **ಸಾದಯಾಮಿ**=ಉಪಧಾನ ಮಾಡುತ್ತೇನೆ.

---

**ಅಗ್ನೇ ರೂಪಾಣಿ ರೂಪೇಣ್ಯೈವಾಗ್ನಿಮವರುಂಧೇ** [ತೈ. ಸಂ. 5.3.11] ಎಂದು ಹೇಳಿರುವುದರಿಂದ ಇವು ಅಗ್ನಿರೂಪಗಳೆನಿಸಿಕೊಳ್ಳುತ್ತವೆ. ಈ ಇಷ್ಟಕೆಗಳಿಗೆ **'ಅಗ್ನಿರೂಪೇಷ್ಟಕೆ'**ಗಳೆಂದು ಹೆಸರು.

ದ್ರವಿಣೋದಾಂ ತ್ವಾ ದ್ರವಿಣೇ ಸಾದಯಾಮಿ ಪ್ರಾಣಂ ಮೇ

ಪಾಹ್ಯಪಾನಂ ಮೇ ಪಾಹಿ ವ್ಯಾನಂ ಮೇ [ಮೇ(೨೨)]

ಪಾಹ್ಯಾಯುರ್ಮೇ ಪಾಹಿ

---

ದ್ರವಿಣೋದಾಮಿತಿ ದ್ರವಿಣಃ-ದಾಮ್ । ತ್ವಾ । ದ್ರವಿಣೇ । ಸಾದಯಾಮಿ । ಪ್ರಾಣಮಿತಿ ಪ್ರ-ಅನಮ್ । ಮೇ । ಪಾಹಿ । ಅಪಾನಮಿತ್ಯಪ-ಅನಮ್ । ಮೇ । ಪಾಹಿ । ವ್ಯಾನಮಿತಿ ವಿ-ಅನಮ್ । ಮೇ । (೨೨) ಪಾಹಿ । ಆಯುಃ । ಮೇ । ಪಾಹಿ ।

---

| ಮಂತ್ರ | ವಿನಿಯೋಗ |
|---|---|
| ದ್ರವಿಣೋದಾಂ...ಸಾದಯಾಮಿ ॥ | ಐದನೆಯ ದ್ರವಿಣೋದೇಷ್ಟಕೋಪಧಾನಕ್ಕಾಗಿ. |
| ಪ್ರಾಣಂ ಮೇ ಪಾಹಿ ॥ | ಮೊದಲನೆಯ ಆಯುಷ್ಯೇಷ್ಟಕೋಪಧಾನಕ್ಕಾಗಿ. |
| ಅಪಾನಂ ಮೇ ಪಾಹಿ ॥ | ಎರಡನೆಯ ಆಯುಷ್ಯೇಷ್ಟಕೋಪಧಾನಕ್ಕಾಗಿ. |
| ವ್ಯಾನಂ ಮೇ ಪಾಹಿ ॥ | ಮೂರನೆಯ ಆಯುಷ್ಯೇಷ್ಟಕೋಪಧಾನಕ್ಕಾಗಿ. |
| ಆಯುರ್ಮೇ ಪಾಹಿ ॥ | ನಾಲ್ಕನೆಯ ಆಯುಷ್ಯೇಷ್ಟಕೋಪಧಾನಕ್ಕಾಗಿ. |

---

▲ ದ್ರವಿಣೋದಾಮ್=ಧನವನ್ನು ಕೊಡುವ; ತ್ವಾ=ನಿನ್ನನ್ನು; ದ್ರವಿಣೇ=ಸರ್ವಧನ ನಿಮಿತ್ತವಾಗಿ; ಸಾದಯಾಮಿ=ಉಪಧಾನ ಮಾಡುತ್ತೇನೆ. ▲ [ಎಲೈ! ಇಷ್ಟಕೆಯೇ! ನೀನು] ಮೇ=ನನ್ನ; ಪ್ರಾಣಮ್=ಪ್ರಾಣವೃತ್ತಿಯನ್ನು; ಪಾಹಿ=ಪಾಲಿಸು. ▲ ಮೇ=ನನ್ನ; ಅಪಾನಮ್=ಅಪಾನವಾಯುವೃತ್ತಿಯನ್ನು; ಪಾಹಿ=ಕಾಪಾಡು. ▲ ಮೇ=ನನ್ನ; ವ್ಯಾನಮ್=ವ್ಯಾನವಾಯುವೃತ್ತಿಯನ್ನು; ಪಾಹಿ=ರಕ್ಷಿಸು. ▲ ಮೇ=ನನ್ನ; ಆಯುಃ=ಆಯುಸ್ಸನ್ನು; ಪಾಹಿ=ಪೊರೆ.

---

ಹೇ! ಅಗ್ನಿರೂಪೇಷ್ಟಕೆಗಳೇ! ನಿಮಗೆ ವಿವಿಧ ಆಕಾರದ ಅಗ್ನಿರೂಪವಿದೆ. ನಿಮ್ಮನ್ನು

ವಿಶ್ವಾಯುರ್ಮೇ ಪಾಹಿ ಸರ್ವಾಯುರ್ಮೇ ಪಾಹ್ಯಗ್ನೇ

ಯತ್ತೇ ಪರಗ್ಂ ಹೃನ್ನಾಮ ತಾವೇಹಿ ಸಗ್ಂರಭಾವಹೈ

ಪಾಂಚಜನ್ಯೇಷ್ವಪ್ಯೇಧ್ಯಗ್ನೇ

---

ವಿಶ್ವಾಯುರಿತಿ ವಿಶ್ವ-ಆಯುಃ । ಮೇ । ಪಾಹಿ । ಸರ್ವಾಯುರಿತಿ ಸರ್ವ-ಆಯುಃ । ಮೇ । ಪಾಹಿ । ಅಗ್ನೇ । ಯತ್ । ತೇ । ಪರಮ್ । ಹೃತ್ । ನಾಮ । ತೌ । ಏತಿ । ಇಹಿ । ಸಮಿತಿ । ರಭಾವಹೈ । ಪಾಂಚಜನ್ಯೇಷ್ವಿತಿ ಪಾಂಚ-ಜನ್ಯೇಷು । ಅಪೀತಿ । ಏಧಿ । ಅಗ್ನೇ ।

---

| ಮಂತ್ರ | ವಿನಿಯೋಗ |
|---|---|
| ವಿಶ್ವಾಯುರ್ಮೇ ಪಾಹಿ ॥ | ಐದನೆಯ ಆಯುಷ್ಯೇಷ್ಟಕೋಪಧಾನಕ್ಕಾಗಿ. |
| ಸರ್ವಾಯುರ್ಮೇ ಪಾಹಿ ॥ | ಆರನೆಯ ಆಯುಷ್ಯೇಷ್ಟಕೋಪಧಾನಕ್ಕಾಗಿ. |
| ಅಗ್ನೇ ಯತ್ತೇ...ಅಗ್ನೇ ॥ | ಅಗ್ನೇರ್ಹೃದಯೇಷ್ಟಕೋಪಧಾನಕ್ಕಾಗಿ. |

---

▲ **ಮೇ**=ನನ್ನ; **ವಿಶ್ವಾಯುಃ**=ಸಂಪೂರ್ಣಾಯುಸ್ಸನ್ನು; **ಪಾಹಿ**=ಪಾಲಿಸು. ▲ **ಮೇ**= ನನಗೆ ಸಂಬಂಧಿಸಿದ; **ಸರ್ವಾಯುಃ**=ಎಲ್ಲರ ಆಯುಸ್ಸನ್ನೂ; **ಪಾಹಿ**=ಕಾಪಾಡು. ▲ **ಅಗ್ನೇ**=ಹೇ! ಅಗ್ನಿಯೇ! **ಯತ್**=ಯಾವ; **ತೇ**=ನಿನ್ನ; **ಪರಮ್**=ಶ್ರೇಷ್ಠವಾದ; **ಹೃತ್**=ಪಾಪಹಾರಿ ಎಂಬ; **ನಾಮ**=ಹೆಸರು ಇದೆಯೋ; [ಅದರೊಡನೆ]; **ಏಹಿ**= ನಮ್ಮ ಬಳಿಗೆ ಬಾ. **ತೌ**=ನೀನು ಮತ್ತು ನಾನು ಆ ಇಬ್ಬರೂ; **ಸಮ್ ರಭಾವಹೈ**=ಸೇರಿ ಕೆಲಸ ಮಾಡೋಣ. **ಅಗ್ನೇ**=ಹೇ! ಅಗ್ನಿಯೇ! **ಪಾಂಚಜನ್ಯೇಷು**=ಐದು ಚಿತಿಗಳ ಲ್ಲಿಯೂ; **ಅಪಿ ಏಧಿ**=ಇರುವವನಾಗು.

---

ಉಪಧಾನ ಮಾಡುತ್ತೇನೆ.

ದ್ರವಿಣೋದ ಶಬ್ದವುಳ್ಳ ಮಂತ್ರಗಳಿಂದ ಉಪಧಾನ ಮಾಡುವುದರಿಂದ ಇವು

## ಯಾವಾ ಅಯಾವಾ ಏವಾ ಊಮಾಃ ಸಬ್ದಃ ಸಗರಃ ಸುಮೇಕಃ ॥ ೨೩–7 ॥

[ವ್ಯಾನಂ ಮೇ ದ್ವಾತ್ರಿಗ್ಂಶಚ್ಚ ॥]

ಯಾವಾಃ । ಅಯಾವಾಃ । ಏವಾಃ । ಊಮಾಃ । ಸಬ್ದಃ । ಸಗರಃ । ಸುಮೇಕ ಇತಿ ಸು–ಮೇಕಃ ॥ (೨೩) ॥

| ಮಂತ್ರ | ವಿನಿಯೋಗ |
|---|---|
| ಯಾವಾಃ ॥ ಅಯಾವಾಃ ॥ ಏವಾಃ ॥ ಊಮಾಃ ॥ ಸಬ್ದಃ ॥ ಸಗರಃ ॥ ಸುಮೇಕಃ ॥ | ಏಳು ಋತವ್ಯೇಷ್ಟಕೆಗಳ ಉಪಧಾನಕ್ಕಾಗಿ ಏಳು ಮಂತ್ರಗಳು. |

▲ [ಎಲೈ! ಇಷ್ಟಕೆಯೇ! ನೀನು] **ಯಾವಾಃ**=ವಸಂತಋತುಸ್ವರೂಪವಾಗಿದ್ದೀಯೆ; ▲ [ನೀನು] **ಅಯಾವಾಃ**=ಗ್ರೀಷ್ಮರೂಪಳಾಗಿದ್ದೀಯೆ; ▲ [ನೀನು] **ಏವಾಃ**=ವರ್ಷರ್ತುರೂಪಳಾಗಿದ್ದೀಯೆ; ▲ [ನೀನು] **ಊಮಾಃ**=ಶರದೃತುಸ್ವರೂಪಳಾಗಿದ್ದೀಯೆ. ▲ [ನೀನು] **ಸಬ್ದಃ**=ಹೇಮಂತಋತುರೂಪಳಾಗಿರುವೆ. ▲ [ನೀನು] **ಸಗರಃ**=ಶಿಶಿರರೂಪಳೂ ಆಗಿರುವೆ. ▲ [ನೀನು] **ಸುಮೇಕಃ**=ಸಂವತ್ಸರರೂಪಳೂ ಆಗಿರುವೆ.

**ದ್ರವಿಣೋದೇಷ್ಟಕೆಗಳೆನಿಸಿವೆ.**

ಸರ್ವವಿಧ ಧನದ ಪ್ರಾಪ್ತಿಯು ಈ ಇಷ್ಟಕೆಗಳ ಉಪಧಾನದ ಫಲವಾಗಿದೆ.

ಹೇ! ಆಯುಷ್ಯೇಷ್ಟಕೆಗಳೇ! ನಿಮ್ಮನ್ನು ಉಪಧಾನ ಮಾಡುತ್ತೇನೆ. ನೀವು ನನ್ನ ಪ್ರಾಣ–ಅಪಾನ–ವ್ಯಾನವಾಯುವೃತ್ತಿಗಳನ್ನೂ, ನನ್ನ ಪೂರ್ಣಾಯುಸ್ಸನ್ನೂ ಹಾಗೂ ನನಗೆ ಸಂಬಂಧಿಸಿದವರ ಎಲ್ಲರ ಆಯುಸ್ಸನ್ನೂ ಕಾಪಾಡಿರಿ.

**'ಹೃತ್=ಪಾಪಪರಿಹಾರಕ'** ಎಂಬುದು ಅಗ್ನಿಯ ಪ್ರಿಯವಾದ ಹೆಸರು. ಅಗ್ನಿಯು ಆದರೊಡನೆ ನಮ್ಮ ಬಳಿಗೆ ಬರಲಿ. ನಮ್ಮ ಪಾಪವನ್ನು ಪರಿಹರಿಸಲಿ. ನಾನೂ

ಅಗ್ನಿಯೂ ಸೇರಿ ಕಾರ್ಯ ಮಾಡುವಂತಾಗಲಿ. ಆ ಅಗ್ನಿಯು ಐದು ಚಿತಿಗಳಲ್ಲಿಯೂ ಇರಲಿ.

ಹೇ! ಋತವ್ಯೇಷ್ಟಕೆಗಳೇ! ನೀವು ವಸಂತ-ಗ್ರೀಷ್ಮ-ವರ್ಷ-ಶರತ್ ಹಾಗೂ ಹೇಮಂತ ಋತುವಿನ ಸ್ವರೂಪರಾಗಿರುವಿರಿ. ನಿಮ್ಮನ್ನು ಉಪಧಾನ ಮಾಡುತ್ತೇನೆ.

ಈ ಮಂತ್ರಗಳಲ್ಲಿರುವ **ಯಾವಾ, ಅಯಾವಾ** ಮುಂತಾದ ಶಬ್ದಗಳು ರೂಢಶಬ್ದಗಳು.

---

## ವಿನಿಯೋಗಸಂಗ್ರಹ

**1-5 ಭೂಯೋ ಭೂಯಸ್ಕೃತಃ ಪಂಚ ಪಂಚಾ6-10ಪ್ಸ್ವಿತ್ಯಗ್ನಿರೂಪಕಾಃ ।**
**11-15 ಪೃಥಿ ಪಂಚ ದ್ರವಿಣೋದಾಃ 16-21ಪ್ರಾಣಮಾಯುಷ್ಯಕಾಸ್ತು ಷಟ್ ॥**
**22 ಅಗ್ನೇಽಗ್ನೇರ್ಹೃದಯಂ ಪ್ರೋಕ್ತಂ 23-29 ಯಾವಾಸ್ಸಪ್ತ ಋತವ್ಯಕಾಃ ।**
**ಅನುವಾಕೇ ಸಪ್ತಮೇಽಸ್ಮಿನ್ ಏಕೋನತ್ರಿಂಶದೀರಿತಾಃ ॥**

### ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ-29

# ॥ ಅಷ್ಟಮೋಽನುವಾಕಃ ॥

## ಅಗ್ನಿನಾ ವಿಶ್ವಾಷಾಟ್ಸೂರ್ಯೇಣ ಸ್ವರಾಟ್ಕ್ರತ್ವಾ ಶಚೀಪತಿರ್

---

ಅಗ್ನಿನಾ । ವಿಶ್ವಾಷಾಟ್ । ಸೂರ್ಯೇಣ । ಸ್ವರಾಡಿತಿ ಸ್ವ-ರಾಟ್ । ಕ್ರತ್ವಾ । ಶಚೀಪತಿಃ ।

---

ಏಳನೆಯ ಅನುವಾಕದಲ್ಲಿ ಭೂಯಸ್ಕೃದಾದಿ ಇಷ್ಟಕೆಗಳು ಹೇಳಲ್ಪಟ್ಟಿವೆ. ಈ ಎಂಟನೆಯ ಅನುವಾಕದಲ್ಲಿ ಇಂದ್ರತನುನಾಮಕವಾದ ಇಷ್ಟಕೆಗಳ ಮಂತ್ರಗಳು ಹೇಳಲ್ಪಡುತ್ತವೆ.

---

| ಮಂತ್ರ | ವಿನಿಯೋಗ |
|---|---|
| **ಅಗ್ನಿನಾ ವಿಶ್ವಾಷಾಟ್ ॥** | ಮೊದಲನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. [ಇವು 22] |
| **ಸೂರ್ಯೇಣ ಸ್ವರಾಟ್ ॥** | ಎರಡನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |
| **ಕ್ರತ್ವಾ ಶಚೀಪತಿಃ ॥** | ಮೂರನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |

---

▲ [ಹೇ! ಇಷ್ಟಕೆಯೇ!] [ನೀನು] **ಅಗ್ನಿನಾ**=ಅಗ್ನಿಯೊಡನೆ; **ವಿಶ್ವಾಷಾಟ್**=ವಿಶ್ವ ಪಾಲನಪ್ರಯತ್ನವನ್ನು ಅಂಗೀಕರಿಸಿದ ಇಂದ್ರನ ರೂಪವಾಗಿರುವೆ. ▲ **ಸೂರ್ಯೇಣ**= ಸೂರ್ಯನೊಡನೆ; **ಸ್ವರಾಟ್**=ಸ್ವಯಂ ಪ್ರಕಾಶಿಸುವ ಇಂದ್ರರೂಪಳಾಗಿರುತ್ತೀಯೆ. ▲ **ಕ್ರತ್ವಾ**=ಜ್ಯೋತಿಷ್ಟೋಮಾದಿಮಹಾಯಜ್ಞಗಳಿಂದ ಕೂಡಿದ; **ಶಚೀಪತಿಃ**=ಶಚೀ ದೇವಿಗೆ ಪತಿಯಾದ ಇಂದ್ರರೂಪಳಾಗಿರುತ್ತೀಯೆ.

## ಋಷಭೇಣ ತ್ವಷ್ಟ್ರಾ ಯಜ್ಞೇನ ಮಘವಾನ್ದಕ್ಷಿಣಯಾ
## ಸುವರ್ಗೋ ಮನ್ಯುನಾ ವೃತ್ರಹಾ ಸೌಹಾರ್ದ್ಯೇನ ತನೂಧಾ

---

ಋಷಭೇಣ । ತ್ವಷ್ಟ್ರಾ । ಯಜ್ಞೇನ । ಮಘವಾನಿತಿ ಮಘ-ವಾನ್ । ದಕ್ಷಿಣಯಾ । ಸುವರ್ಗ ಇತಿ ಸುವಃ-ಗಃ । ಮನ್ಯುನಾ । ವೃತ್ರಹೇತಿ ವೃತ್ರ-ಹಾ । ಸೌಹಾರ್ದ್ಯೇನ । ತನೂಧಾ ಇತಿ ತನೂ-ಧಾಃ ।

---

| ಮಂತ್ರ | ವಿನಿಯೋಗ |
|---|---|
| ಋಷಭೇಣ ತ್ವಷ್ಟ್ರಾ ॥ | ನಾಲ್ಕನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |
| ಯಜ್ಞೇನ ಮಘವಾನ್ ॥ | ಐದನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |
| ದಕ್ಷಿಣಯಾ ಸುವರ್ಗಃ ॥ | ಆರನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |
| ಮನ್ಯುನಾ ವೃತ್ರಹಾ ॥ | ಏಳನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |
| ಸೌಹಾರ್ದ್ಯೇನ ತನೂಧಾಃ ॥ | ಎಂಟನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |

---

🔔 **ಋಷಭೇಣ**=ಫಲಗಳನ್ನು ಸುರಿಸುವ ಯಜ್ಞರೂಪನಾದ ಧರ್ಮದೇವತೆಯೊಡನೆ; **ತ್ವಷ್ಟ್ರಾ**=ರೂಪವನ್ನು ಉಂಟುಮಾಡುವ [ತ್ವಷ್ಟೃವಿನಂತೆ] ಇಂದ್ರರೂಪಳಾಗಿದ್ದೀಯೆ. 🔔 **ಯಜ್ಞೇನ**=ಪಾಕಯಜ್ಞ/ಅಲ್ಪಯಜ್ಞಗಳಿಂದ ಕೂಡಿದ; **ಮಘವಾನ್**=ಅನ್ನವಂತನಾದ ಇಂದ್ರರೂಪಳು ನೀನು. 🔔 **ದಕ್ಷಿಣಯಾ**=ಗವಾದಿದಕ್ಷಿಣೆಯಿಂದ ಯುಕ್ತವಾದ; **ಸುವರ್ಗಃ**=ಸುವರ್ಗಲೋಕಾತ್ಮಕವಾದ ಇಂದ್ರರೂಪಳು ನೀನು. 🔔 **ಮನ್ಯುನಾ**=ಕ್ರೋಧದಿಂದ ಕೂಡಿದ; **ವೃತ್ರಹಾ**=ಶತ್ರುಹಂತಕನಾದ ಇಂದ್ರರೂಪಳಾಗಿರುತ್ತೀಯೆ. 🔔 **ಸೌಹಾರ್ದ್ಯೇನ**=ಸ್ನೇಹಾತಿಶಯದಿಂದ ಕೂಡಿದ; **ತನೂಧಾಃ**=ಶರೀರಧಾರಿಯಾದ ಇಂದ್ರರೂಪಳಾಗಿರುವೆ.

---

ಈ ಅನುವಾಕದಲ್ಲಿರುವ ಮಂತ್ರಗಳಿಂದ ಉಪಧಾನ ಮಾಡುವ ಇಷ್ಟಕೆಗಳಿಗೆ

## ಅನ್ನೇನ ಗಯಃ ಪೃಥಿವ್ಯಾಽಸನೋದೃಗ್ಭಿರನ್ನಾದೋ ವಷಟ್ಕಾರೇಣರ್ಧಃ ಸಾಮ್ನಾ ತನೂಪಾ

---

ಅನ್ನೇನ । ಗಯಃ । ಪೃಥಿವ್ಯಾ । ಅಸನೋತ್ । ಋಗ್ಭಿರಿತ್ಯೃಕ್-ಭಿಃ । ಅನ್ನಾದ ಇತ್ಯನ್ನ-ಅದಃ । ವಷಟ್ಕಾರೇಣೇತಿ ವಷಟ್-ಕಾರೇಣ । ಋದ್ಧಃ । ಸಾಮ್ನಾ । ತನೂಪಾ ಇತಿ ತನೂ-ಪಾಃ ।

---

| ಮಂತ್ರ | ವಿನಿಯೋಗ |
|---|---|
| ಅನ್ನೇನ ಗಯಃ ॥ | ಒಂಬತ್ತನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |
| ಪೃಥಿವ್ಯಾಸನೋತ್ ॥ | ಹತ್ತನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |
| ಋಗ್ಭಿರನ್ನಾದಃ ॥ | ಹನ್ನೊಂದನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |
| ವಷಟ್ಕಾರೇಣರ್ಧಃ ॥ | ಹನ್ನೆರಡನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |
| ಸಾಮ್ನಾ ತನೂಪಾಃ ॥ | ಹದಿಮೂರನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |

---

▲ ಅನ್ನೇನ=ಅನ್ನದಿಂದ ಕೂಡಿದ; ಗಯಃ=ಗೃಹವಿಶೇಷರೂಪನಾದ ಇಂದ್ರರೂಪಳು ನೀನು. ▲ ಪೃಥಿವ್ಯಾ=ಭೂಮಿಯೊಡನೆ; ಅಸನೋತ್=ದ್ರವ್ಯಾದಿದಾನ ಮಾಡಿರುವ ಇಂದ್ರರೂಪಳು ನೀನು. ▲ ಋಗ್ಭಿಃ=ಋಕ್‌ಗಳಿಂದ/ಮಂತ್ರವಿಶೇಷಗಳಿಂದ ಕೂಡಿ; ಅನ್ನಾದಃ=ಹವೀರೂಪವಾದ ಅನ್ನವನ್ನು ಭಕ್ಷಿಸುವ ಇಂದ್ರರೂಪಳು ನೀನು. ▲ವಷಟ್ಕಾರೇಣ =ಹವಿಃಪ್ರದಾನಕ್ಕೆ ಕಾರಣದಿಂದ ಕೂಡಿ; ಋದ್ಧಃ=ಸಮೃದ್ಧನಾಗಿರುವ ಇಂದ್ರರೂಪಳು ನೀನು. ▲ ಸಾಮ್ನಾ=ಗಾನ ಮಾಡುವ ಸಾಮಮಂತ್ರಗಳಿಂದ ಕೂಡಿ; ತನೂಪಾಃ=ಶರೀರವನ್ನು ರಕ್ಷಿಸುವ ಇಂದ್ರಸ್ವರೂಪಳು ನೀನು.

---

ಇಂದ್ರತನ್ವಿಷ್ಟಕೆಗಳೆಂದು ಹೆಸರು. ಇಲ್ಲಿ ಇಷ್ಟಕೆಗಳನ್ನು ಇಂದ್ರಸ್ವರೂಪವೆಂದು ವರ್ಣಿಸಲಾಗಿದೆ.

**ವಿರಾಜಾ ಜ್ಯೋತಿಷ್ಮಾನ್ಬ್ರಹ್ಮಣಾ ಸೋಮಪಾ**
**ಗೋಭಿರ್ಯಜ್ಞಂ ದಾಧಾರ ಕ್ಷತ್ರೇಣ ಮನುಷ್ಯಾನಶ್ವೇನ ಚ**
**ರಥೇನ ಚ ವಜ್ರ್ಯೃತುಭಿಃ ಪ್ರಭುಃ**

---

ವಿರಾಜೇತಿ ವಿ-ರಾಜಾ । ಜ್ಯೋತಿಷ್ಮಾನ್ । ಬ್ರಹ್ಮಣಾ । ಸೋಮಪಾ ಇತಿ ಸೋಮ-ಪಾಃ । ಗೋಭಿಃ । ಯಜ್ಞಮ್ । ದಾಧಾರ । ಕ್ಷತ್ರೇಣ । ಮನುಷ್ಯಾನ್ । ಅಶ್ವೇನ । ಚ । ರಥೇನ । ಚ । ವಜ್ರೀ । ಋತುಭಿರಿತ್ಯೃತು-ಭಿಃ । ಪ್ರಭುರಿತಿ ಪ್ರ-ಭುಃ ।

---

| ಮಂತ್ರ | ವಿನಿಯೋಗ |
|---|---|
| **ವಿರಾಜಾ ಜ್ಯೋತಿಷ್ಮಾನ್ ॥** | ಹದಿನಾಲ್ಕನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |
| **ಬ್ರಹ್ಮಣಾ ಸೋಮಪಾಃ ॥** | ಹದಿನೈದನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |
| **ಗೋಭಿರ್ಯಜ್ಞಂ ದಾಧಾರ ॥** | ಹದಿನಾರನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |
| **ಕ್ಷತ್ರೇಣ ಮನುಷ್ಯಾನ್ ॥** | ಹದಿನೇಳನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |
| **ಅಶ್ವೇನ...ವಜ್ರೀ ॥** | ಹದಿನೆಂಟನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |

---

▲ **ವಿರಾಜಾ**=ದಶಾಕ್ಷರ ಛಂದಸ್ಸಿನಿಂದ ಕೂಡಿ; **ಜ್ಯೋತಿಷ್ಮಾನ್**=ಪ್ರಕಾಶಮಾನನಾದ ಇಂದ್ರರೂಪಳು ನೀನು. ▲ **ಬ್ರಹ್ಮಣಾ**=ಮುಖ್ಯ ಋತ್ವಿಜನೊಡನೆ/ಮಂತ್ರದೊಡನೆ ಕೂಡಿ; **ಸೋಮಪಾಃ**=ಸೋಮಪಾನ ಮಾಡುವ ಇಂದ್ರಸ್ವರೂಪಳು ನೀನು. ▲ **ಗೋಭಿಃ**=ದಕ್ಷಿಣಾರೂಪವಾದ ಗೋವುಗಳಿಂದ ಕೂಡಿ; **ಯಜ್ಞಮ್ ದಾಧಾರ**=ಯಜ್ಞವನ್ನು ಧರಿಸಿರುವುದರಿಂದ ಯಜ್ಞಧಾರಕನಾದ ಇಂದ್ರರೂಪಳು ನೀನು. ▲ **ಕ್ಷತ್ರೇಣ**=ರಾಜನಿಂದ ಕೂಡಿಕೊಂಡು; **ಮನುಷ್ಯಾನ್** ದಾಧಾರ=ಮನುಷ್ಯರನ್ನು ಧರಿಸಿರುವ ಇಂದ್ರರೂಪಳು ನೀನು. ▲ **ಅಶ್ವೇನ ಚ ರಥೇನ ಚ**=ಕುದುರೆಯಿಂದಲೂ ರಥದಿಂದಲೂ ಕೂಡಿದ; **ವಜ್ರೀ**=ವಜ್ರಾಯುಧಧಾರಿಯಾದ ಇಂದ್ರಸ್ವರೂಪಳು ನೀನು.

ಸಂವತ್ಸರೇಣ ಪರಿಭೂಸ್ತಪಸಾಽನಾಧೃಷ್ಟಃ ಸೂರ್ಯಃ

ಸನ್ತನೂಭಿಃ ॥ ೨೪–8 ॥

[ಅಗ್ನಿನ್ನೈಕಾನ್ನ ಪಂಚಾಶತ್ ॥]

---

ಸಂವತ್ಸರೇಣೇತಿ ಸಮ್–ವತ್ಸರೇಣ । ಪರಿಭೂರಿತಿ ಪರಿ–ಭೂಃ । ತಪಸಾ । ಅನಾಧೃಷ್ಟ ಇತ್ಯನಾ–ಧೃಷ್ಟಃ । ಸೂರ್ಯಃ । ಸನ್ । ತನೂಭಿಃ ॥ (೨೪) ॥

---

| ಮಂತ್ರ | ವಿನಿಯೋಗ |
|---|---|
| ಋತುಭಿಃ ಪ್ರಭುಃ ॥ | ಹತ್ತೊಂಬತ್ತನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |
| ಸಂವತ್ಸರೇಣ ಪರಿಭೂಃ ॥ | ಇಪ್ಪತ್ತನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |
| ತಪಸಾಽನಾಧೃಷ್ಟಃ ॥ | ಇಪ್ಪತ್ತೊಂದನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |
| ಸೂರ್ಯಃ ಸನ್ತನೂಭಿಃ ॥ | ಇಪ್ಪತ್ತೆರಡನೆಯ ಇಂದ್ರತನ್ವಿಷ್ಟಕೋಪಧಾನಕ್ಕಾಗಿ. |

---

▲ ಋತುಭಿಃ=ವಸಂತಾದಿ ಋತುಗಳೊಡನೆ; ಪ್ರಭುಃ=ಫಲದಾನಸಮರ್ಥನಾದ ಇಂದ್ರರೂಪಳು ನೀನು. ▲ ಸಂವತ್ಸರೇಣ=ಕಾಲರೂಪವಾದ ಸಂವತ್ಸರದಿಂದ ಕೂಡಿದ; ಪರಿಭೂಃ=ಎಲ್ಲವನ್ನೂ ವ್ಯಾಪಿಸಿರುವ ಇಂದ್ರರೂಪಳು ನೀನು. ▲ ತಪಸಾ =ಅನಶನ, ಧನದಾನಾದಿ ತಪಸ್ಸುಗಳಿಂದ ಕೂಡಿದ; ಅನಾಧೃಷ್ಟಃ=ಯಾರಿಂದಲೂ ತಿರಸ್ಕರಿಸಲಾಗದ ಇಂದ್ರಸ್ವರೂಪಳು ನೀನು. ▲ ತನೂಭಿಃ=ಹನ್ನೆರಡು ಮೂರ್ತಿಗಳಿಂದ ಕೂಡಿ; ಸೂರ್ಯಃ ಸನ್=ಸೂರ್ಯರೂಪನಾದ ಇಂದ್ರನೂ ನೀನೇ ಆಗಿರುವೆ.

---

ಈ ಇಂದ್ರತನ್ವಿಷ್ಟಕೆಗಳು ಇಪ್ಪತ್ತೆರಡು ಇವೆ. ಪ್ರತಿಯೊಂದು ಇಷ್ಟಕೆಯನ್ನೂ ಸಂಬೋಧಿಸಿ, ನೀನು ಇಂದ್ರಸ್ವರೂಪವೆಂದು ಹೇಳಿರುವ ಜೊತೆಯಲ್ಲಿ ಆ ಇಂದ್ರನ ಸಾಹಚರ್ಯವನ್ನೂ ಹೇಳಲಾಗಿದೆ.

ಇವು ಇಂದ್ರಸ್ವರೂಪವಾಗಿರುವುದರಿಂದಲೇ ಇಂದ್ರತನುಗಳೆನಿಸಿಕೊಂಡಿವೆ.

## ವಿನಿಯೋಗಸಂಗ್ರಹ

1-22 ಅಗ್ನೀಂದ್ರತನುನಾಮಾನೋ ದ್ವಾವಿಂಶತಿರಿತೀರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–22

## ॥ ನವಮೋಽನುವಾಕಃ ॥

ಪ್ರಜಾಪತಿರ್ಮನಸಾಽಂಧೋಽಚ್ಛೇತೋ ಧಾತಾ

ದೀಕ್ಷಾಯಾಗ್ಂ ಸವಿತಾ ಭೃತ್ಯಾಂ

---

ಪ್ರಜಾಪತಿರಿತಿ ಪ್ರಜಾ–ಪತಿಃ। ಮನಸಾ। ಅಂಧಃ। ಅಚ್ಛೇತ ಇತ್ಯಚ್ಛ–ಇತಃ। ಧಾತಾ।

ದೀಕ್ಷಾಯಾಮ್। ಸವಿತಾ। ಭೃತ್ಯಾಮ್।

---

ಎಂಟನೆಯ ಅನುವಾಕದಲ್ಲಿ ಇಂದ್ರತನುನಾಮಕವಾದ ಇಷ್ಟಕೋಪಧಾನದ ಮಂತ್ರಗಳು ಹೇಳಲ್ಪಟ್ಟವು. ಈ ಒಂಬತ್ತನೆಯ ಅನುವಾಕದಲ್ಲಿ ಯಜ್ಞತನುನಾಮಕವಾದ ಇಷ್ಟಕೆಗಳ ಉಪಧಾನದ ಮಂತ್ರಗಳು ಹೇಳಲ್ಪಟ್ಟಿವೆ. ಇವು ಮೂವತ್ತುಮೂರು ಇವೆ.

---

| ಮಂತ್ರ | ವಿನಿಯೋಗ |
|---|---|
| **ಪ್ರಜಾಪತಿಃ...ಅಚ್ಛೇತಃ ॥** | ಮೊದಲನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| **ಧಾತಾ ದೀಕ್ಷಾಯಾಮ್ ॥** | ಎರಡನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| **ಸವಿತಾ ಭೃತ್ಯಾಮ್ ॥** | ಮೂರನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |

---

▲ [ಈ ಯಜಮಾನನು] **ಮನಸಾ**=ಮನಸ್ಸಿನಿಂದ; **ಅಂಧಃ**=ಅನ್ನಕಾರಣವಾದ ಯಜ್ಞವನ್ನು; **ಅಚ್ಛೇತಃ**=ಹೊಂದಲು ಬಯಸುತ್ತಾನೆ [ಆ ಯಜ್ಞತನುವು]; **ಪ್ರಜಾಪತಿಃ**=ಪ್ರಜಾಪತಿಸ್ವರೂಪವಾಗಿದೆ. ▲ **ದೀಕ್ಷಾಯಾಮ್**=ದೀಕ್ಷಾಸಂಸ್ಕಾರದಲ್ಲಿ; **ಧಾತಾ**=[ಯಜ್ಞತನುವು] ಧಾತೃದೇವಸ್ವರೂಪವಾಗಿದೆ. ▲ **ಭೃತ್ಯಾಮ್**=ಯಜ್ಞಭಿಕ್ಷೆಯಲ್ಲಿ; **ಸವಿತಾ**=ಯಜ್ಞತನುವು [ಸವಿತೃದೇವಸ್ವರೂಪವಾಗಿದೆ].

# ಪೂಷಾ ಸೋಮಕ್ರಯಣ್ಯಾಂ ವರುಣ ಉಪನದ್ಧೋಽಸುರಃ ಕ್ರೀಯಮಾಣೋ ಮಿತ್ರಃ ಕ್ರೀತಃ ಶಿಪಿವಿಷ್ಟ ಆಸಾದಿತೋ

---

ಪೂಷಾ । ಸೋಮಕ್ರಯಣ್ಯಾಮಿತಿ ಸೋಮ-ಕ್ರಯಣ್ಯಾಮ್ । ವರುಣಃ । ಉಪನದ್ಧ ಇತ್ಯುಪ-ನದ್ಧಃ । ಅಸುರಃ । ಕ್ರೀಯಮಾಣಃ । ಮಿತ್ರಃ । ಕ್ರೀತಃ । ಶಿಪಿವಿಷ್ಟ ಇತಿ ಶಿಪಿ-ವಿಷ್ಟಃ । ಆಸಾದಿತ ಇತ್ಯಾ-ಸಾದಿತಃ ।

---

| ಮಂತ್ರ | ವಿನಿಯೋಗ |
|---|---|
| ಪೂಷಾ ಸೋಮಕ್ರಯಣ್ಯಾಮ್ ॥ | ನಾಲ್ಕನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ವರುಣ ಉಪನದ್ಧಃ ॥ | ಐದನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ಅಸುರಃ ಕ್ರೀಯಮಾಣಃ ॥ | ಆರನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ಮಿತ್ರಃ ಕ್ರೀತಃ ॥ | ಏಳನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ಶಿಪಿವಿಷ್ಟ ಆಸಾದಿತಃ ॥ | ಎಂಟನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |

---

▲ **ಸೋಮಕ್ರಯಣ್ಯಾಮ್**=ಏಕಹಾಯನೀಸಂಸ್ಕಾರದಲ್ಲಿ; **ಪೂಷಾ**=[ಯಜ್ಞತನುವು] ಪೂಷದೇವತೆಯಾಗಿದೆ. ▲ **ಉಪನದ್ಧಃ**=ವಸ್ತ್ರದಿಂದ ಕಟ್ಟಲ್ಪಟ್ಟ ಸೋಮರೂಪವಾದ [ಯಜ್ಞತನುವು] **ವರುಣಃ**=ವರುಣನಿಗೆ ಸಮಾನವಾದ ರೂಪವುಳ್ಳದ್ದಾಗಿದೆ. ▲ **ಕ್ರೀಯಮಾಣಃ**=ಕ್ರಯ ಮಾಡಲ್ಪಡುತ್ತಿರುವ ಸೋಮನು; ***ಅಸುರಃ**=ಇಂದ್ರನಿಗೆ ಸಮಾನರೂಪವಾದ ಯಜ್ಞತನುವಾಗಿದ್ದಾನೆ. ▲ **ಕ್ರೀತಃ**=ಕ್ರೀತನಾದ [ಖರೀದಿ ಮಾಡಲ್ಪಟ್ಟ] ಸೋಮನು; **ಮಿತ್ರಃ**=ಮಿತ್ರಸಮಾನಶರೀರನಾದ ಯಜ್ಞನು. ▲ **ಆಸಾದಿತಃ**=ಯಜಮಾನನ ಬಲತೊಡೆಯಲ್ಲಿ ಇಟ್ಟುಕೊಳ್ಳಲ್ಪಟ್ಟ ಸೋಮನು; **ಶಿಪಿವಿಷ್ಟಃ**=ಶಿಪಿವಿಷ್ಟನಾಮಕವಾದ ವಿಷ್ಣು ಸಮಾನಶರೀರನಾದ ಯಜ್ಞನು.

---

* ಶತ್ರೂನ್ ಅಸ್ಯತಿ ಇತಿ ಅಸುರಃ । ಅಸೂನ್=ಪ್ರಾಣಾನ್ ರಾತಿ ಇತಿ ವಾ ಅಸುರಃ ॥

**ನರಂಧಿಷಃ ಪ್ರೋಹ್ಯಮಾಣೋಽಧಿಪತಿರಾಗತಃ ಪ್ರಜಾಪತಿಃ ಪ್ರಣೀಯಮಾನೋಽಗ್ನಿರಾಗ್ನೀಧ್ರೇ**

---

ನರಂಧಿಷಃ । ಪ್ರೋಹ್ಯಮಾಣ ಇತಿ ಪ್ರ-ಉಹ್ಯಮಾನಃ । ಅಧಿಪತಿರಿತ್ಯಧಿ-ಪತಿಃ । ಆಗತ ಇತ್ಯಾ-ಗತಃ । ಪ್ರಜಾಪತಿರಿತಿ ಪ್ರಜಾ-ಪತಿಃ । ಪ್ರಣೀಯಮಾನ ಇತಿ ಪ್ರ-ನೀಯಮಾನಃ । ಅಗ್ನಿಃ । ಆಗ್ನೀಧ್ರ ಇತ್ಯಾಗ್ನಿ-ಇಧ್ರೇ ।

---

| ಮಂತ್ರ | ವಿನಿಯೋಗ |
|---|---|
| **ನರಂಧಿಷಃ ಪ್ರೋಹ್ಯಮಾಣಃ ॥** | ಒಂಬತ್ತನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| **ಅಧಿಪತಿರಾಗತಃ ॥** | ಹತ್ತನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| **ಪ್ರಜಾಪತಿಃ ಪ್ರಣೀಯಮಾನಃ ॥** | ಹನ್ನೊಂದನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| **ಅಗ್ನಿರಾಗ್ನೀಧ್ರೇ ॥** | ಹನ್ನೆರಡನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |

---

▲ **ಪ್ರೋಹ್ಯಮಾಣಃ**=ಸೋಮಶಕಟದಿಂದ ಪ್ರಾಗ್ವಂಶಮಂಟಪಕ್ಕೆ ಒಯ್ಯಲ್ಪಡುತ್ತಿರುವ ಸೋಮನು; **ನರಂಧಿಷಃ**=ಮಾನವರಿಂದ ಆಧಾನ ಮಾಡಲ್ಪಟ್ಟಿರುವ ಅಗ್ನಿಸಮಾನ ಶರೀರನಾದ ಯಜ್ಞನು. ▲ **ಆಗತಃ**=ಪ್ರಾಗ್ವಂಶದಲ್ಲಿ ಆಸಂದಿಗೆ ತಂದಿರುವ ಸೋಮನು; **ಅಧಿಪತಿಃ**=ಅಧಿಕಪಾಲಕನಾದ ಆಹವನೀಯಾಗ್ನಿಸಮಾನರೂಪನಾದ ಯಜ್ಞನು. **ಪ್ರಣೀಯಮಾನಃ**=ಪ್ರಾಗ್ವಂಶದಿಂದ ಆಗ್ನೀಧ್ರಸ್ಥಾನಕ್ಕೆ ತಂದಿರುವ ಸೋಮನು; **ಪ್ರಜಾಪತಿಃ**=ಪ್ರಜಾಪತಿಸಮಾನಶರೀರನು. ▲ **ಆಗ್ನೀಧ್ರೇ**=ಆಗ್ನೀಧ್ರಸ್ಥಾನದಲ್ಲಿ ಇರುವ ಸೋಮನು; **ಅಗ್ನಿಃ**=ಅಗ್ನಿಸಮಾನರೂಪನು.

---

ಈ ಅನುವಾಕದಲ್ಲಿ ಮೂವತ್ತಮೂರು ಯಜ್ಞತನುಗಳೆಂಬ ಇಷ್ಟಕೆಗಳನ್ನು ಉಪಧಾನ ಮಾಡುವ ಮಂತ್ರಗಳಿವೆ. ಸೋಮಯಾಗವನ್ನು ಅನುಷ್ಠಿಸುವಾಗ ಯಜಮಾನನು ಮಾಡುವ ಸಂಕಲ್ಪದಿಂದ ಆರಂಭಿಸಿ, ಅವಭೃಥದವರೆಗೆ ಇರುವ ಮುಖ್ಯ ಸೋಮಯಾಗದ ಅಂಗಗಳನ್ನು ದೇವತಾರೂಪವಾದ ಇಷ್ಟಕೆಗಳೆಂದು ವರ್ಣಿಸಲಾಗಿದೆ.

# ಬೃಹಸ್ಪತಿರಾಗ್ನೀಧ್ರಾತ್ಪ್ರಣೀಯಮಾನ ಇಂದ್ರೋ ಹವಿರ್ಧಾನೇಽದಿತಿರಾಸಾದಿತೋ ವಿಷ್ಣುರುಪಾವಕ್ರಿಯಮಾಣೋಽಥರ್ವೋಽಪೋತ್ತೋ

ಬೃಹಸ್ಪತಿಃ। ಆಗ್ನೀಧ್ರಾದಿತ್ಯಾಗ್ನಿ-ಇಧ್ರಾತ್। ಪ್ರಣೀಯಮಾನ ಇತಿ ಪ್ರ-ನೀಯಮಾನಃ। ಇಂದ್ರಃ। ಹವಿರ್ಧಾನ ಇತಿ ಹವಿಃ-ಧಾನೇ। ಅದಿತಿಃ। ಆಸಾದಿತ ಇತ್ಯಾ-ಸಾದಿತಃ। ವಿಷ್ಣುಃ। ಉಪಾವಕ್ರಿಯಮಾಣ ಇತ್ಯುಪ-ಅವಕ್ರಿಯಮಾಣಃ। ಅಥರ್ವಾ। ಉಪೋತ್ತ ಇತ್ಯುಪ-ಉತ್ತಃ।

| ಮಂತ್ರ | ವಿನಿಯೋಗ |
|---|---|
| ಬೃಹಸ್ಪತಿ...ಪ್ರಣೀಯಮಾನಃ॥ | ಹದಿಮೂರನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ಇಂದ್ರೋ ಹವಿರ್ಧಾನೇ॥ | ಹದಿನಾಲ್ಕನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ಅದಿತಿರಾಸಾದಿತಃ॥ | ಹದಿನೈದನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ವಿಷ್ಣುರುಪಾವಕ್ರಿಯಮಾಣಃ॥ | ಹದಿನಾರನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ಅಥರ್ವೋಽಪೋತ್ತಃ॥ | ಹದಿನೇಳನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |

▲ ಆಗ್ನೀಧ್ರಾತ್=ಆಗ್ನೀಧ್ರದಿಂದ; ಪ್ರಣೀಯಮಾನಃ=ಹವಿರ್ಧಾನಮಂಟಪಕ್ಕೆ ಒಯ್ಯಲ್ಪಡುವ ಸೋಮನು; ಬೃಹಸ್ಪತಿಃ=ಬೃಹಸ್ಪತಿಸಮಾನಶರೀರನು; ▲ ಹವಿರ್ಧಾನೇ =ಹವಿರ್ಧಾನಮಂಟಪಕ್ಕೆ ಬಂದಿರುವ ಸೋಮನು; ಇಂದ್ರಃ=ಇಂದ್ರಸಮಾನಶರೀರನು. ▲ ಆಸಾದಿತಃ=ಆಸಂದಿಯಲ್ಲಿ ಸ್ಥಿತನಾಗಿರುವ ಸೋಮನು; ಅದಿತಿಃ=ಅದಿತಿಸಮಾನ ರೂಪನು; ▲ ಉಪಾವಕ್ರಿಯಮಾಣಃ=ಶಕಟದಿಂದ ಅಧಿಷವಣಫಲಕಗಳಲ್ಲಿ/ ಗ್ರಾವಗಳಲ್ಲಿ ಇಳಿಸಿರುವ ಸೋಮನು; ವಿಷ್ಣುಃ=ವಿಷ್ಣುಸಮಾನಶರೀರನು. ▲ ಉಪೋತ್ತಃ =ವಸತೀವರಿಗಳೆಂಬ ನೀರಿನಿಂದ ತೊಳೆದಿರುವ ಸೋಮನು; ಅಥರ್ವಾ=ಅಥರ್ವ ಮುನಿಯ ಸಮಾನಶರೀರನು.

**ಯಮೋಽಭಿಷುತೋಽಪೂತಪಾ ಆಧೂಯಮಾನೋ ವಾಯುಃ ಪೂಯಮಾನೋ ಮಿತ್ರಃ ಕ್ಷೀರಶ್ರೀರ್ಮಂಥೀ ಸಕ್ತುಶ್ರೀ–**

---

ಯಮಃ । ಅಭಿಷುತ ಇತ್ಯಭಿ–ಸುತಃ । ಅಪೂತಪಾ ಇತ್ಯಪೂತ–ಪಾಃ । ಆಧೂಯಮಾನ ಇತ್ಯಾ–ಧೂಯಮಾನಃ । ವಾಯುಃ । ಪೂಯಮಾನಃ । ಮಿತ್ರಃ । ಕ್ಷೀರಶ್ರೀರಿತಿ ಕ್ಷೀರ–ಶ್ರೀಃ । ಮಂಥೀ । ಸಕ್ತುಶ್ರೀರಿತಿ ಸಕ್ತು–ಶ್ರೀಃ ।

---

| ಮಂತ್ರ | ವಿನಿಯೋಗ |
|---|---|
| ಯಮೋಽಭಿಷುತಃ ॥ | ಹದಿನೆಂಟನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ಅಪೂತಪಾ ಆಧೂಯಮಾನಃ ॥ | ಹತ್ತೊಂಬತ್ತನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ವಾಯುಃ ಪೂಯಮಾನಃ ॥ | ಇಪ್ಪತ್ತನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ಮಿತ್ರಃ ಕ್ಷೀರಶ್ರೀಃ ॥ | ಇಪ್ಪತ್ತೊಂದನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ಮಂಥೀ ಸಕ್ತುಶ್ರೀಃ ॥ | ಇಪ್ಪತ್ತೆರಡನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |

---

▲ **ಅಭಿಷುತಃ**=ಗ್ರಾವಗಳಿಂದ ಚೂರು ಮಾಡಲ್ಪಟ್ಟ ಸೋಮನು; **ಯಮಃ**=ಯಮ ಸಮಾನಶರೀರನು. ▲ **ಆಧೂಯಮಾನಃ**=ಅದಾಭ್ಯಗ್ರಹದಲ್ಲಿ ಸೋಮಲತೆಯ ಚೂರುಗಳಿಂದ ಕಲಕಲ್ಪಡುವ ಸೋಮನು; **ಅಪೂತಪಾಃ**=ಅಶುದ್ಧವಾದ ವಸ್ತುಗಳನ್ನು ಒಣಗಿಸಿ ಶುದ್ಧಗೊಳಿಸುವ ಆದಿತ್ಯಸಮಾನಶರೀರನು. ▲ **ಪೂಯಮಾನಃ**=ದಶಾಪವಿತ್ರ ವೆಂಬ ಯಜ್ಞಸಾಧನದಿಂದ ಶೋಧಿಸಲ್ಪಡುವ ಸೋಮನು; **ವಾಯುಃ**=ವಾಯುಸಮಾನ ಶರೀರವಾಗಿದ್ದಾನೆ. ▲ **ಕ್ಷೀರಶ್ರೀಃ**=ಮೈತ್ರಾವರುಣಗ್ರಹದಲ್ಲಿ ಹಾಲಿನಿಂದ ಮಿಶ್ರಿತ ನಾದ ಸೋಮನು; **ಮಿತ್ರಃ**=ಮಿತ್ರಸಮಾನಶರೀರನಾಗಿರುತ್ತಾನೆ. ▲ **ಸಕ್ತುಶ್ರೀಃ**=ಮಂಥಿ ಗ್ರಹದಲ್ಲಿ ಹಿಟ್ಟಿನಿಂದ ಮಿಶ್ರಿತನಾಗುವ ಸೋಮನು; **ಮಂಥೀ**=ಮಂಥಿಗ್ರಹದೇವತೆ ಯಾದ ಇಂದ್ರನಿಗೆ ಸಮಾನವಾದ ಶರೀರವುಳ್ಳವನಾಗಿರುತ್ತಾನೆ.

# ವೈಶ್ವದೇವ ಉನ್ನೀತೋ ರುದ್ರ ಆಹುತೋ ವಾಯುರಾವೃತ್ತೋ ನೃಚಕ್ಷಾಃ ಪ್ರತಿಖ್ಯಾತೋ ಭಕ್ಷ ಆಗತಃ

ವೈಶ್ವದೇವ ಇತಿ ವೈಶ್ವ-ದೇವಃ । ಉನ್ನೀತ ಇತ್ಯುತ್-ನೀತಃ । ರುದ್ರಃ । ಆಹುತ ಇತ್ಯಾ-ಹುತಃ । ವಾಯುಃ । ಆವೃತ್ತ ಇತ್ಯಾ-ವೃತ್ತಃ । ನೃಚಕ್ಷಾ ಇತಿ ನೃ-ಚಕ್ಷಾಃ । ಪ್ರತಿಖ್ಯಾತ ಇತಿ ಪ್ರತಿ-ಖ್ಯಾತಃ । ಭಕ್ಷಃ । ಆಗತ ಇತ್ಯಾ-ಗತಃ ।

| ಮಂತ್ರ | ವಿನಿಯೋಗ |
|---|---|
| ವೈಶ್ವದೇವ ಉನ್ನೀತಃ ॥ | ಇಪ್ಪತ್ತಮೂರನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ರುದ್ರ ಆಹುತಃ ॥ | ಇಪ್ಪತ್ತನಾಲ್ಕನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ವಾಯುರಾವೃತ್ತಃ ॥ | ಇಪ್ಪತ್ತೈದನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ನೃಚಕ್ಷಾಃ ಪ್ರತಿಖ್ಯಾತಃ ॥ | ಇಪ್ಪತ್ತಾರನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ಭಕ್ಷ ಆಗತಃ ॥ | ಇಪ್ಪತ್ತೇಳನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |

▲ ಉನ್ನೀತಃ=ಚಮಸಗಳಲ್ಲಿ ತುಂಬಿಟ್ಟಿರುವ ಸೋಮನು; ವೈಶ್ವದೇವಃ=ವಿಶ್ವೇದೇವಸಮಾನಶರೀರನಾಗಿರುತ್ತಾನೆ. ▲ ಆಹುತಃ=ಅಗ್ನಿಯಲ್ಲಿ ಹೋಮ ಮಾಡಲ್ಪಟ್ಟ ಸೋಮನು; ರುದ್ರಃ=ರುದ್ರಸಮಾನಶರೀರನಾಗಿರುತ್ತಾನೆ. ▲ ಆವೃತ್ತಃ=ಸದಸ್ಸಿನಲ್ಲಿ ಭಕ್ಷಣಕ್ಕಾಗಿ ತರಲು ಹಿಂದಿರುಗಿಸಲ್ಪಟ್ಟ ಸೋಮನು; ವಾಯುಃ=ವಾಯುಸಮಾನ ಶರೀರನು. ▲ ಪ್ರತಿಖ್ಯಾತಃ=ಭಕ್ಷಣಕ್ಕಾಗಿ ವೀಕ್ಷಿಸಲ್ಪಟ್ಟ ಸೋಮನು; ನೃಚಕ್ಷಾಃ=ಮನುಷ್ಯರ ದೃಷ್ಟಿಗೆ ಸಮಾನವಾದ ಶರೀರವುಳ್ಳವನು; ▲ ಆಗತಃ=ಬಾಯಿಯಲ್ಲಿ ಹಾಕಿಕೊಂಡ ಸೋಮನು; ಭಕ್ಷಃ=ಎಲ್ಲವನ್ನೂ ಭಕ್ಷಿಸುವ *ವೈಶ್ವಾನರಸಮಾನಶರೀರನಾಗಿರುತ್ತಾನೆ.

* ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।
ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥
ವೈಶ್ವಾನರಾಗ್ನಿಯು ತಿಂದ ಅನ್ನವನ್ನು ಪಚನ ಮಾಡುತ್ತಾನೆ. -ಭಗವದ್ಗೀತೆ.

ಪಿತೃಣಾಂ ನಾರಾಶಗ್ಂಸೋಽಸುರಾತ್ತಃ

ಸಿಂಧುರವಭೃಥಮವಪ್ರಯನ್ತ್ಸಮುದ್ರೋಽವಗತಃ

---

ಪಿತೃಣಾಮ್ । ನಾರಾಶಗ್ಂಸಃ । ಅಸುಃ । ಆತ್ತಃ । ಸಿಂಧುಃ । ಅವಭೃಥಮಿತ್ಯವ-ಭೃಥಮ್ । ಅವಪ್ರಯನ್ನಿತ್ಯವ-ಪ್ರಯನ್ । ಸಮುದ್ರಃ । ಅವಗತ ಇತ್ಯವ-ಗತಃ ।

---

| ಮಂತ್ರ | ವಿನಿಯೋಗ |
|---|---|
| ಪಿತೃಣಾಂ ನಾರಾಶಗ್ಂಸಃ ॥ | ಇಪ್ಪತ್ತೆಂಟನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ಅಸುರಾತ್ತಃ ॥ | ಇಪ್ಪತ್ತೊಂಬತ್ತನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ಸಿಂಧುಃ...ಅವಪ್ರಯನ್ ॥ | ಮೂವತ್ತನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ಸಮುದ್ರೋಽವಗತಃ ॥ | ಮೂವತ್ತೊಂದನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |

---

🔔 ಪಿತೃಣಾಮ್ ನಾರಾಶಗ್ಂಸಃ=[ಭಕ್ಷಿತಶೇಷವಾಗಿ ವಸತೀವರಿಸಲಿಲಗಳಿಂದ ಮತ್ತೆ ಆಪ್ಯಾಯನ ಹೊಂದಿದ ಸೋಮನು] ಪಿತೃಸಮಾನಶರೀರನಾಗಿರುತ್ತಾನೆ. 🔔 ಆತ್ತಃ= ಅವಭೃಥಕ್ಕೆ ಹೋಗುವುದಕ್ಕಾಗಿ ತೆಗೆದುಕೊಂಡ ಸೋಮನು; ಅಸುಃ=ಪ್ರಾಣದೇವತಾ ಸಮಾನಶರೀರನಾಗಿರುತ್ತಾನೆ. 🔔 ಅವಭೃಥಮ್ ಅವಪ್ರಯನ್=ಅವಭೃಥಕ್ಕಾಗಿ ಮಾರ್ಗಮಧ್ಯದಲ್ಲಿ ಹೋಗುತ್ತಿರುವ ಸೋಮನು; ಸಿಂಧುಃ=ನದೀದೇವತಾಸಮಾನ ಶರೀರನಾಗಿರುತ್ತಾನೆ. 🔔 ಅವಗತಃ=ಅವಭೃಥದೇಶವನ್ನು ಹೊಂದಿದ ಸೋಮನು; ಸಮುದ್ರಃ=ಸಮುದ್ರದೇವತಾಸಮಾನಶರೀರನಾಗಿರುತ್ತಾನೆ.

---

ಈ ಯಜಮಾನನು ಮನಸ್ಸಿನಿಂದ ಅನ್ನಕಾರಣವಾದ ಯಜ್ಞವನ್ನು ಅನುಷ್ಠಿಸಲು ಸಂಕಲ್ಪಿಸಿದ್ದಾನೆ. ಈ ರೀತಿ ಸಂಕಲ್ಪಸ್ಥಿತಿಯನ್ನು ಪಡೆದಿರುವ ಯಜ್ಞಪುರುಷನ ವಿಗ್ರಹವು ಪ್ರಜಾಪತಿ ಎನಿಸಿಕೊಳ್ಳುತ್ತದೆ. ಈ ಪ್ರಜಾಪತಿಯೇ ಯಜ್ಞಪುರುಷನ ಶರೀರ=ಯಜ್ಞ ತನು. ಆ ಪ್ರಜಾಪತಿರೂಪವಾದ ಇಷ್ಟಕೆಯೇ! ನಿನ್ನನ್ನು ಉಪಧಾನ ಮಾಡುತ್ತೇನೆ.

ಹೀಗೆಯೇ ಸೋಮಯಾಗದ ದೀಕ್ಷಾಸಂಸ್ಕಾರವೆಂಬ ಯಜ್ಞತನುವು ಧಾತೃದೇವನ

# ಸಲಿಲಃ ಪ್ರಪ್ಲುತಃ ಸುವರುದ್ಯೃಚಂ ಗತಃ ॥ ೨೫-9 ॥

[ರುದ್ರ ಏಕವಿಗ್ಂಶತಿಶ್ಚ ॥]

---

ಸಲಿಲಃ । ಪ್ರಪ್ಲುತ ಇತಿ ಪ್ರ-ಪ್ಲುತಃ । ಸುವಃ । ಉದ್ಯೃಚಮಿತ್ಯುತ್-ಋಚಮ್ ।

ಗತಃ ॥ (೨೫) ॥

---

| ಮಂತ್ರ | ವಿನಿಯೋಗ |
|---|---|
| ಸಲಿಲಃ ಪ್ರಪ್ಲುತಃ ॥ | ಮೂವತ್ತೆರಡನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |
| ಸುವರುದ್ಯೃಚಂ ಗತಃ ॥ | ಮೂವತ್ತಮೂರನೆಯ ಯಜ್ಞತನ್ವಿಷ್ಟಕೋಪಧಾನಕ್ಕಾಗಿ. |

---

▲ ಪ್ರಪ್ಲುತಃ=ನದೀಜಲದಲ್ಲಿ ಹಾಕಿದ ಸೋಮನು; ಸಲಿಲಃ=ಜಲದೇವತಾಸ್ವರೂಪನಾಗಿರುತ್ತಾನೆ. ▲ ಉದ್ಯೃಚಮ್ ಗತಃ=ಅಂತಿಮ ಋಗ್ರೂಪವನ್ನು [ಸಮಾಪ್ತಿರೂಪವನ್ನು] ಹೊಂದಿದ ಸೋಮನು; ಸುವಃ=ಸ್ವರ್ಗನಿವಾಸಿದೇವತಾಸಮಾನಶರೀರನಾಗಿರುತ್ತಾನೆ. [ಹೇ! ಇಷ್ಟಕೆಯೇ! ಅಂತಹ ಯಜ್ಞತನುಸ್ವರೂಪವಾಗಿರುವ ನಿನ್ನನ್ನು ಉಪಧಾನ ಮಾಡುತ್ತೇನೆ]

---

ಸ್ವರೂಪವಾಗಿದೆ. ಸೋಮಯಾಗದ ಪ್ರಾರಂಭದಿಂದ ನಡೆಯುವ ಅನೇಕ ಕಲಾಪಗಳ ಯಜ್ಞಪುರುಷನ ತನುಗಳು ಹೀಗೆ ಅನೇಕ ದೇವತಾಸ್ವರೂಪವಾಗಿವೆ.

ಹೇ! ಇಷ್ಟಕೆಗಳೇ! ಅಂತಹ ಯಜ್ಞತನುಗಳ ದೇವತಾರೂಪಗಳಾಗಿರುವ ನಿಮ್ಮನ್ನು ಉಪಧಾನ ಮಾಡುತ್ತೇನೆ.

ಎಲ್ಲ ಮಂತ್ರಗಳಿಗೂ ಹೀಗೆಯೇ ಅನ್ವಯಿಸಬೇಕು. 'ಯಜ್ಞತನು' ಎಂಬ ನಾಮಧೇಯಕ್ಕೆ ಅನುಗುಣವಾಗಿ ಭಾಷ್ಯಕಾರರು ವಿವರಿಸಿರುವ ಕ್ರಮವನ್ನು ಅನುಸರಿಸಿ ಅರ್ಥವನ್ನು ತಿಳಿಸಲಾಗಿದೆ.

ಈ ವಿವರಣೆಯಲ್ಲಿ 'ಅಸುರಃ' 'ಭಕ್ಷಃ' 'ನರಂಧಿಷಃ' ಮೊದಲಾದ ಪದಗಳಿಗೆ ಅವಯವಾರ್ಥವನ್ನು ಅನುಸರಿಸಿ ಅರ್ಥವನ್ನು ತಿಳಿಸಲಾಗಿದೆ.

ದೇವತೆಗಳೂ ಮೂವತ್ತಮೂರು ಮಂದಿ. ಹಾಗೆಯೇ ಯಜ್ಞತನ್ವಿಷ್ಟಕೆಗಳೂ ಮೂವತ್ತಮೂರು. ಈ ಸಾಮ್ಯವನ್ನು ಬ್ರಾಹ್ಮಣವಾಕ್ಯದಲ್ಲಿ ಹೇಳಲಾಗಿದೆ.

## ವಿನಿಯೋಗಸಂಗ್ರಹ

ಪ್ರಜೇತಿ ಯಜ್ಞತನವಸ್ತ್ರಯಸ್ತ್ರಿಂಶತ್ಸಮೀರಿತಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–33

## ॥ ದಶಮೋಽನುವಾಕಃ ॥

ಕೃತ್ತಿಕಾ ನಕ್ಷತ್ರಮಗ್ನಿರ್ದೇವತಾಽಗ್ನೇ ರುಚಃ ಸ್ಥ

ಪ್ರಜಾಪತೇರ್ಧಾತುಃ ಸೋಮಸ್ಯರ್ಚೇ ತ್ವಾ

---

ಕೃತ್ತಿಕಾಃ । ನಕ್ಷತ್ರಮ್ । ಅಗ್ನಿಃ । ದೇವತಾ । ಅಗ್ನೇಃ । ರುಚಃ । ಸ್ಥ । ಪ್ರಜಾಪತೇರಿತಿ

ಪ್ರಜಾ–ಪತೇಃ । ಧಾತುಃ । ಸೋಮಸ್ಯ । ಋಚೇ । ತ್ವಾ ।

---

ಹಿಂದಿನ ಒಂಬತ್ತನೆಯ ಅನುವಾಕದಲ್ಲಿ ಯಜ್ಞತನ್ವಿಷ್ಟಕೆಗಳು ಹೇಳಲ್ಪಟ್ಟಿವೆ. ಈ ಹತ್ತನೆಯ ಅನುವಾಕದಲ್ಲಿ ನಕ್ಷತ್ರೇಷ್ಟಕೆಗಳು ಹೇಳಲ್ಪಡುತ್ತವೆ. ಈ ನಕ್ಷತ್ರೇಷ್ಟಕೆಗಳು ಇಪ್ಪತ್ತೇಳು. ಇವುಗಳ ಉಪಧಾನಕ್ರಮವು ಶ್ರೌತಸೂತ್ರದಲ್ಲಿ ಹೇಳಲ್ಪಟ್ಟಿದೆ.

---

| ಮಂತ್ರ | ವಿನಿಯೋಗ |
|---|---|
| **ಕೃತ್ತಿಕಾಃ...ಜ್ಯೋತಿಷೇ ತ್ವಾ ॥** | ಕೃತ್ತಿಕಾನಕ್ಷತ್ರೇಷ್ಟಕೋಪಧಾನಕ್ಕಾಗಿ. |

---

▲ [ಹೇ! ಇಷ್ಟಕೆಯೇ!] **ಕೃತ್ತಿಕಾಃ ನಕ್ಷತ್ರಮ್**=ನೀನು ಸಮೂಹರೂಪವಾದ ಕೃತ್ತಿಕಾ ನಕ್ಷತ್ರರೂಪವಾಗಿರುವೆ; **ಅಗ್ನಿಃ ದೇವತಾ**=ನಿನಗೆ ಅಗ್ನಿಯು ದೇವತೆಯಾಗಿರುತ್ತಾನೆ. **ಅಗ್ನೇಃ ರುಚಃ ಸ್ಥ**=ನೀವು ಅಗ್ನಿದೇವನ ದೀಪ್ತಿಗಳಾಗಿರುತ್ತೀರಿ; [ಹಾಗೆಯೇ] **ಪ್ರಜಾಪತೇಃ**=ಪ್ರಜಾಪಾಲಕನಾದ ಬ್ರಹ್ಮನ; **ಧಾತುಃ**=ಉತ್ಪಾದಕನಾದ ಬ್ರಹ್ಮನ; **ಸೋಮಸ್ಯ**=ಚಂದ್ರನ; ರುಚಃ ಸ್ಥ=ಪ್ರಕಾಶರೂಪವಾಗಿರುತ್ತೀರಿ; [ಎಲೈ! ನಕ್ಷತ್ರರೂಪಳಾದ ಇಷ್ಟಕೆಯೇ!] **ತ್ವಾ**=ನಿನ್ನನ್ನು; **ಋಚೇ**=ಸ್ತುತಿರೂಪಮಂತ್ರಸಿದ್ಧಿಗಾಗಿ [ಉಪಧಾನ ಮಾಡುತ್ತೇನೆ].

**ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ**

**ರೋಹಿಣೀ ನಕ್ಷತ್ರಂ ಪ್ರಜಾಪತಿರ್ದೇವತಾ**

---

ರುಚೇ । ತ್ವಾ । ದ್ಯುತೇ । ತ್ವಾ । ಭಾಸೇ । ತ್ವಾ । ಜ್ಯೋತಿಷೇ । ತ್ವಾ । ರೋಹಿಣೀ । ನಕ್ಷತ್ರಮ್ । ಪ್ರಜಾಪತಿರಿತಿ ಪ್ರಜಾ-ಪತಿಃ । ದೇವತಾ ।

---

| ಮಂತ್ರ | ವಿನಿಯೋಗ |
|---|---|
| *ರೋಹಿಣೀ..ಋಚೇ..ಜ್ಯೋತಿಷೇ ತ್ವಾ ॥ | ರೋಹಿಣೀನಕ್ಷತ್ರೇಷ್ಟಕೋಪಧಾನಕ್ಕಾಗಿ. |

---

ತ್ವಾ=ನಿನ್ನನ್ನು; ರುಚೇ=ಶರೀರಕಾಂತಿಸಿದ್ಧಿಗಾಗಿ; ತ್ವಾ=ನಿನ್ನನ್ನು; ದ್ಯುತೇ=ಅಗ್ನಿದೀಪ್ತಿ ಸಿದ್ಧಿಗಾಗಿ; ತ್ವಾ=ನಿನ್ನನ್ನು; ಭಾಸೇ=ಸೂರ್ಯಪ್ರಕಾಶಸಿದ್ಧಿಗಾಗಿ; ತ್ವಾ=ನಿನ್ನನ್ನು; ಜ್ಯೋತಿಷೇ=ಚಂದ್ರಪ್ರಕಾಶಸಿದ್ಧಿಗಾಗಿ ಉಪಧಾನ ಮಾಡುತ್ತೇನೆ. 🔔 ರೋಹಿಣೀ ನಕ್ಷತ್ರಮ್=[ಹೇ! ಇಷ್ಟಕೆಯೇ!] ನೀನು ರೋಹಿಣೀನಕ್ಷತ್ರರೂಪವಾಗಿರುವೆ; ಪ್ರಜಾಪತಿಃ ದೇವತಾ=ನಿನಗೆ ಪ್ರಜಾಪತಿಯು ದೇವತೆಯಾಗಿರುತ್ತಾನೆ. ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶ ಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ.

---

ಈ ನಕ್ಷತ್ರೇಷ್ಟಕೆಗಳಲ್ಲಿ ಕೃತ್ತಿಕಾನಕ್ಷತ್ರೇಷ್ಟಕೆಯು ಮೊದಲನೆಯದು. ಕೃತ್ತಿಕಾ ನಕ್ಷತ್ರವು ಅಂಬಾ, ದುಲಾ, ನಿತತ್ನಿ, ಅಭ್ರಯಂತೀ, ಮೇಘಯಂತೀ, ವರ್ಷಯಂತೀ, ಚುಪುಣೀಕಾ ಎಂಬ ಹೆಸರಿನ ನಕ್ಷತ್ರಗಳ ಸಮೂಹರೂಪವಾಗಿದೆ.

ಕೃತ್ತಿಕಾನಕ್ಷತ್ರವು ಏಳು ನಕ್ಷತ್ರಗಳ ಸಮೂಹರೂಪವಾಗಿರುವುದರಿಂದ 'ರುಚಃ ಸ್ಥ' ಎಂದು ಬಹುವಚನವಿದೆ. ಪುನರ್ವಸೂ, ಫಲ್ಗುನೀ, ವಿಶಾಖೇ, ವಿಚೃತೌ, ಅಶ್ವಯುಜೌ -ಇವು ದ್ವಿವಚನದಲ್ಲಿ ಇವೆ.

---

* ಇಲ್ಲಿಂದ ಮುಂದಿನ ಇಪ್ಪತ್ತಾರು ನಕ್ಷತ್ರೇಷ್ಟಕೆಯ ಮಂತ್ರಗಳಲ್ಲಿಯೂ ದೇವತಾಶಬ್ದದ ಬಳಿಕ 'ಋಚೇ... ಜ್ಯೋತಿಷೇ ತ್ವಾ' ಎಂಬ ಮಂತ್ರಭಾಗವನ್ನು ಅನುಷಂಗ ಮಾಡಬೇಕೆಂದು ಸಾಯಣಭಾಷ್ಯವಿದೆ.

# ಮೃಗಶೀರ್ಷಂ ನಕ್ಷತ್ರಗ್ಂ ಸೋಮೋ ದೇವತಾಽರ್ದ್ರಾ ನಕ್ಷತ್ರಗ್ಂ ರುದ್ರೋ ದೇವತಾ

ಮೃಗಶೀರ್ಷಮಿತಿ ಮೃಗ-ಶೀರ್ಷಮ್ । ನಕ್ಷತ್ರಮ್ । ಸೋಮಃ । ದೇವತಾ । ಆರ್ದ್ರಾ । ನಕ್ಷತ್ರಮ್ । ರುದ್ರಃ । ದೇವತಾ ।

| ಮಂತ್ರ | ವಿನಿಯೋಗ |
|---|---|
| **ಮೃಗಶೀರ್ಷಂ..ಋಚೇ..ಜ್ಯೋತಿಷೇ ತ್ವಾ ॥** | ಮೃಗಶೀರ್ಷನಕ್ಷತ್ರೇಷ್ಟಕೋಪಧಾನಕ್ಕಾಗಿ. |
| **ಆರ್ದ್ರಾ..ಋಚೇ..ಜ್ಯೋತಿಷೇ ತ್ವಾ ॥** | ಆರ್ದ್ರಾನಕ್ಷತ್ರೇಷ್ಟಕೋಪಧಾನಕ್ಕಾಗಿ. |

▲ **ಮೃಗಶೀರ್ಷಮ್ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಮೃಗಶಿರೋನಕ್ಷತ್ರ ರೂಪಳು; **ಸೋಮಃ ದೇವತಾ**=ನಿನಗೆ ಸೋಮನು ದೇವತೆಯಾಗಿರುತ್ತಾನೆ; ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪ ಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ. ▲ **ಆರ್ದ್ರಾ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಆರ್ದ್ರಾನಕ್ಷತ್ರರೂಪಳು; **ರುದ್ರಃ ದೇವತಾ**=ನಿನಗೆ ರುದ್ರನು ದೇವತೆಯಾಗಿರುತ್ತಾನೆ; ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ.

ಪ್ರಜಾಪತಿ ಮತ್ತು ಧಾತೃ-ಈ ಪದಗಳಿಗೆ ಬ್ರಹ್ಮನೆಂಬ ಅರ್ಥವು ಸಮಾನವಾಗಿ ಇದ್ದರೂ, ಪ್ರಜಾಪಾಲಕತ್ವ-ಪ್ರಜೋತ್ಪಾದಕತ್ವಗುಣಗಳಿಂದ ಬೇರೆಯಾಗಿ ವರ್ಣಿತವಾಗಿದೆ. ದ್ಯುತಿ-ಭಾಃ-ಜ್ಯೋತಿಃ ಈ ಶಬ್ದಗಳು ದೀಪ್ತಿವಾಚಕಗಳಾಗಿದ್ದರೂ ಅಗ್ನಿ-ಸೂರ್ಯ-ಹಾಗೂ ಚಂದ್ರನ ದೀಪ್ತಿರೂಪವಾಗಿ ಬೇರೆಬೇರೆಯಾಗಿ ವರ್ಣಿತವಾಗಿದೆ.

**ಪುನರ್ವಸೂ ನಕ್ಷತ್ರಮದಿತಿರ್ದೇವತಾ ತಿಷ್ಯೋ ನಕ್ಷತ್ರಂ ಬೃಹಸ್ಪತಿರ್ದೇವತಾಽಽಶ್ರೇಷಾ ನಕ್ಷತ್ರಗ್ಂ ಸರ್ಪಾ ದೇವತಾ**

---

ಪುನರ್ವಸೂ ಇತಿ ಪುನಃ-ವಸೂ । ನಕ್ಷತ್ರಮ್ । ಅದಿತಿಃ । ದೇವತಾ । ತಿಷ್ಯಃ । ನಕ್ಷತ್ರಮ್ । ಬೃಹಸ್ಪತಿಃ । ದೇವತಾ । ಆಶ್ರೇಷಾ ಇತ್ಯಾ-ಶ್ರೇಷಾಃ । ನಕ್ಷತ್ರಮ್ । ಸರ್ಪಾಃ । ದೇವತಾ ।

---

| ಮಂತ್ರ | ವಿನಿಯೋಗ |
|---|---|
| ಪುನರ್ವಸೂ..ಋಚೇ..ಜ್ಯೋತಿಷೇ ತ್ವಾ ॥ | ಪುನರ್ವಸೂನಕ್ಷತ್ರೇಷ್ಟಕೋಪಧಾನಕ್ಕಾಗಿ. |
| ತಿಷ್ಯೋ...ಋಚೇ...ಜ್ಯೋತಿಷೇ ತ್ವಾ ॥ | ತಿಷ್ಯನಕ್ಷತ್ರೇಷ್ಟಕೋಪಧಾನಕ್ಕಾಗಿ. |
| ಆಶ್ರೇಷಾ...ಋಚೇ...ಜ್ಯೋತಿಷೇ ತ್ವಾ ॥ | ಆಶ್ರೇಷಾನಕ್ಷತ್ರೇಷ್ಟಕೋಪಧಾನಕ್ಕಾಗಿ. |

---

▲ **ಪುನರ್ವಸೂ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಪುನರ್ವಸುನಕ್ಷತ್ರರೂಪಳಾಗಿರುವೆ; **ಅದಿತಿಃ ದೇವತಾ**=ನಿನಗೆ ಅದಿತಿದೇವತೆಯು ದೇವತೆಯಾಗಿರುತ್ತಾಳೆ. ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ. ▲ **ತಿಷ್ಯಃ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಪುಷ್ಯನಕ್ಷತ್ರರೂಪಳಾಗಿರುತ್ತೀಯೆ; **ಬೃಹಸ್ಪತಿಃ ದೇವತಾ**=ನಿನಗೆ ಬೃಹಸ್ಪತಿಯು ದೇವತೆಯಾಗಿರುತ್ತಾನೆ; ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ. ▲ **ಆಶ್ರೇಷಾಃ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಆಶ್ರೇಷಾ ನಕ್ಷತ್ರರೂಪಳಾಗಿರುತ್ತೀಯೆ; **ಸರ್ಪಾಃ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ಸರ್ಪಗಳು ದೇವತೆಯಾಗಿವೆ. ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ

# ಮಘಾ ನಕ್ಷತ್ರಂ ಪಿತರೋ ದೇವತಾ ಫಲ್ಗುನೀ ನಕ್ಷತ್ರ [ನಕ್ಷತ್ರಮ್(೨೬)ಅರ್ಯಮಾ]ಮರ್ಯಮಾ ದೇವತಾ

---

ಮಘಾಃ । ನಕ್ಷತ್ರಮ್ । ಪಿತರಃ । ದೇವತಾ । ಫಲ್ಗುನೀ ಇತಿ । ನಕ್ಷತ್ರಮ್ । (೨೬) ।

ಅರ್ಯಮಾ । ದೇವತಾ ।

---

| ಮಂತ್ರ | ವಿನಿಯೋಗ |
|---|---|
| **ಮಘಾ..ಋಚೇ..ಜ್ಯೋತಿಷೇ ತ್ವಾ ॥** | ಮಘಾನಕ್ಷತ್ರೇಷ್ಟಕೋಪಧಾನಕ್ಕಾಗಿ. |
| **ಫಲ್ಗುನೀ..ಋಚೇ..ಜ್ಯೋತಿಷೇ ತ್ವಾ ॥** | **ಪೂರ್ವಫಲ್ಗುನೀನಕ್ಷತ್ರೇಷ್ಟಕೋಪಧಾನಕ್ಕಾಗಿ.** |

---

ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ. ▲ **ಮಘಾಃ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಮಘಾನಕ್ಷತ್ರರೂಪಳಾಗಿರುತ್ತೀಯೆ. **ಪಿತರಃ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ಪಿತೃದೇವತೆಗಳೇ ದೇವತೆಗಳು; ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ. ▲ **ಫಲ್ಗುನೀ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಪೂರ್ವಫಲ್ಗುನೀನಕ್ಷತ್ರರೂಪವಾಗಿರುವೆ; **ಅರ್ಯಮಾ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ಅರ್ಯಮನು ದೇವತೆಯಾಗಿರುತ್ತಾನೆ. ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ.

---

ಹೇ! ಕೃತ್ತಿಕಾನಕ್ಷತ್ರೇಷ್ಟಕೆಯೇ! ನಿನ್ನ ಸಮೂಹವು ಅಗ್ನಿದೇವನ ದೀಪ್ತಿಯಾಗಿದೆ. ನೀವು ಪ್ರಜಾಪತಿ-ಧಾತೃ-ಹಾಗೂ ಸೋಮನ ಪ್ರಕಾಶವಾಗಿರುತ್ತೀರಿ. ನಿನ್ನನ್ನು ಸ್ತುತಿರೂಪ ಮಂತ್ರಸಿದ್ಧಿಗಾಗಿಯೂ, ಶರೀರಕಾಂತಿ, ಅಗ್ನಿದೀಪ್ತಿ, ಸೂರ್ಯ-ಚಂದ್ರಪ್ರಕಾಶಸಿದ್ಧಿಗಾಗಿ

# ಫಲ್ಗುನೀ ನಕ್ಷತ್ರಂ ಭಗೋ ದೇವತಾ ಹಸ್ತೋ ನಕ್ಷತ್ರಗ್ಂ ಸವಿತಾ ದೇವತಾ

ಫಲ್ಗುನೀ ಇತಿ । ನಕ್ಷತ್ರಮ್ । ಭಗಃ । ದೇವತಾ । ಹಸ್ತಃ । ನಕ್ಷತ್ರಮ್ । ಸವಿತಾ । ದೇವತಾ ।

| ಮಂತ್ರ | ವಿನಿಯೋಗ |
| --- | --- |
| ಫಲ್ಗುನೀ..ಋಚೇ..ಜ್ಯೋತಿಷೇ ತ್ವಾ ॥ | ಉತ್ತರಫಲ್ಗುನೀನಕ್ಷತ್ರೇಷ್ಟಕೋಪಧಾನಕ್ಕಾಗಿ. |
| ಹಸ್ತೋ..ಋಚೇ..ಜ್ಯೋತಿಷೇ ತ್ವಾ ॥ | ಹಸ್ತನಕ್ಷತ್ರೇಷ್ಟಕೋಪಧಾನಕ್ಕಾಗಿ. |

▲ ಫಲ್ಗುನೀ ನಕ್ಷತ್ರಮ್=[ಹೇ! ಇಷ್ಟಕೆಯೇ!] ನೀನು ಉತ್ತರಫಲ್ಗುನೀನಕ್ಷತ್ರರೂಪವಾಗಿರುವೆ; ಭಗಃ ದೇವತಾ=ಈ ನಕ್ಷತ್ರಕ್ಕೆ [ನಿನಗೆ] ಭಗನು ದೇವತೆಯಾಗಿರುತ್ತಾನೆ. ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ. ▲ ಹಸ್ತಃ ನಕ್ಷತ್ರಮ್=[ಎಲೈ! ಇಷ್ಟಕೆಯೇ!] ನೀನು ಹಸ್ತನಕ್ಷತ್ರರೂಪಳಾಗಿರುತ್ತೀಯೆ; ಸವಿತಾ ದೇವತಾ=ಈ ನಕ್ಷತ್ರಕ್ಕೆ [ನಿನಗೆ} ಸವಿತೃದೇವನು ದೇವತೆಯಾಗಿರುತ್ತಾನೆ, ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ; ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ.

ಉಪಧಾನ ಮಾಡುತ್ತೇನೆ.

ಎಲೈ! ರೋಹಿಣೀನಕ್ಷತ್ರೇಷ್ಟಕೆಯೇ! ಪ್ರಜಾಪತಿಯು ನಿನಗೆ ದೇವತೆಯಾಗಿರುವನು. ನಿನ್ನನ್ನು ಮಂತ್ರಾದಿಸಿದ್ಧಿಗಾಗಿ ಉಪಧಾನ ಮಾಡುತ್ತೇನೆ.

ಎಲೈ! ಮೃಗಶೀರ್ಷನಕ್ಷತ್ರೇಷ್ಟಕೆಯೇ! ಸೋಮನು ನಿನಗೆ ದೇವತೆ. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಉಪಧಾನ ಮಾಡುತ್ತೇನೆ.

# ಚಿತ್ರಾ ನಕ್ಷತ್ರಮಿಂದ್ರೋ ದೇವತಾ ಸ್ವಾತೀ ನಕ್ಷತ್ರಂ ವಾಯುರ್ದೇವತಾ

---

ಚಿತ್ರಾ । ನಕ್ಷತ್ರಮ್ । ಇಂದ್ರಃ । ದೇವತಾ । ಸ್ವಾತೀ । ನಕ್ಷತ್ರಮ್ । ವಾಯುಃ । ದೇವತಾ ।

---

| ಮಂತ್ರ | ವಿನಿಯೋಗ |
|---|---|
| ಚಿತ್ರಾ...ಋಚೇ...ಜ್ಯೋತಿಷೇ ತ್ವಾ ॥ | ಚಿತ್ರಾನಕ್ಷತ್ರೇಷ್ಟಕೋಪಧಾನಕ್ಕಾಗಿ. |
| ಸ್ವಾತೀ...ಋಚೇ...ಜ್ಯೋತಿಷೇ ತ್ವಾ ॥ | ಸ್ವಾತೀನಕ್ಷತ್ರೇಷ್ಟಕೋಪಧಾನಕ್ಕಾಗಿ. |

---

▲ **ಚಿತ್ರಾ ನಕ್ಷತ್ರಮ್**=[ಎಲೈ! ಇಷ್ಟಕೆಯೇ!] ನೀನು ಚಿತ್ರಾನಕ್ಷತ್ರರೂಪಳಾಗಿರುವೆ. **ಇಂದ್ರಃ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ಪರಮೈಶ್ವರ್ಯಯುಕ್ತನಾದ ತ್ವಷ್ಟನು ದೇವತೆಯಾಗಿರುತ್ತಾನೆ. ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ. ▲ **ಸ್ವಾತೀ ನಕ್ಷತ್ರಮ್**=[ಎಲೈ! ಇಷ್ಟಕೆಯೇ!] ನೀನು ಸ್ವಾತೀನಕ್ಷತ್ರರೂಪಳಾಗಿದ್ದೀಯೆ; **ವಾಯುಃ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ವಾಯುದೇವನು ದೇವತೆಯಾಗಿರುತ್ತಾನೆ; ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ.

---

ಎಲೈ! ಆರ್ದ್ರಾನಕ್ಷತ್ರೇಷ್ಟಕೆಯೇ! ರುದ್ರನು ನಿನಗೆ ದೇವತೆಯಾಗಿರುತ್ತಾನೆ. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಉಪಧಾನ ಮಾಡುತ್ತೇನೆ.

ಎಲೈ! ಪುನರ್ವಸೂನಕ್ಷತ್ರೇಷ್ಟಕೆಯೇ! ನಿನಗೆ ಅದಿತಿಯು ದೇವತೆಯಾಗಿರುತ್ತಾಳೆ. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಉಪಧಾನ ಮಾಡುತ್ತೇನೆ.

ಎಲೈ! ಪುಷ್ಯನಕ್ಷತ್ರೇಷ್ಟಕೆಯೇ! ನಿನಗೆ ಬೃಹಸ್ಪತಿಯು ದೇವತೆಯಾಗಿರುತ್ತಾನೆ. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಉಪಧಾನ ಮಾಡುತ್ತೇನೆ.

# ವಿಶಾಖೇ ನಕ್ಷತ್ರಮಿಂದ್ರಾಗ್ನೀ ದೇವತಾಽನೂರಾಧಾ ನಕ್ಷತ್ರಂ ಮಿತ್ರೋ ದೇವತಾ

---

ವಿಶಾಖೇ ಇತಿ ವಿ-ಶಾಖೇ । ನಕ್ಷತ್ರಮ್ । ಇಂದ್ರಾಗ್ನೀ ಇತೀಂದ್ರ-ಅಗ್ನೀ । ದೇವತಾ । ಅನೂರಾಧಾ ಇತ್ಯನು-ರಾಧಾಃ । ನಕ್ಷತ್ರಮ್ । ಮಿತ್ರಃ । ದೇವತಾ ।

---

| ಮಂತ್ರ | ವಿನಿಯೋಗ |
|---|---|
| ವಿಶಾಖೇ...ಋಚೇ...ಜ್ಯೋತಿಷೇ ತ್ವಾ ॥ | ವಿಶಾಖೇನಕ್ಷತ್ರೇಷ್ಟಕೋಪಧಾನಕ್ಕಾಗಿ. |
| ಅನೂರಾಧಾ..ಋಚೇ..ಜ್ಯೋತಿಷೇ ತ್ವಾ ॥ | ಅನೂರಾಧಾನಕ್ಷತ್ರೇಷ್ಟಕೋಪಧಾನಕ್ಕಾಗಿ. |

---

🔔 **ವಿಶಾಖೇ ನಕ್ಷತ್ರಮ್**=[ಎಲೈ! ಇಷ್ಟಕೆಯೇ!] ನೀನು ವಿಶಾಖಾನಕ್ಷತ್ರರೂಪಳಾಗಿರುತ್ತೀಯೆ. **ಇಂದ್ರಾಗ್ನೀ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ಇಂದ್ರಾಗ್ನಿಗಳು ದೇವತೆಯಾಗಿರುತ್ತಾರೆ. ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ. 🔔 **ಅನೂರಾಧಾಃ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಅನೂರಾಧಾನಕ್ಷತ್ರರೂಪಳು; **ಮಿತ್ರಃ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ಸರ್ವಮಿತ್ರನಾದ ಮಿತ್ರದೇವನು ದೇವತೆ. ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ.

---

ಎಲೈ! ಆಶ್ರೇಷಾನಕ್ಷತ್ರೇಷ್ಟಕೆಯೇ! ನಿನಗೆ ಸರ್ಪಗಳು ದೇವತೆಯಾಗಿವೆ. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

ಎಲೈ! ಮಘಾನಕ್ಷತ್ರೇಷ್ಟಕೆಯೇ! ನಿನಗೆ ಪಿತೃದೇವತೆಗಳೇ ದೇವತೆಗಳಾಗಿರುತ್ತಾರೆ. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಉಪಧಾನ ಮಾಡುತ್ತೇನೆ.

ಎಲೈ! ಪೂರ್ವಫಲ್ಗುನೀನಕ್ಷತ್ರೇಷ್ಟಕೆಯೇ! ನಿನಗೆ ಅರ್ಯಮನು ದೇವತೆಯಾಗಿದ್ದಾನೆ.

# ರೋಹಿಣೀ ನಕ್ಷತ್ರಮಿಂದ್ರೋ ದೇವತಾ ವಿಚೃತೌ ನಕ್ಷತ್ರಂ ಪಿತರೋ ದೇವತಾ-

ರೋಹಿಣೀ । ನಕ್ಷತ್ರಮ್ । ಇಂದ್ರಃ । ದೇವತಾ । ವಿಚೃತಾವಿತಿ ವಿ-ಚೃತೌ । ನಕ್ಷತ್ರಮ್ । ಪಿತರಃ । ದೇವತಾ ।

| ಮಂತ್ರ | ವಿನಿಯೋಗ |
| --- | --- |
| ರೋಹಿಣೀ..ಋಚೇ..ಜ್ಯೋತಿಷೇ ತ್ವಾ ॥ | ರೋಹಿಣೀ(ಜ್ಯೇಷ್ಠಾ)ನಕ್ಷತ್ರೇಷ್ಟಕೋಪಧಾನಕ್ಕಾಗಿ. |
| ವಿಚೃತೌ..ಋಚೇ..ಜ್ಯೋತಿಷೇ ತ್ವಾ ॥ | ವಿಚೃನ್ನಕ್ಷತ್ರೇಷ್ಟಕೋಪಧಾನಕ್ಕಾಗಿ.(ಮೂಲ) |

▲ **ರೋಹಿಣೀ ನಕ್ಷತ್ರಮ್**=[ಎಲೈ! ಇಷ್ಟಕೆಯೇ!] ನೀನು ರೋಹಿಣೀನಕ್ಷತ್ರ (ಜ್ಯೇಷ್ಠಾ)ರೂಪಳಾಗಿರುವೆ; **ಇಂದ್ರಃ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ಇಂದ್ರನು ದೇವತೆಯಾಗಿರುತ್ತಾನೆ; ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ. ▲ **ವಿಚೃತೌ ನಕ್ಷತ್ರಮ್**=[ಎಲೈ! ಇಷ್ಟಕೆಯೇ!] ನೀನು ವಿಚೃತ(ಮೂಲ)ನಕ್ಷತ್ರರೂಪಳಾಗಿರುವೆ; **ಪಿತರಃ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ಪಿತೃಗಳು [ಆಧಾನದಿಂದ ಪಾಲಿಸುವ] [ನಿರ್‌ಋತಿಯು] ದೇವತೆಯಾಗಿರುತ್ತಾನೆ. ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ.

---

ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

ಎಲೈ! ಉತ್ತರಫಲ್ಗುನೀನಕ್ಷತ್ರೇಷ್ಟಕೆಯೇ! ನಿನಗೆ ಭಗನು ದೇವತೆ. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

ಎಲೈ! ಹಸ್ತನಕ್ಷತ್ರೇಷ್ಟಕೆಯೇ! ನಿನಗೆ ಸವಿತೃದೇವನು ದೇವತೆ. ನಿನ್ನನ್ನು ಮಂತ್ರ

## –ऽಷಾಢಾ ನಕ್ಷತ್ರಮಾಪೋ ದೇವತಾऽಷಾಢಾ ನಕ್ಷತ್ರಂ ವಿಶ್ವೇ ದೇವಾ ದೇವತಾ

ಅಷಾಢಾಃ । ನಕ್ಷತ್ರಮ್ । ಆಪಃ । ದೇವತಾ । ಅಷಾಢಾಃ । ನಕ್ಷತ್ರಮ್ । ವಿಶ್ವೇ । ದೇವಾಃ । ದೇವತಾ ।

| ಮಂತ್ರ | ವಿನಿಯೋಗ |
|---|---|
| **ಅಷಾಢಾ..ಋಚೇ..ಜ್ಯೋತಿಷೇ ತ್ವಾ ॥** | ಪೂರ್ವಾಷಾಢಾನಕ್ಷತ್ರೇಷ್ಟಕೋಪಧಾನಕ್ಕಾಗಿ. |
| **ಅಷಾಢಾ..ಋಚೇ..ಜ್ಯೋತಿಷೇ ತ್ವಾ ॥** | ಉತ್ತರಾಷಾಢಾನಕ್ಷತ್ರೇಷ್ಟಕೋಪಧಾನಕ್ಕಾಗಿ. |

🔔 **ಅಷಾಢಾಃ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಪೂರ್ವಾಷಾಢಾನಕ್ಷತ್ರ ರೂಪಳಾಗಿರುವೆ; **ಆಪಃ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ಅಬ್ದೇವತೆಗಳೇ ದೇವತೆಗಳು; ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ. 🔔 **ಅಷಾಢಾಃ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಉತ್ತರಾಷಾಢಾನಕ್ಷತ್ರರೂಪಳಾಗಿರುವೆ; **ವಿಶ್ವೇ ದೇವಾಃ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ವಿಶ್ವೇದೇವರು ದೇವತೆಗಳು; ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ.

---

ಸ್ತುತಿಯೇ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

ಎಲೈ! ಚಿತ್ರಾನಕ್ಷತ್ರೇಷ್ಟಕೆಯೇ! ನಿನಗೆ ಪರಮೈಶ್ವರ್ಯಯುಕ್ತನಾಗಿ ಇಂದ್ರನೆಂಬ ಹೆಸರಿನ ತ್ವಷ್ಟೃದೇವನು ದೇವತೆಯಾಗಿರುತ್ತಾನೆ. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

# ಶ್ರೋಣಾ ನಕ್ಷತ್ರಂ ವಿಷ್ಣುರ್ದೇವತಾ ಶ್ರವಿಷ್ಠಾ ನಕ್ಷತ್ರಂ ವಸವೋ [ವಸವಃ(೨೭)] ದೇವತಾ

ಶ್ರೋಣಾ । ನಕ್ಷತ್ರಮ್ । ವಿಷ್ಣುಃ । ದೇವತಾ । ಶ್ರವಿಷ್ಠಾಃ । ನಕ್ಷತ್ರಮ್ । ವಸವಃ ।(೨೭)। ದೇವತಾ ।

| ಮಂತ್ರ | ವಿನಿಯೋಗ |
|---|---|
| ಶ್ರೋಣಾ...ಋಚೇ...ಜ್ಯೋತಿಷೇ ತ್ವಾ ॥ | ಶ್ರೋಣಾನಕ್ಷತ್ರೇಷ್ಟಕೋಪಧಾನಕ್ಕಾಗಿ. |
| ಶ್ರವಿಷ್ಠಾಃ...ಋಚೇ...ಜ್ಯೋತಿಷೇ ತ್ವಾ ॥ | ಶ್ರವಿಷ್ಠಾನಕ್ಷತ್ರೇಷ್ಟಕೋಪಧಾನಕ್ಕಾಗಿ. |

▲ **ಶ್ರೋಣಾ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಶ್ರವಣನಕ್ಷತ್ರರೂಪಳು; **ವಿಷ್ಣುಃ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ವಿಷ್ಣುವು ದೇವತೆಯಾಗಿರುತ್ತಾನೆ. ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪ ಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ. ▲ **ಶ್ರವಿಷ್ಠಾಃ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಧನಿಷ್ಠಾನಕ್ಷತ್ರರೂಪಳಾಗಿರುವೆ. **ವಸವಃ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ವಸುಗಳು ದೇವತೆ. ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ.

---

ಎಲೈ! ಸ್ವಾತೀನಕ್ಷತ್ರೇಷ್ಟಕೆಯೇ! ನಿನಗೆ ವಾಯುವು ದೇವತೆ. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

ಎಲೈ! ವಿಶಾಖೇನಕ್ಷತ್ರೇಷ್ಟಕೆಯೇ! ನಿನಗೆ ಇಂದ್ರಾಗ್ನಿಗಳು ದೇವತೆಗಳು. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

ಎಲೈ! ಅನೂರಾಧಾನಕ್ಷತ್ರೇಷ್ಟಕೆಯೇ! ನಿನಗೆ ಮಿತ್ರದೇವನು ದೇವತೆ. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

## ಶತಭಿಷಙ್ನಕ್ಷತ್ರಮಿಂದ್ರೋ ದೇವತಾ ಪ್ರೋಷ್ಠಪದಾ ನಕ್ಷತ್ರಮಜ ಏಕಪಾದ್ದೇವತಾ

ಶತಭಿಷಗಿತಿ ಶತ-ಭಿಷಕ್ । ನಕ್ಷತ್ರಮ್ । ಇಂದ್ರಃ । ದೇವತಾ । ಪ್ರೋಷ್ಠಪದಾ ಇತಿ ಪ್ರೋಷ್ಠ-ಪದಾಃ । ನಕ್ಷತ್ರಮ್ । ಅಜಃ । ಏಕಪಾದಿತ್ಯೇಕ-ಪಾತ್ । ದೇವತಾ ।

| ಮಂತ್ರ | ವಿನಿಯೋಗ |
|---|---|
| **ಶತಭಿಷಕ್..ಋಚೇ..ಜ್ಯೋತಿಷೇ ತ್ವಾ ॥** | ಶತಭಿಷಙ್ನಕ್ಷತ್ರೇಷ್ಟಕೋಪಧಾನಕ್ಕಾಗಿ. |
| **ಪ್ರೋಷ್ಠಪದಾ...ಜ್ಯೋತಿಷೇ ತ್ವಾ ॥** | ಪೂರ್ವಪ್ರೋಷ್ಠಪದಾನಕ್ಷತ್ರೇಷ್ಟಕೋಪಧಾನಕ್ಕಾಗಿ. |

▲ **ಶತಭಿಷಕ್ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಶತತಾರಾನಕ್ಷತ್ರರೂಪಳು; **ಇಂದ್ರಃ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ಪರಮೈಶ್ವರ್ಯಯುಕ್ತನಾದ ವರುಣನು ದೇವತೆ; **ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ**=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ. ▲ **ಪ್ರೋಷ್ಠಪದಾಃ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಪೂರ್ವ ಭಾದ್ರಪದಾನಕ್ಷತ್ರರೂಪಳು; **ಅಜಃ ಏಕಪಾತ್ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ಏಕಪಾದಜನು ದೇವತೆಯಾಗಿರುತ್ತಾನೆ; **ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ**=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿ ಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರ ಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ.

**'ರೋಹಿಣಿ'** ಎಂದು ಶ್ರುತಿಯು ತಿಳಿಸುತ್ತಿರುವ ಹೇ! ಜ್ಯೇಷ್ಠಾನಕ್ಷತ್ರೇಷ್ಟಕೆಯೇ! ನಿನಗೆ ಇಂದ್ರನು ದೇವತೆ. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

**'ವಿಚೃತ್'** ಎಂದು ಶ್ರುತಿಯು ತಿಳಿಸುತ್ತಿರುವ ಹೇ! ಮೂಲನಕ್ಷತ್ರೇಷ್ಟಕೆಯೇ! ನಿನಗೆ ಆಧಾನದಿಂದ ಪಾಲಿಸುವವನಾಗಿ ಪಿತೃ ಎಂದು ಶ್ರುತಿಯು ತಿಳಿಸುತ್ತಿರುವ ನಿರ್‌ಋತಿ

ಪ್ರೋಷ್ಠಪದಾ ನಕ್ಷತ್ರಮಹಿರ್ಬುಧ್ನಿಯೋ ದೇವತಾ ರೇವತೀ

ನಕ್ಷತ್ರಂ ಪೂಷಾ ದೇವತಾ-

---

ಪ್ರೋಷ್ಠಪದಾ ಇತಿ ಪ್ರೋಷ್ಠ-ಪದಾಃ । ನಕ್ಷತ್ರಮ್ । ಅಹಿಃ । ಬುಧ್ನಿಯಃ । ದೇವತಾ ।

ರೇವತೀ । ನಕ್ಷತ್ರಮ್ । ಪೂಷಾ । ದೇವತಾ ।

---

| ಮಂತ್ರ | ವಿನಿಯೋಗ |
|---|---|
| ಪ್ರೋಷ್ಠಪದಾ...ಜ್ಯೋತಿಷೇ ತ್ವಾ॥ | ಉತ್ತರಪ್ರೋಷ್ಠಪದಾನಕ್ಷತ್ರೇಷ್ಟಕೋಪಧಾನಕ್ಕಾಗಿ. |
| ರೇವತೀ..ಋಚೇ..ಜ್ಯೋತಿಷೇ ತ್ವಾ॥ | ರೇವತೀನಕ್ಷತ್ರೇಷ್ಟಕೋಪಧಾನಕ್ಕಾಗಿ. |

---

▲ **ಪ್ರೋಷ್ಠಪದಾಃ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಉತ್ತರಭಾದ್ರಪದಾ ನಕ್ಷತ್ರರೂಪಳು; **ಅಹಿಃ ಬುಧ್ನಿಯಃ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ಅಹಿಬುಧ್ನಿಯನು ದೇವತೆ; ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ= ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ. ▲ **ರೇವತೀ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ರೇವತೀನಕ್ಷತ್ರರೂಪಳಾಗಿರುವೆ; **ಪೂಷಾ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ಪೂಷದೇವನು ದೇವತೆಯಾಗಿರುತ್ತಾನೆ; ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ.

---

ದೇವತೆಯು ದೇವತೆಯಾಗಿರುತ್ತಾನೆ. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

ಎಲೈ! ಪೂರ್ವಾಷಾಢಾನಕ್ಷತ್ರೇಷ್ಟಕೆಯೇ! ನಿನಗೆ ಅಬ್ದೇವತೆಗಳೇ ದೇವತೆಗಳು. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

ಎಲೈ! ಉತ್ತರಾಷಾಢಾನಕ್ಷತ್ರೇಷ್ಟಕೆಯೇ! ನಿನಗೆ ವಿಶ್ವೇದೇವರು ದೇವತೆಗಳು. ನಿನ್ನನ್ನು

# –ऽಶ್ವಯುಜೌ ನಕ್ಷತ್ರಮಶ್ವಿನೌ ದೇವತಾಽಪಭರಣೀ

# ರ್ನಕ್ಷತ್ರಂ ಯಮೋ ದೇವತಾ

---

ಅಶ್ವಯುಜಾವಿತ್ಯಶ್ವ–ಯುಜೌ । ನಕ್ಷತ್ರಮ್ । ಅಶ್ವಿನೌ । ದೇವತಾ । ಅಪಭರಣೀ ರಿತ್ಯಪ–ಭರಣೀಃ । ನಕ್ಷತ್ರಮ್ । ಯಮಃ । ದೇವತಾ ।

---

| ಮಂತ್ರ | ವಿನಿಯೋಗ |
|---|---|
| **ಅಶ್ವಯುಜೌ..ಋಚೇ..ಜ್ಯೋತಿಷೇ ತ್ವಾ ॥** | ಅಶ್ವಯುಜ್ನಕ್ಷತ್ರೇಷ್ಟಕೋಪಧಾನಕ್ಕಾಗಿ. |
| **ಅಪಭರಣೀಃ..ಋಚೇ..ಜ್ಯೋತಿಷೇ ತ್ವಾ ॥** | ಅಪಭರಣೀನಕ್ಷತ್ರೇಷ್ಟಕೋಪಧಾನಕ್ಕಾಗಿ. |

---

▲ **ಅಶ್ವಯುಜೌ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಅಶ್ವಿನೀನಕ್ಷತ್ರರೂಪದವ ಳಾಗಿರುತ್ತೀಯೆ; **ಅಶ್ವಿನೌ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ಅಶ್ವಿನೀದೇವತೆಗಳು ದೇವತೆಗಳಾಗಿದ್ದಾರೆ; ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿ ದೀಪ್ತಿಸಿದ್ಧಿಗಾಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ; ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ. ▲ **ಅಪಭರಣೀಃ ನಕ್ಷತ್ರಮ್**=[ಹೇ! ಇಷ್ಟಕೆಯೇ!] ನೀನು ಭರಣೀನಕ್ಷತ್ರರೂಪಳಾಗಿರುವೆ; **ಯಮಃ ದೇವತಾ**=ಈ ನಕ್ಷತ್ರಕ್ಕೆ [ನಿನಗೆ] ಯಮನು ದೇವತೆ; ಋಚೇ ತ್ವಾ ರುಚೇ ತ್ವಾ ದ್ಯುತೇ ತ್ವಾ ಭಾಸೇ ತ್ವಾ ಜ್ಯೋತಿಷೇ ತ್ವಾ=ನಿನ್ನನ್ನು ಸ್ತುತಿರೂಪಮಂತ್ರಸಿದ್ಧಿಗಾಗಿಯೂ, ಶರೀರಕಾಂತಿಸಿದ್ಧಿಗಾಗಿಯೂ, ಅಗ್ನಿದೀಪ್ತಿಸಿದ್ಧಿಗಾ ಗಿಯೂ, ಸೂರ್ಯಪ್ರಕಾಶಸಿದ್ಧಿಗಾಗಿಯೂ, ಚಂದ್ರಪ್ರಕಾಶಸಿದ್ಧಿಗಾಗಿಯೂ ಉಪಧಾನ ಮಾಡುತ್ತೇನೆ.

---

ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಉಪಧಾನ ಮಾಡುತ್ತೇನೆ.

ಎಲೈ! ಶ್ರವಣನಕ್ಷತ್ರೇಷ್ಟಕೆಯೇ! ನಿನಗೆ ವಿಷ್ಣುವು ದೇವತೆ. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

ಎಲೈ! ಧನಿಷ್ಠಾನಕ್ಷತ್ರೇಷ್ಟಕೆಯೇ! ನಿನಗೆ ವಸುಗಳೇ ದೇವತೆಗಳು. ನಿನ್ನನ್ನು ಮಂತ್ರ ಸ್ತುತಿಯೇ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

# *ಪೂರ್ಣಾ ಪಶ್ಚಾದ್ಯತ್ತೇ ದೇವಾ ಅದಧುಃ ॥ ೨೮-10 ॥

[ಫಲ್ಗುನೀ ನಕ್ಷತ್ರಂ ವಸವಸ್ತ್ರಯಸ್ತ್ರಿಗ್ಂಶಚ್ಚ ॥]

---

ಪೂರ್ಣಾ । ಪಶ್ಚಾತ್ । ಯತ್ । ತೇ । ದೇವಾಃ । ಅದಧುಃ ॥ (೨೮) ॥

---

ಪೂರ್ಣಾ ಪಶ್ಚಾದುತ ಪೂರ್ಣಾ ಪುರಸ್ತಾದುನ್ಮಧ್ಯತಃ ಪೌರ್ಣಮಾಸೀ ಜಿಗಾಯ ।

ತಸ್ಯಾಂ ದೇವಾ ಅಧಿಸಂವಸಂತ ಉತ್ತಮೇ ನಾಕ ಇಹ ಮಾದಯಂತಾಮ್ ॥

ಯತ್ತೇ ದೇವಾ ಅದಧುರ್ಭಾಗಧೇಯಮಮಾವಾಸ್ಯೇ ಸಂವಸಂತೋ ಮಹಿತ್ವಾ ।

ಸಾ ನೋ ಯಜ್ಞಂ ಪಿಪೃಹಿ ವಿಶ್ವವಾರೇ ರಯಿಂ ನೋ ಧೇಹಿ ಸುಭಗೇ ಸುವೀರಮ್ ॥

---

| ಮಂತ್ರ | ವಿನಿಯೋಗ |
|---|---|
| * ಪೂರ್ಣಾ ಪಶ್ಚಾತ್...ಮಾದಯಂತಾಮ್ ॥ | ಪೌರ್ಣಮಾಸೀಷ್ಟಕೋಪಧಾನಕ್ಕಾಗಿ. |
| * ಯತ್ತೇ ದೇವಾ...ಸುವೀರ್ಯಮ್ ॥ | ಅಮಾವಾಸ್ಯೇಷ್ಟಕೋಪಧಾನಕ್ಕಾಗಿ. |

---

ಎಲೈ! ಶತತಾರಾನಕ್ಷತ್ರೇಷ್ಟಕೆಯೇ! ನಿನಗೆ 'ಇಂದ್ರ' ಎಂದು ಶ್ರುತಿಯು ತಿಳಿಸುತ್ತಿರುವ ವರುಣನು ದೇವತೆ. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

ಹೇ! ಪೂರ್ವಭಾದ್ರಪದಾನಕ್ಷತ್ರೇಷ್ಟಕೆಯೇ! ನಿನಗೆ ಏಕಪಾದಜನು ದೇವತೆಯಾಗಿರುತ್ತಾನೆ. ನಿನ್ನನ್ನು ಮಂತ್ರಸ್ತುತಿ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

ಎಲೈ! ಉತ್ತರಭಾದ್ರಪದಾನಕ್ಷತ್ರೇಷ್ಟಕೆಯೇ! ನಿನಗೆ ಅಹಿಬುಧ್ನಿಯನು ದೇವತೆಯಾಗಿರುತ್ತಾನೆ. ನಿನ್ನನ್ನು ಮಂತ್ರಸ್ತುತಿಯೇ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

---

* ಈ ಮಂತ್ರಗಳ ಪ್ರತೀಕಪಾಠವು ಇಲ್ಲಿದೆ. ಈ ಮಂತ್ರಗಳು ತೈ. ಸಂ. 3. 5. 1 ದಲ್ಲಿ ಇದ್ದು ಸಂಪುಟ 9 ರಲ್ಲಿ ವಿವರಿಸಲ್ಪಟ್ಟಿವೆ. ಇಲ್ಲಿ ತಾತ್ಪರ್ಯವನ್ನು ಮಾತ್ರ ನೀಡಿದೆ.

ಹೇ! ರೇವತೀನಕ್ಷತ್ರೇಷ್ಟಕೆಯೇ! ನಿನಗೆ ಪೂಷನು ದೇವತೆ. ನಿನ್ನನ್ನು ಮಂತ್ರಸ್ತುತಿ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

ಹೇ! ಅಶ್ವಿನೀನಕ್ಷತ್ರೇಷ್ಟಕೆಯೇ! ನಿನಗೆ ಅಶ್ವಿನೀದೇವತೆಗಳು ದೇವತೆಯರು. ನಿನ್ನನ್ನು ಮಂತ್ರಸ್ತುತಿ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

ಎಲೈ! ಭರಣೀನಕ್ಷತ್ರೇಷ್ಟಕೆಯೇ! ನಿನಗೆ ಯಮನು ದೇವತೆ. ನಿನ್ನನ್ನು ಮಂತ್ರಸ್ತುತಿ ಮುಂತಾದ ಸಿದ್ಧಿಗಾಗಿ ಇಲ್ಲಿ ಉಪಧಾನ ಮಾಡುತ್ತೇನೆ.

ಜ್ಯೋತಿಃಶಾಸ್ತ್ರಾನುಸಾರವಾಗಿ ನಕ್ಷತ್ರವಾಚಕಗಳಲ್ಲಿ ದ್ವಿವಚನವೂ ಬಹುವಚನವೂ ಬಂದಿದೆ. ಈ ಮಂತ್ರಗಳಲ್ಲಿ ರೋಹಿಣೀ, ವಿಚೃತ, ಇಂದ್ರ, ಪ್ರಜಾಪತಿ ಈ ಶಬ್ದಗಳಿಗೆ ಸಂದರ್ಭಾನುಸಾರವಾಗಿ ಅವಯವಾರ್ಥವನ್ನು ಇಟ್ಟುಕೊಳ್ಳಲಾಗಿದೆ.

**ಪೂರ್ಣಾ ಪಶ್ಚಾತ್ ತಾತ್ಪರ್ಯ** :–ಎಲೈ! ಹುಣ್ಣಿಮೆಯೇ! ನೀನು ಯಜ್ಞಭೂಮಿಯ ಪೂರ್ವ–ಪಶ್ಚಿಮ–ಮಧ್ಯಭಾಗಗಳಲ್ಲಿಯೂ ಪೂರ್ಣಳಾಗಿ ಪೂರ್ಣಚಂದ್ರನಿಂದ ಕೂಡಿದವಳಾಗಿ ಸರ್ವಶ್ರೇಷ್ಠಳಾಗಿ ಪ್ರಕಾಶಿಸುವೆ. ಈ ಪೌರ್ಣಮಾಸಿಯಲ್ಲಿ ಎಲ್ಲಾ ದೇವತೆಗಳೂ ವಾಸಿಸುತ್ತಾ ಈ ಯಜ್ಞದ ಹವಿರ್ಭಾಗವನ್ನು ಪಡೆದು ತೃಪ್ತರಾಗಲಿ. ಸ್ವರ್ಗದಲ್ಲಿ ನಮ್ಮನ್ನು ಸಂತೋಷಪಡಿಸಲಿ.

**ಯತ್ತೇ ದೇವಾ ತಾತ್ಪರ್ಯ** :–ಅಮಾವಾಸ್ಯೆಯೇ! ನಿನ್ನ ಮಹಿಮೆಯಿಂದ ದೇವತೆಗಳು ನನ್ನಲ್ಲಿ ವಾಸಿಸುತ್ತಾರೆ. ನಿನಗೆ ಈ ಹವಿಸ್ಸನ್ನು ನಿನ್ನ ಭಾಗವನ್ನಾಗಿ ಕೊಟ್ಟಿದ್ದಾರೆ. ನೀನು ಎಲ್ಲ ಅನಿಷ್ಟಗಳನ್ನೂ ನಿವಾರಿಸತಕ್ಕವಳು. ನೀನು ಭಾಗ್ಯಶಾಲಿನಿ. ಇಂತಹ ನೀನು ನಮಗೆ ಧನಸಮೃದ್ಧಿಯನ್ನೂ ಪುತ್ರಸಂಪತ್ತನ್ನೂ ಕರುಣಿಸು.

---

## ವಿನಿಯೋಗಸಂಗ್ರಹ

**ಕೃತ್ತಿ1-27 ನಕ್ಷತ್ರೇಷ್ಟಕಾಃ ಸ್ಯುಃ ಸಪ್ತವಿಂಶತಿರೀರಿತಾಃ ।**
**28ಋಚೇ ತ್ವಾ ಸರ್ವಶೇಷಃ ಸ್ಯಾತ್ ಪೂರ್ಣಾ29-30ಯತ್ತ ಇತಿ ದ್ವಯಮ್ ॥**

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–30

# ॥ ಏಕಾದಶೋಽನುವಾಕಃ ॥

## ಮಧುಶ್ಚ ಮಾಧವಶ್ಚ ವಾಸಂತಿಕಾವೃತೂ

ಮಧುಃ । ಚ । ಮಾಧವಃ । ಚ । ವಾಸಂತಿಕೌ । ಋತೂ ಇತಿ ।

ಹಿಂದಿನ ಹತ್ತನೆಯ ಅನುವಾಕದಲ್ಲಿ ನಕ್ಷತ್ರೇಷ್ಟಕಾಮಂತ್ರಗಳು ಉಕ್ತವಾಗಿವೆ. ಈ ಹನ್ನೊಂದನೆಯ ಅನುವಾಕದಲ್ಲಿ ಋತವ್ಯೇಷ್ಟಕೆಗಳ ಮಂತ್ರಗಳು ಉಕ್ತವಾಗಿವೆ.

| ಮಂತ್ರ | ವಿನಿಯೋಗ |
| --- | --- |
| ಮಧುಶ್ಚ...ವಾಸಂತಿಕಾವೃತೂ<br>* ಅಗ್ನೇರಂತಃ...ಸಂವಿಶಂತು ॥ | ಪ್ರಥಮಚಿತಿಯಲ್ಲಿ ಎರಡು ಋತವ್ಯೇಷ್ಟಕೋಪಧಾನಕ್ಕಾಗಿ. |

🔔 **ಮಧುಃ ಚ ಮಾಧವಃ ಚ**=ಚೈತ್ರಮಾಸವೂ, ವೈಶಾಖಮಾಸವೂ; **ವಾಸಂತಿಕೌ**= ವಸಂತ ಋತುವಿನ ಅವಯವಗಳಾದ; **ಋತೂ**=ಋತುಗಳಾಗಿವೆ. [ಎಲೈ! ಋತು ವಿಶೇಷವೇ!] ಅಗ್ನೇಃ ಅಂತಃ=[ನೀನು] ಚಯನದ ಒಳಭಾಗದಲ್ಲಿ; ಶ್ಲೇಷಃ ಅಸಿ= ದೃಢಪಡಿಸಲು ಸೇರಿಸಿದವಳಾಗಿರುತ್ತೀಯೆ; ಮಮ=ಚಯನ ಮಾಡುತ್ತಿರುವ ನನ್ನ; ಜ್ಯೈಷ್ಠ್ಯಾಯ=ಉತ್ಕರ್ಷಕ್ಕಾಗಿ; ದ್ಯಾವಾಪೃಥಿವೀ=ದ್ಯುಲೋಕಭೂಲೋಕಗಳು; ಕಲ್ಪೇತಾಮ್=[ತಮ್ಮ ಕಾರ್ಯಗಳಲ್ಲಿ] ಸಮರ್ಥವಾಗಿರಲಿ. ಆಪಃ=ನೀರುಗಳೂ; ಓಷಧೀಃ=ಸಸ್ಯವರ್ಗಗಳೂ; ಕಲ್ಪಂತಾಮ್=[ತಮ್ಮ ಕಾರ್ಯಗಳಲ್ಲಿ] ಸಮರ್ಥವಾಗಿರಲಿ.

* ಇಲ್ಲಿಂದ ಮುಂದಿನ ಐದು ಮಂತ್ರಗಳಲ್ಲಿಯೂ ಈ ಅಂಶವನ್ನು ಈ ಕೆಳಗಿನಂತೆ ಅನುಷಂಗ ಮಾಡಬೇಕು. ಬಳಿಕ 'ತಯಾ ದೇವತಯಾಂಗಿರಸ್ವದ್ಧ್ರುವಾ ಸೀದ' ಎಂದು ಇಷ್ಟಕೋಪಧಾನವನ್ನು ಮಾಡಬೇಕು.

**ಮಧುಶ್ಚ ಮಾಧವಶ್ಚ ವಾಸಂತಿಕಾವೃತೂ ಅಗ್ನೇರಂತಃ ಶ್ಲೇಷೋಽಸಿ ಕಲ್ಪೇತಾಂ ದ್ಯಾವಾಪೃಥಿವೀ ಕಲ್ಪಂತಾಮಾಪ ಓಷಧೀಃ ಕಲ್ಪಂತಾಮಗ್ನಯಃ ಪೃಥಙ್ಮಮ ಜ್ಯೈಷ್ಠ್ಯಾಯ ಸವ್ರತಾಃ ಯೇಽಗ್ನಯಸ್ಸಮನಸೋಽಂತರಾ ದ್ಯಾವಾಪೃಥಿವೀ ಶೈಶಿರಾವೃತೂ ಅಭಿ ಕಲ್ಪಮಾನಾ ಇಂದ್ರಮಿವ ದೇವಾ ಅಭಿ ಸಂ ವಿಶಂತು ತಯಾ ದೇವತಯಾಂಗಿರಸ್ವದ್ಧ್ರುವಾ ಸೀದ ॥**

# ಶುಕ್ರಶ್ಚ ಶುಚಿಶ್ಚ ಗ್ರೈಷ್ಮಾವೃತೂ

ಶುಕ್ರಃ । ಚ । ಶುಚಿಃ । ಚ । ಗ್ರೈಷ್ಮೌ । ಋತೂ ಇತಿ ।

| ಮಂತ್ರ | ವಿನಿಯೋಗ |
|---|---|
| ಶುಕ್ರಶ್ಚ...ಗ್ರೈಷ್ಮಾವೃತೂ ॥ | ದ್ವಿತೀಯಚಿತಿಯಲ್ಲಿ ಎರಡು ಋತವ್ಯೇಷ್ಟಕೆಗಳ ಉಪಧಾನಕ್ಕಾಗಿ. |

ಅಗ್ನಯಃ=ಆಹವನೀಯಾದಿ ಅಗ್ನಿಗಳು; ಪೃಥಕ್=ಪ್ರತ್ಯೇಕವಾಗಿ; ಕಲ್ಪಂತಾಮ್=[ತಮ್ಮ ಕಾರ್ಯಗಳಲ್ಲಿ] ಪ್ರವೃತ್ತವಾಗಲಿ; ಸವ್ರತಾಃ=ಸಮಾನಕಾರ್ಯವುಳ್ಳವುಗಳಾಗಿ; ಸಮನಸಃ =ಸಮಾನವಾದ ಮನಸ್ಸಿನಿಂದ ಕೂಡಿಕೊಂಡಿರುವ; ಯೇ=ಯಾವ; ದ್ಯಾವಾಪೃಥಿವೀ =ದ್ಯುಲೋಕ-ಭೂಲೋಕಗಳ; ಅಂತರಾ=ಮಧ್ಯದಲ್ಲಿ; ಅಗ್ನಯಃ=ಅಗ್ನಿಗಳು ಇವೆಯೋ [ಆ ಅಗ್ನಿಗಳು] *ಶೈಶಿರೌ ಋತೂ=ಶಿಶಿರಋತುಸಂಬಂಧಿಯಾದ ಅವಯವಗಳನ್ನು; ಅಭಿಕಲ್ಪಮಾನಾಃ=ಸಮರ್ಥಗಳನ್ನಾಗಿ ಮಾಡುತ್ತಾ; ದೇವಾಃ=ಉಳಿದ ದೇವತೆಗಳು; ಇಂದ್ರಮ್ ಇವ=ಇಂದ್ರನನ್ನು [ಸುತ್ತಲೂ ಸೇರಿಕೊಂಡು ಸೇವಿಸುವಂತೆ] ಅಭಿ ಸಂವಿಶಂತು=ಋತುದೇವತೆಗಳನ್ನು ಸೇವಿಸಲಿ. 🔔 **ಶುಕ್ರಃ ಚ ಶುಚಿಃ ಚ**= ಜ್ಯೇಷ್ಠಮಾಸವೂ, ಆಷಾಢಮಾಸವೂ; **ಗ್ರೈಷ್ಮೌ ಋತೂ**=ಗ್ರೀಷ್ಮಋತುವಿನ ಅವಯವ ವಾದ ಋತುಗಳಾಗಿವೆ. *ಅಗ್ನೇಃ ಅಂತಃ=[ನೀನು] ಚಯನದ...ಅಭಿಸಂವಿಶಂತು =ಋತುದೇವತೆಗಳನ್ನು ಸೇವಿಸಲಿ.

* ವಸಂತ, ಗ್ರೀಷ್ಮ, ವರ್ಷ, ಶರತ್ ಹಾಗೂ ಹೇಮಂತ ಋತುವಿನ ಮಂತ್ರಗಳಲ್ಲಿ ಅನುಷಂಗ ಮಾಡುವಾಗ ಶೈಶಿರೌ ಋತೂ ಎಂಬ ಪದಗಳಿಗೆ 'ಶಿಶಿರ ಋತುವಿಗೆ ಸಮಾನವಾದ ವಸಂತಾದಿ ಋತುಗಳು' ಎಂದು ವಿವರಿಸಬೇಕು. ಸೋಮಯಾಗವು ಪ್ರಕೃತಿಯಾದುದರಿಂದ 'ನ ಪ್ರಕೃತಾ ಊಹಃ' ಎಂಬ ಸಿದ್ಧಾಂತದಂತೆ ಊಹವಿರುವುದಿಲ್ಲ.
ಕೆಲವು ಆಚಾರ್ಯರ ಮತದಂತೆ 'ಶೈಶಿರಾವೃತೂ' ಎಂಬ ಪದಗಳ ಸ್ಥಾನದಲ್ಲಿ 'ವಾಸಂತಿಕಾವೃತೂ' ಎಂದು ಪದಾಂತರಪ್ರಕ್ಷೇಪವು ಇದೆ.

* ಇಲ್ಲಿಂದ ಮುಂದಿನ 4 ಮಂತ್ರಗಳಲ್ಲಿ ಅನುಷಂಗಮಂತ್ರಾರ್ಥವು ಸಮಾನವಾಗಿರುತ್ತದೆ. ಆ ಮಂತ್ರಾರ್ಥವು ಹೀಗಿದೆ:-ನೀನು ಚಯನದ ಒಳಭಾಗದಲ್ಲಿ ದೃಢಪಡಿಸಲು ಸೇರಿಸಿದವಳಾಗಿರುತ್ತೀಯೆ. ಚಯನ ಮಾಡುತ್ತಿರುವ ನನ್ನ ಉತ್ಕರ್ಷಕ್ಕಾಗಿ ದ್ಯುಲೋಕ-ಭೂಲೋಕಗಳು ತಮ್ಮ ಕಾರ್ಯಗಳಲ್ಲಿ ಸಮರ್ಥವಾಗಿರಲಿ. ನೀರುಗಳೂ, ಸಸ್ಯವರ್ಗಗಳೂ ತಮ್ಮ ಕಾರ್ಯಗಳಲ್ಲಿ ಸಮರ್ಥವಾಗಿರಲಿ. ಆಹವನೀಯಾದಿ ಅಗ್ನಿಗಳು ಪ್ರತ್ಯೇಕವಾಗಿ ತಮ್ಮ ಕಾರ್ಯದಲ್ಲಿ ಪ್ರವೃತ್ತವಾಗಲಿ. ಸಮಾನಕಾರ್ಯವುಳ್ಳವುಗಳಾಗಿ ಸಮಾನವಾದ ಮನಸ್ಸಿನಿಂದ ಕೂಡಿರುವ ಯಾವ ದ್ಯುಲೋಕ-ಭೂಲೋಕಗಳ ಮಧ್ಯದಲ್ಲಿ ಅಗ್ನಿಗಳು ಇವೆಯೋ ಆ ಅಗ್ನಿಗಳು ಶಿಶಿರಋತು ಸಂಬಂಧಿಯಾದ ಅವಯವಗಳನ್ನು ಸಮರ್ಥಗಳನ್ನಾಗಿ ಮಾಡುತ್ತಾ ಉಳಿದ ದೇವತೆಗಳು ಇಂದ್ರನನ್ನು ಸುತ್ತಲೂ ಸೇರಿಕೊಂಡು ಸೇವಿಸುವಂತೆ ಋತುದೇವತೆಗಳನ್ನು ಸೇವಿಸಲಿ.

## ನಭಶ್ಚ ನಭಸ್ಯಶ್ಚ ವಾರ್ಷಿಕಾವೃತೂ ಇಷಶ್ಚೋರ್ಜಶ್ಚ ಶಾರದಾವೃತೂ ಸಹಶ್ಚ ಸಹಸ್ಯಶ್ಚ ಹೈಮಂತಿಕಾವೃತೂ

---

ನಭಃ । ಚ । ನಭಸ್ಯಃ । ಚ । ವಾರ್ಷಿಕೌ । ಋತೂ ಇತಿ । ಇಷಃ । ಚ । ಊರ್ಜಃ । ಚ । ಶಾರದೌ । ಋತೂ ಇತಿ । ಸಹಃ । ಚ । ಸಹಸ್ಯಃ । ಚ । ಹೈಮಂತಿಕೌ । ಋತೂ ಇತಿ ।

---

| ಮಂತ್ರ | ವಿನಿಯೋಗ |
|---|---|
| ನಭಶ್ಚ...ವಾರ್ಷಿಕಾವೃತೂ ॥ | ಒಂದು ಮಂತ್ರದಿಂದ ಎರಡೆರಡರಂತೆ ನಾಲ್ಕು ಇಷ್ಟಕೆಗಳನ್ನು ಮಧ್ಯಮಚಿತಿಯಲ್ಲಿ ಉಪಧಾನ ಮಾಡಲು. |
| ಇಷಶ್ಚ...ಶಾರದಾವೃತೂ ॥ | ಮಂತ್ರವೊಂದಕ್ಕೆ ಎರಡರಂತೆ ನಾಲ್ಕು ಋತವ್ಯೇಷ್ಟಕೆಗಳ ಉಪಧಾನಕ್ಕಾಗಿ. |
| ಸಹಶ್ಚ...ಹೈಮಂತಿಕಾವೃತೂ ॥ | ಚತುರ್ಥಚಿತಿಯಲ್ಲಿ ಎರಡು ಋತವ್ಯೇಷ್ಟಕೆಗಳ ಉಪಧಾನವನ್ನು ಮಾಡಲು. |

---

▲ ನಭಃ ಚ ನಭಸ್ಯಃ ಚ=ಶ್ರಾವಣಮಾಸವೂ, ಭಾದ್ರಪದಮಾಸವೂ; ವಾರ್ಷಿಕೌ ಋತೂ=ವರ್ಷಋತುವಿನ ಅವಯವಗಳಾದ ಋತುಗಳಾಗಿವೆ. ಅಗ್ನೇಃ ಅಂತಃ= [ನೀನು] ಚಯನದ...ಅಭಿಸಂವಿಶಂತು=ಋತುದೇವತೆಗಳನ್ನು ಸೇವಿಸಲಿ. ▲ ಇಷಃ ಚ ಊರ್ಜಃ ಚ=ಆಶ್ವಯುಜಮಾಸವೂ, ಕಾರ್ತಿಕಮಾಸವೂ; ಶಾರದೌ ಋತೂ= ಶರದೃತುವಿನ ಅವಯವವಾದ ಋತುಗಳಾಗಿವೆ. ಅಗ್ನೇಃ ಅಂತಃ=[ನೀನು] ಚಯನದ... ಅಭಿಸಂವಿಶಂತು=ಋತುದೇವತೆಗಳನ್ನು ಸೇವಿಸಲಿ. ▲ ಸಹಃ ಚ ಸಹಸ್ಯಃ ಚ= ಮಾರ್ಗಶಿರಮಾಸವೂ, ಪುಷ್ಯಮಾಸವೂ; ಹೈಮಂತಿಕೌ ಋತೂ=ಹೇಮಂತ ಋತುವಿನ ಅವಯವವಾದ ಋತುಗಳಾಗಿವೆ. ಅಗ್ನೇಃ ಅಂತಃ=[ನೀನು] ಚಯನದ... ಅಭಿಸಂವಿಶಂತು=ಋತುದೇವತೆಗಳನ್ನು ಸೇವಿಸಲಿ.

---

ಈ ಋತವ್ಯೇಷ್ಟಕೆಗಳ ಉಪಧಾನದಲ್ಲಿ ಪ್ರತಿಯೊಂದು ಮಂತ್ರದಲ್ಲಿಯೂ **'ಅಗ್ನೇ ರಂತಃ...ವಿಶಂತು'** ಎಂಬ ಅಂಶವನ್ನು ಅನುಷಂಗ ಮಾಡಬೇಕು. **'ಮಧುಃ ಚ ಮಾಧವಃ ಚ'** ಎಂಬುದಾಗಿ ಎರಡು ಮಂತ್ರಗಳು ಪಠಿತವಾಗಿದ್ದರೂ ಜೊತೆಯಲ್ಲಿ ಪಠಿತವಾಗಿರುವ

**ತಪಶ್ಚ ತಪಸ್ಯಶ್ಚ ಶೈಶಿರಾವೃತೂ ಅಗ್ನೇರಂತಃ ಶ್ಲೇಷೋಽಸಿ**

**ಕಲ್ಪೇತಾಂ ದ್ಯಾವಾಪೃಥಿವೀ ಕಲ್ಪಂತಾಮಾಪ ಓಷಧೀಃ**

**ಕಲ್ಪಂತಾಮಗ್ನಯಃ ಪೃಥಙ್ಮಮ ಜ್ಯೈಷ್ಠ್ಯಾಯ**

---

ತಪಃ । ಚ । ತಪಸ್ಯಃ । ಚ । ಶೈಶಿರೌ । ಋತೂ ಇತಿ । ಅಗ್ನೇಃ । ಅಂತಶ್ಶ್ಲೇಷ ಇತ್ಯಂತಃ– ಶ್ಲೇಷಃ । ಅಸಿ । ಕಲ್ಪೇತಾಮ್ । ದ್ಯಾವಾಪೃಥಿವೀ ಇತಿ ದ್ಯಾವಾ–ಪೃಥಿವೀ । ಕಲ್ಪಂತಾಮ್ । ಆಪಃ । ಓಷಧೀಃ । ಕಲ್ಪಂತಾಮ್ । ಅಗ್ನಯಃ । ಪೃಥಕ್ । ಮಮ । ಜ್ಯೈಷ್ಠ್ಯಾಯ ।

---

| ಮಂತ್ರ | ವಿನಿಯೋಗ |
|---|---|
| **ತಪಶ್ಚ...ಶೈಶಿರಾವೃತೂ ॥** | ಎರಡು ಋತವ್ಯೇಷ್ಟಕೆಗಳನ್ನು ಪಂಚಮಚಿತಿಯಲ್ಲಿ ಉಪಧಾನ ಮಾಡಲು. |
| **ಅಗ್ನೇರಂತಃ...ಅಭಿಸಂವಿಶಂತು ॥** | ಋತವ್ಯೇಷ್ಟಕೋಪಧಾನದ ಮಂತ್ರಗಳಲ್ಲಿ ಅನುಷಂಗ ಮಾಡಲು. |

---

▲ **ತಪಃ ಚ ತಪಸ್ಯಃ ಚ**=ಮಾಘಮಾಸವೂ, ಫಾಲ್ಗುಣಮಾಸವೂ; **ಶೈಶಿರೌ ಋತೂ**=ಶಿಶಿರಋತುವಿನ ಅವಯವವಾದ ಋತುಗಳಾಗಿವೆ. ▲ [ಎಲೈ! ಋತುವಿಶೇಷವೇ!] **ಅಗ್ನೇಃ ಅಂತಃ**=[ನೀನು] ಚಯನದ ಒಳಭಾಗದಲ್ಲಿ; **ಶ್ಲೇಷಃ ಅಸಿ**=ದೃಢಪಡಿಸಲು ಸೇರಿಸಿದವಳಾಗಿರುತ್ತೀಯೆ. **ಮಮ**=ಚಯನ ಮಾಡುತ್ತಿರುವ ನನ್ನ; **ಜ್ಯೈಷ್ಠ್ಯಾಯ**=ಉತ್ಕರ್ಷಕ್ಕಾಗಿ; **ದ್ಯಾವಾಪೃಥಿವೀ**=ದ್ಯುಲೋಕಭೂಲೋಕಗಳು; **ಕಲ್ಪೇತಾಮ್**=[ತಮ್ಮ ಕಾರ್ಯಗಳಲ್ಲಿ] ಸಮರ್ಥವಾಗಿರಲಿ. **ಆಪಃ**=ನೀರುಗಳೂ; **ಓಷಧೀಃ**=ಸಸ್ಯವರ್ಗಗಳೂ; **ಕಲ್ಪಂತಾಮ್**=[ತಮ್ಮ ಕಾರ್ಯಗಳಲ್ಲಿ] ಸಮರ್ಥವಾಗಿರಲಿ. **ಅಗ್ನಯಃ**=ಆಹವನೀಯಾದಿ ಅಗ್ನಿಗಳು; **ಪೃಥಕ್**=ಪ್ರತ್ಯೇಕವಾಗಿ; **ಕಲ್ಪಂತಾಮ್**=[ತಮ್ಮ ಕಾರ್ಯಗಳಲ್ಲಿ] ಪ್ರವೃತ್ತವಾಗಲಿ.

---

ದರಿಂದ **ತಯಾ...ಸೀದ** ಎಂಬ ಮಂತ್ರಶೇಷವನ್ನು ಒಮ್ಮೆ ಪಠಿಸಿ ಇಷ್ಟಕೋಪಧಾನ

ಸವ್ರತಾ ॥[ಸವ್ರತಾಃ (೨೯)] ಯೇಽಗ್ನಯಃ

ಸಮನಸೋಽಂತರಾ ದ್ಯಾವಾಪೃಥಿವೀ ಶೈಶಿರಾವೃತೂ

ಅಭಿ ಕಲ್ಪಮಾನಾ ಇಂದ್ರಮಿವ ದೇವಾ ಅಭಿ ಸಂ ವಿಶಂತು

---

ಸವ್ರತಾ ಇತಿ ಸ-ವ್ರತಾಃ । (೨೯) । ಯೇ । ಅಗ್ನಯಃ । ಸಮನಸ ಇತಿ ಸ-ಮನಸಃ ।

ಅಂತರಾ । ದ್ಯಾವಾಪೃಥಿವೀ ಇತಿ ದ್ಯಾವಾ-ಪೃಥಿವೀ । ಶೈಶಿರೌ । ಋತೂ ಇತಿ ।

ಅಭೀತಿ । ಕಲ್ಪಮಾನಾಃ । ಇಂದ್ರಮ್ । ಇವ । ದೇವಾಃ । ಅಭಿ । ಸಮಿತಿ । ವಿಶಂತು ।

---

**ಸವ್ರತಾಃ**=ಸಮಾನಕಾರ್ಯವುಳ್ಳವುಗಳಾಗಿ; **ಸಮನಸಃ**=ಸಮಾನವಾದ ಮನಸ್ಸಿನಿಂದ ಕೂಡಿಕೊಂಡಿರುವ; **ಯೇ**=ಯಾವ; **ದ್ಯಾವಾಪೃಥಿವೀ**=ದ್ಯುಲೋಕ-ಭೂಲೋಕಗಳ; **ಅಂತರಾ**=ಮಧ್ಯದಲ್ಲಿ; **ಅಗ್ನಯಃ**=ಅಗ್ನಿಗಳು ಇವೆಯೋ [ಆ ಅಗ್ನಿಗಳು] **ಶೈಶಿರೌ ಋತೂ**=ಶಿಶಿರಋತುಸಂಬಂಧಿಯಾದ ಅವಯವಗಳನ್ನು; **ಅಭಿಕಲ್ಪಮಾನಾಃ**=ಸಮರ್ಥಗಳನ್ನಾಗಿ ಮಾಡುತ್ತಾ; **ದೇವಾಃ**=ಉಳಿದ ದೇವತೆಗಳು; **ಇಂದ್ರಮ್ ಇವ**=ಇಂದ್ರನನ್ನು [ಸುತ್ತಲೂ ಸೇರಿಕೊಂಡು ಸೇವಿಸುವಂತೆ] **ಅಭಿಸಂವಿಶಂತು**=ಋತುದೇವತೆಗಳನ್ನು ಸೇವಿಸಲಿ.

---

ವನ್ನು ಮಾಡಬೇಕು.

'ನಭಶ್ಚ' ಎಂಬ 'ನಭಸ್ಯಶ್ಚ' ಎಂಬ ಮಂತ್ರಗಳಿಂದಲೂ 'ಇಷಶ್ಚ' ಎಂಬ 'ಊರ್ಜಶ್ಚ' ಎಂಬ ಮಂತ್ರಗಳಿಂದಲೂ ಮಂತ್ರವೊಂದಕ್ಕೆ ಎರಡೆರಡರಂತೆ ಋತವ್ಯೇಷ್ಟಕೋಪಧಾನವನ್ನು ಮಧ್ಯಮಚಿತಿಯಲ್ಲಿ ಮಾಡಬೇಕು.

'ಸಹಶ್ಚ...' 'ತಪಶ್ಚ...' ಎಂಬ ಮಂತ್ರಗಳಿಂದ ಚತುರ್ಥಚಿತಿ ಹಾಗೂ ಪಂಚಮಚಿತಿಯಲ್ಲಿ ಕ್ರಮವಾಗಿ ಎರಡು ಋತವ್ಯೇಷ್ಟಕೆಗಳನ್ನು ಉಪಧಾನ ಮಾಡಬೇಕು.

ಋತವ್ಯೇಷ್ಟಕೆಗಳನ್ನು ಉಪಧಾನ ಮಾಡುವ ಎಲ್ಲ ಮಂತ್ರಗಳಲ್ಲಿಯೂ ಅನುಷಂಗ ಮಾಡಬೇಕಾದ ಋತುವಿಶೇಷದ ಸ್ತೋತ್ರವಾದ ಮಂತ್ರದ ತಾತ್ಪರ್ಯವು ಹೀಗೆ ಇದೆ:-

ಹೇ! ಋತುವಿಶೇಷವೇ! ನಿನಗೆ ಸಂಬಂಧಿಸಿದ ಇಷ್ಟಕೆಯು ಚಿತಿಯನ್ನು-ಗೋಡೆಯು ದೃಢವಾಗಿರುವುದಕ್ಕಾಗಿ ಕಲ್ಲು ಮುಂತಾದವುಗಳನ್ನು ಸೇರಿಸಿ ಬಲಪಡಿಸುವಂತೆ-ಬಲಪಡಿ

# ಸಂಯಚ್ಚ ಪ್ರಚೇತಾಶ್ಚಾಗ್ನೇಃ ಸೋಮಸ್ಯ ಸೂರ್ಯ–

ಸಂಯದಿತಿ ಸಮ್–ಯತ್ । ಚ । ಪ್ರಚೇತಾ ಇತಿ ಪ್ರ–ಚೇತಾಃ । ಚ । ಅಗ್ನೇಃ ।

ಸೋಮಸ್ಯ । ಸೂರ್ಯಸ್ಯ ।

| ಮಂತ್ರ | ವಿನಿಯೋಗ |
| --- | --- |
| ಸಂಯಚ್ಚ...ಸೂರ್ಯಸ್ಯ<br>*ತೇ ತೇऽಧಿಪತಯಃ..ದಧಾಮಿ ॥ | ಏಕಚಿತೀಕಚಯನದಲ್ಲಿ ಪ್ರಥಮೇಷ್ಟಕೋಪಧಾನಕ್ಕಾಗಿ. |

▲ [ಎಲೈ! ಇಷ್ಟಕೆಯೇ!] [ನೀನು] **ಅಗ್ನೇಃ**=ಅಗ್ನಿದೇವನ; **ಸೋಮಸ್ಯ**=ಚಂದ್ರ ದೇವನ; **ಸೂರ್ಯಸ್ಯ**=ಸೂರ್ಯದೇವನ; **ಸಂಯತ್ ಚ**=[ಈ ದೇವತೆಗಳ] ನಿಯಾಮಕಶಕ್ತಿಯೂ; **ಪ್ರಚೇತಾಃ ಚ**=ಪ್ರಕಾಶಜ್ಞಾನಕಾರಣವೂ ಕೂಡ; [ಆಗಿರುವೆ] [ನಿನ್ನನ್ನು ಉಪಧಾನ ಮಾಡುತ್ತೇನೆ]. [ಹೇ! ಇಷ್ಟಕೆಯೇ!] ತೇ ತೇ ಅಧಿಪತಯಃ=ಆ ಅಗ್ನಿ–ಸೋಮ–ಸೂರ್ಯಾದಿದೇವತೆಗಳು ನಿನ್ನನ್ನು ಅಧಿಕವಾಗಿ ಪಾಲಿಸತಕ್ಕವರು. ತೇಭ್ಯಃ ನಮಃ=ಅವರಿಗೆ ನಮಸ್ಕಾರ. ತೇ ನಃ ಮೃಡಯಂತು=ಅವರು ನಮ್ಮನ್ನು ಸುಖ ಪಡಿಸಲಿ; ತೇ=ಅಂತಹ ನಮಸ್ಕರಿಸುತ್ತಿರುವ ನಾವು; ಯಮ್=ಯಾರನ್ನು; ದ್ವಿಷ್ಮಃ= ದ್ವೇಷಿಸುತ್ತೇವೆಯೋ; ಯಃ=ಯಾವನು; ನಃ=ನಮ್ಮನ್ನು; ದ್ವೇಷ್ಟಿ ಚ=ದ್ವೇಷಿಸುತ್ತಾನೆಯೋ; ತಮ್=ಆ ಹಗೆಯನ್ನು; ವಃ=ನಿಮ್ಮ; ಜಂಭೇ=ತೆರೆದ ಬಾಯಿಯಲ್ಲಿ; ದಧಾಮಿ=ಹಾಕುತ್ತೇನೆ/ಹಾಕುತ್ತೇವೆ. [ಅವನನ್ನು ಭಕ್ಷಿಸಿ ನಾಶಪಡಿಸಿರಿ].

---

* ಇಲ್ಲಿನ ಮುಂದಿನ ಐದು ಮಂತ್ರಗಳಲ್ಲಿಯೂ ಈ ಅಂಶವನ್ನು ಈ ಕೆಳಗಿನಂತೆ ಅನುಷಂಗ ಮಾಡಬೇಕು.

**ತೇ ತೇऽಧಿಪತಯಸ್ತೇಭ್ಯೋ ನಮಸ್ತೇ ನೋ ಮೃಡಯಂತು ತೇ ಯಂ ದ್ವಿಷ್ಮೋ ಯಶ್ಚ ನೋ ದ್ವೇಷ್ಟಿ ತಂ ವೋ ಜಂಭೇ ದಧಾಮಿ ॥** ಬಳಿಕ 'ತಯಾ ದೇವತಯಾಂಗಿರಸ್ವದ್ಧ್ರುವಾ ಸೀದ' ಎಂದು ಇಷ್ಟಕೋಪಧಾನವನ್ನು ಮಾಡಬೇಕು.

ಈ ಅನುಷಂಗಮಂತ್ರಾರ್ಥವು ಹೀಗಿದೆ:–ಆ ಅಗ್ನಿ–ಸೋಮ–ಸೂರ್ಯಾದಿದೇವತೆಗಳು ನಿನ್ನನ್ನು ಅಧಿಕವಾಗಿ ಪಾಲಿಸತಕ್ಕವರು. ಅವರಿಗೆ ನಮಸ್ಕಾರ. ಅವರು ನಮ್ಮನ್ನು ಸುಖ ಪಡಿಸಲಿ; ಅಂತಹ ನಮಸ್ಕರಿಸುತ್ತಿರುವ ನಾವು ಯಾರನ್ನು ದ್ವೇಷಿಸುತ್ತೇವೆಯೋ ಯಾವನು ನಮ್ಮನ್ನು ದ್ವೇಷಿಸುತ್ತಾನೆಯೋ ಆ ಹಗೆಯನ್ನು ನಿಮ್ಮ ತೆರೆದ ಬಾಯಿಯಲ್ಲಿ ಹಾಕುತ್ತೇನೆ/ಹಾಕುತ್ತೇವೆ. [ಅವನನ್ನು ಭಕ್ಷಿಸಿ ನಾಶಪಡಿಸಿರಿ].

# ಸ್ಯೋಗ್ರಾ ಚ ಭೀಮಾ ಚ ಪಿತೃಣಾಂ ಯಮಸ್ಯೇಂದ್ರಸ್ಯ ಧ್ರುವಾ ಚ ಪೃಥಿವೀ ಚ ದೇವಸ್ಯ ಸವಿತುರ್ಮರುತಾಂ ವರುಣಸ್ಯ

ಉಗ್ರಾ । ಚ । ಭೀಮಾ । ಚ । ಪಿತೃಣಾಮ್ । ಯಮಸ್ಯ । ಇಂದ್ರಸ್ಯ । ಧ್ರುವಾ । ಚ । ಪೃಥಿವೀ । ಚ । ದೇವಸ್ಯ । ಸವಿತುಃ । ಮರುತಾಮ್ । ವರುಣಸ್ಯ ।

| ಮಂತ್ರ | ವಿನಿಯೋಗ |
|---|---|
| ಉಗ್ರಾ ಚ...ಇಂದ್ರಸ್ಯ ತೇ...ದಧಾಮಿ ॥ | ಎರಡನೆಯ ಇಷ್ಟಕೆಯ ಉಪಧಾನಕ್ಕಾಗಿ. |
| ಧ್ರುವಾ ಚ...ವರುಣಸ್ಯ ತೇ...ದಧಾಮಿ ॥ | ಮೂರನೆಯ ಇಷ್ಟಕೆಯ ಉಪಧಾನಕ್ಕಾಗಿ. |

♠ [ಹೇ! ಇಷ್ಟಕೆಯೇ!] **ಪಿತೃಣಾಮ್**=ಪಿತೃದೇವತೆಗಳ; **ಯಮಸ್ಯ**=ಯಮ ದೇವನ; **ಇಂದ್ರಸ್ಯ**= ಇಂದ್ರದೇವನ; [ಈ ದೇವತೆಗಳ]; **ಉಗ್ರಾ ಚ**=ಕಠಿನವಾದ ತಾಡನಾದಿಶಕ್ತಿಯೂ; **ಭೀಮಾ ಚ**=ಭಯಪಡಿಸುವ ಶಕ್ತಿಯೂ [ನೀನಾಗಿರುವೆ. ನಿನ್ನನ್ನು ಉಪಧಾನ ಮಾಡುತ್ತೇನೆ]. ತೇ ತೇ=ಆ ಅಗ್ನಿ....ದಧಾಮಿ=ಹಾಕುತ್ತೇನೆ/ ಹಾಕುತ್ತೇವೆ. ♠ [ಹೇ! ಇಷ್ಟಕೆಯೇ! ನೀನು] **ಸವಿತುಃ ದೇವಸ್ಯ**=ಸವಿತೃದೇವನ; **ಮರುತಾಮ್**=ಮರುದ್ದೇವತೆಗಳ; **ವರುಣಸ್ಯ**=ವರುಣದೇವನ [ಈ ದೇವತೆಗಳ] **ಧ್ರುವಾ ಚ**=ಸ್ಥಿರವಾಗಿರುವ ಶಕ್ತಿಯೂ; **ಪೃಥಿವೀ ಚ**=ವಿಸ್ತೀರ್ಣವಾಗಿರುವ ಶಕ್ತಿಯೂ [ಆಗಿರುವೆ. ನಿನ್ನನ್ನು ಉಪಧಾನ ಮಾಡುತ್ತೇನೆ]. ತೇ ತೇ=ಆ ಅಗ್ನಿ....ದಧಾಮಿ= ಹಾಕುತ್ತೇನೆ/ಹಾಕುತ್ತೇವೆ. [ಅವನನ್ನು ಭಕ್ಷಿಸಿ ನಾಶಪಡಿಸಿರಿ].

ಸುತ್ತದೆ. ಈ ಚಯನಾನುಷ್ಠಾನವನ್ನು ಮಾಡುತ್ತಿರುವ ಯಜಮಾನನಿಗೆ ಶ್ರೇಷ್ಠತೆಯನ್ನು ಉಂಟು ಮಾಡಲು ದ್ಯಾವಾಪೃಥಿವಿಗಳೂ, ಜಲದೇವತೆಗಳೂ, ಸಸ್ಯವರ್ಗಗಳೂ ಸಮರ್ಥವಾಗಲಿ. ಸಮಾನಕಾರ್ಯಪ್ರವೃತ್ತವಾದ, ಸಮಾನಮನಸ್ಸನ್ನು ಹೊಂದಿರುವ ಆಹವನೀಯಾದಿ ಅಗ್ನಿಗಳೂ ಯಜಮಾನನಿಗೆ ಶ್ರೇಷ್ಠತೆಯನ್ನು ಉಂಟುಮಾಡಲಿ. ಇಂದ್ರನನ್ನು ದೇವತೆಗಳು ಸೇವಿಸುವಂತೆ ಅಗ್ನಿಗಳೂ ಋತುದೇವತೆಗಳನ್ನು ಸೇವಿಸಲಿ.

ಧರ್ತ್ರೀ ಚ ಧರಿತ್ರೀ ಚ ಮಿತ್ರಾವರುಣಯೋರ್ಮಿತ್ರಸ್ಯ

ಧಾತುಃ ಪ್ರಾಚೀ ಚ ಪ್ರತೀಚೀ ಚ ವಸೂನಾಗ್ಂ ರುದ್ರಾಣಾ

[ರುದ್ರಾಣಾಮ್(೩೦)ಆದಿತ್ಯಾನಾಂ] ಮಾದಿತ್ಯಾನಾಂ

---

ಧರ್ತ್ರೀ । ಚ । ಧರಿತ್ರೀ । ಚ । ಮಿತ್ರಾವರುಣಯೋರಿತಿ ಮಿತ್ರಾ–ವರುಣಯೋಃ ।

ಮಿತ್ರಸ್ಯ । ಧಾತುಃ । ಪ್ರಾಚೀ । ಚ । ಪ್ರತೀಚೀ । ಚ । ವಸೂನಾಮ್ । ರುದ್ರಾಣಾಮ್ ।

(೩೦) । ಆದಿತ್ಯಾನಾಮ್ ।

---

| ಮಂತ್ರ | ವಿನಿಯೋಗ |
|---|---|
| ಧರ್ತ್ರೀ ಚ...ಧಾತುಸ್ತೇ... ॥ | ನಾಲ್ಕನೆಯ ಇಷ್ಟಕೆಯ ಉಪಧಾನಕ್ಕಾಗಿ. |
| ಪ್ರಾಚೀ ಚ...ಆದಿತ್ಯಾನಾಂ ತೇ... ॥ | ಐದನೆಯ ಇಷ್ಟಕೆಯ ಉಪಧಾನಕ್ಕಾಗಿ. |

---

♠[ಎಲೈ! ಇಷ್ಟಕೆಯೇ! ನೀನು] **ಮಿತ್ರಾವರುಣಯೋಃ**=ಮಿತ್ರಾವರುಣದೇವತೆಗಳ; **ಮಿತ್ರಸ್ಯ**=ಮಿತ್ರದೇವನ; **ಧಾತುಃ**=ಧಾತೃದೇವನ; [ಈ ದೇವತೆಗಳ] **ಧರ್ತ್ರೀ ಚ**=ಧಾರಣಶಕ್ತಿಯೂ; **ಧರಿತ್ರೀ ಚ**=ಪರಪ್ರೇರಣಶಕ್ತಿಯೂ ಆಗಿರುವೆ. [ನಿನ್ನನ್ನು ಉಪಧಾನ ಮಾಡುತ್ತೇನೆ]. ತೇ ತೇ=ಆ ಅಗ್ನಿ....ದಧಾಮಿ=ಹಾಕುತ್ತೇನೆ/ಹಾಕುತ್ತೇವೆ. [ಅವನನ್ನು ಭಕ್ಷಿಸಿ ನಾಶಪಡಿಸಿರಿ]. ♠ [ಎಲೈ! ಇಷ್ಟಕೆಯೇ! ನೀನು] **ವಸೂನಾಮ್**=ಅಷ್ಟವಸುಗಳ; **ರುದ್ರಾಣಾಮ್**=ಏಕಾದಶರುದ್ರರ; **ಆದಿತ್ಯಾನಾಮ್**= ದ್ವಾದಶಾದಿತ್ಯರ; **ಪ್ರಾಚೀ ಚ**=ಪೂರ್ವದಿಕ್ಕಿನಲ್ಲಿರುವ ಶಕ್ತಿಯೂ; **ಪ್ರತೀಚೀ ಚ**=ಪಶ್ಚಿಮದಿಕ್ಕಿನಲ್ಲಿರುವ ಶಕ್ತಿಯೂ ಆಗಿರುವೆ [ನಿನ್ನನ್ನು ಉಪಧಾನ ಮಾಡುತ್ತೇನೆ].

---

ಪ್ರತಿಷ್ಠೆಯನ್ನು ಹೊಂದದ ಯಜಮಾನನು ಮಾಡುವ ಸೋಮಯಾಗದಲ್ಲಿ ಏಕಚಿತೀಕವಾದ ಚಯನವನ್ನು ಅನುಷ್ಠಿಸಬೇಕು. ಆ ಚಯನದಲ್ಲಿ ಉತ್ತರವೇದಿಯಲ್ಲಿ ಐದು ಇಷ್ಟಕೆಗಳನ್ನು ಉಪಧಾನ ಮಾಡಬೇಕು. ಆ ಉಪಧಾನದ ಮಂತ್ರಗಳು ಇಲ್ಲಿವೆ.

ಎಲೈ! ಪ್ರಥಮೇಷ್ಟಕೆಯೇ! ನೀನು ಅಗ್ನಿ–ಸೂರ್ಯ–ಚಂದ್ರರ ನಿಯಾಮಕಶಕ್ತಿ ಹಾಗೂ

**ತೇ ತೇಽಧಿಪತಯಸ್ತೇಭ್ಯೋ ನಮಸ್ತೇ ನೋ**

**ಮೃಡಯಂತು ತೇ ಯಂ ದ್ವಿಷ್ಮೋ ಯಶ್ಚ ನೋ ದ್ವೇಷ್ಟಿ**

**ತಂ ವೋ ಜಂಭೇ ದಧಾಮಿ**

---

ತೇ । ತೇ । ಅಧಿಪತಯ ಇತ್ಯಧಿ-ಪತಯಃ । ತೇಭ್ಯಃ । ನಮಃ । ತೇ । ನಃ ।

ಮೃಡಯಂತು । ತೇ । ಯಮ್ । ದ್ವಿಷ್ಮಃ । ಯಃ । ಚ । ನಃ । ದ್ವೇಷ್ಟಿ । ತಮ್ । ವಃ ।

ಜಂಭೇ । ದಧಾಮಿ ।

---

| ಮಂತ್ರ | ವಿನಿಯೋಗ |
|---|---|
| **ತೇ ತೇ...ದಧಾಮಿ ॥** | ಹಿಂದಿನ ಐದು ಮಂತ್ರಗಳಲ್ಲಿಯೂ ಅನುಷಂಗ ಮಾಡಲು. |

---

🔔 [ಹೇ! ಇಷ್ಟಕೆಯೇ!] **ತೇ ತೇ ಅಧಿಪತಯಃ**=ಆ ಅಗ್ನಿ-ಸೋಮ-ಸೂರ್ಯಾದಿ ದೇವತೆಗಳು ನಿನ್ನನ್ನು ಅಧಿಕವಾಗಿ ಪಾಲಿಸತಕ್ಕವರು; **ತೇಭ್ಯಃ ನಮಃ**=ಅವರಿಗೆ ನಮಸ್ಕಾರ; **ತೇ ನಃ ಮೃಡಯಂತು**=ಅವರು ನಮ್ಮನ್ನು ಸುಖಪಡಿಸಲಿ; **ತೇ**= ಅಂತಹ ನಮಸ್ಕರಿಸುತ್ತಿರುವ ನಾವು; **ಯಮ್**=ಯಾರನ್ನು; **ದ್ವಿಷ್ಮಃ**=ದ್ವೇಷಿಸುತ್ತೇವೆಯೋ; **ಯಃ**=ಯಾವನು; **ನಃ**=ನಮ್ಮನ್ನು; **ದ್ವೇಷ್ಟಿ ಚ**=ದ್ವೇಷಿಸುತ್ತಾನೆಯೋ; **ತಮ್**=ಆ ಹಗೆಯನ್ನು; **ವಃ**=ನಿಮ್ಮ; **ಜಂಭೇ**=ತೆರೆದ ಬಾಯಿಯಲ್ಲಿ; **ದಧಾಮಿ**= ಹಾಕುತ್ತೇನೆ/ಹಾಕುತ್ತೇವೆ. [ಅವನನ್ನು ಭಕ್ಷಿಸಿ ನಾಶಪಡಿಸಿರಿ].

---

ಪ್ರಕಾಶಜ್ಞಾನಕಾರಣವಾಗಿರುವೆ. ನಿನ್ನನ್ನು ಉಪಧಾನ ಮಾಡುತ್ತೇನೆ.

ಎಲೈ! ದ್ವಿತೀಯೇಷ್ಟಕೆಯೇ! ನೀನು ಪಿತೃಗಳು-ಯಮ-ಇಂದ್ರರ ತಾಡನ ಹಾಗೂ ಭಯಪಡಿಸುವ ಶಕ್ತಿಯಾಗಿರುವೆ. ನಿನ್ನನ್ನು ಉಪಧಾನ ಮಾಡುತ್ತೇನೆ.

ಎಲೈ! ತೃತೀಯೇಷ್ಟಕೆಯೇ! ನೀನು ಸವಿತೃದೇವ-ಮರುದ್ದೇವತೆಗಳು-ವರುಣದೇವ -ಇವರ ಸ್ಥಿರ-ವಿಸ್ತೀರ್ಣವಾದ ಶಕ್ತಿಯಾಗಿರುವೆ. ನಿನ್ನನ್ನು ಉಪಧಾನ ಮಾಡುತ್ತೇನೆ.

ಎಲೈ! ಚತುರ್ಥೇಷ್ಟಕೆಯೇ! ನೀನು ಮಿತ್ರಾವರುಣರು-ಮಿತ್ರದೇವ-ಧಾತೃದೇವ-

ಸಹಸ್ರಸ್ಯ ಪ್ರಮಾ ಅಸಿ ಸಹಸ್ರಸ್ಯ ಪ್ರತಿಮಾ ಅಸಿ ಸಹಸ್ರಸ್ಯ

ವಿಮಾ ಅಸಿ ಸಹಸ್ರಸ್ಯೋನ್ಮಾ ಅಸಿ ಸಾಹಸ್ರೋಽಸಿ

---

ಸಹಸ್ರಸ್ಯ । ಪ್ರಮೇತಿ ಪ್ರ-ಮಾ । ಅಸಿ । ಸಹಸ್ರಸ್ಯ । ಪ್ರತಿಮೇತಿ ಪ್ರತಿ-ಮಾ । ಅಸಿ ।

ಸಹಸ್ರಸ್ಯ । ವಿಮೇತಿ ವಿ-ಮಾ । ಅಸಿ । ಸಹಸ್ರಸ್ಯ । ಉನ್ಮೇತ್ಯುತ್-ಮಾ । ಅಸಿ ।

ಸಾಹಸ್ರಃ । ಅಸಿ ।

---

| ಮಂತ್ರ | ವಿನಿಯೋಗ |
|---|---|
| ಸಹಸ್ರಸ್ಯ ಪ್ರಮಾ ಅಸಿ... ಸಾಹಸ್ರಃ...ತ್ವಾ ॥ | ಹಿರಣ್ಯಶಲ್ಕಗಳಿಂದ ಅಗ್ನಿಯ ಪ್ರೋಕ್ಷಣೆಯನ್ನು ಮಾಡಲು. |

---

▲ [ಎಲೈ! ಇಷ್ಟಕೆಯೇ!] [ನೀನು] **ಸಹಸ್ರಸ್ಯ**=[ಪೂರ್ವದಿಕ್ಕಿನಲ್ಲಿ ಉಪಧಾನ ಮಾಡುವ] ಸಾವಿರ ಇಷ್ಟಕೆಗಳಿಗೆ; **ಪ್ರಮಾ ಅಸಿ**=ಸಮಾನವಾಗಿ ಇರುವೆ. ▲ **ಸಹಸ್ರಸ್ಯ** =[ದಕ್ಷಿಣದಿಕ್ಕಿನಲ್ಲಿ ಉಪಹಿತಳಾಗುವ ನೀನು] ಸಾವಿರ ಇಷ್ಟಕೆಗಳಿಗೆ; **ಪ್ರತಿಮಾ ಅಸಿ**= ಸಮಾನಳಾಗಿರುವೆ. ▲ **ಸಹಸ್ರಸ್ಯ**=[ಪಶ್ಚಿಮದಿಕ್ಕಿನಲ್ಲಿ ಉಪಹಿತಳಾಗುವ ನೀನು] ಸಾವಿರ ಇಷ್ಟಕೆಗಳಿಗೆ; **ವಿಮಾ ಅಸಿ**=ಸಮಾನಳಾಗಿರುವೆ. ▲ **ಸಹಸ್ರಸ್ಯ**=[ಉತ್ತರದಿಕ್ಕಿನಲ್ಲಿ ಉಪಹಿತಳಾಗುವ ನೀನು] ಉತ್ತರದಿಕ್ಕಿನ ಸಾವಿರ ಇಷ್ಟಕೆಗಳಿಗೆ; **ಉನ್ಮಾ ಅಸಿ**= ಸಮಾನವಾಗಿರುವೆ. ▲ **ಸಾಹಸ್ರಃ ಅಸಿ**=[ಹೇ! ಚಿತ್ಯಾಗ್ನಿಯೇ!] [ನೀನು] ಊರ್ಧ್ವದಿಕ್ಕಿನಲ್ಲಿ ಸಹಸ್ರಸಂಬಂಧಿಯಾಗಿರುವೆ.

---

**ಇವರ ಧಾರಣ-ಪರಪ್ರೇರಣಶಕ್ತಿಯೂ ಆಗಿರುವೆ. ನಿನ್ನನ್ನು ಉಪಧಾನ ಮಾಡುತ್ತೇನೆ.**

**ಎಲೈ! ಪಂಚಮೇಷ್ಟಕೆಯೇ! ನೀನು ವಸು-ರುದ್ರ-ಆದಿತ್ಯರ ಪೂರ್ವ-ಪಶ್ಚಿಮದಿಕ್ಕುಗಳಲ್ಲಿರುವ ಶಕ್ತಿಯಾಗಿರುವೆ. ಎಲ್ಲ ಜಯಗಳೂ ಈ ದೇವತೆಗಳ ಎಲ್ಲ ದಿಕ್ಕುಗಳಲ್ಲಿಯೂ ಇರುವ ಶಕ್ತಿಯನ್ನು ಅನುಸರಿಸಿರುತ್ತವೆ.**

**ಹೇ! ಇಷ್ಟಕೆಯೇ! ಅಂತಹ ಶಕ್ತಿಯುಳ್ಳ ನಿನ್ನನ್ನು ಉಪಧಾನ ಮಾಡುತ್ತೇನೆ.**

ಸಹಸ್ರಾಯ ತ್ವೇಮಾ ಮೇ ಅಗ್ನ ಇಷ್ಟಕಾ ಧೇನವಃ

ಸಂತ್ವೇಕಾ ಚ ಶತಂ ಚ ಸಹಸ್ರಂ ಚಾಯುತಂ ಚ [(೩೧)]

ನಿಯುತಂ ಚ ಪ್ರಯುತಂ ಚಾರ್ಬುದಂ ಚ ನ್ಯರ್ಬುದಂ ಚ

ಸಮುದ್ರಶ್ಚ ಮಧ್ಯಂ ಚಾಂತಶ್ಚ ಪರಾರ್ಧಶ್ಚೇ-

---

ಸಹಸ್ರಾಯ । ತ್ವಾ । ಇಮಾಃ । ಮೇ । ಅಗ್ನೇ । ಇಷ್ಟಕಾಃ । ಧೇನವಃ । ಸಂತು । ಏಕಾ । ಚ । ಶತಮ್ । ಚ । ಸಹಸ್ರಮ್ । ಚ । ಅಯುತಮ್ । ಚ ।(೩೧)। ನಿಯುತಮಿತಿ ನಿ-ಯುತಮ್ । ಚ । ಪ್ರಯುತಮಿತಿ ಪ್ರ-ಯುತಮ್ । ಚ । ಅರ್ಬುದಮ್ । ಚ । ನ್ಯರ್ಬುದಮಿತಿ ನಿ-ಅರ್ಬುದಮ್ । ಚ । ಸಮುದ್ರಃ । ಚ । ಮಧ್ಯಮ್ । ಚ । ಅಂತಃ । ಚ । ಪರಾರ್ಧ ಇತಿ ಪರ-ಅರ್ಧಃ । ಚ ।

---

| ಮಂತ್ರ | ವಿನಿಯೋಗ |
|---|---|
| ಇಮಾ ಮೇ...ಅಮುಷ್ಮಿಁಲ್ಲೋಕೇ ॥ | ಇಷ್ಟಕೆಗಳನ್ನು ಧೇನುಗಳಂತೆ ಭಾವಿಸಲು. |

ತ್ವಾ=ನಿನ್ನನ್ನು; ಸಹಸ್ರಾಯ=ಸಾವಿರದಷ್ಟು ಫಲಸಿದ್ಧಿಗಾಗಿ; [ಹಿರಣ್ಯಶಲ್ಕಗಳಿಂದ] [ಪ್ರೋಕ್ಷಿಸುತ್ತೇನೆ]. 🔔 ಅಗ್ನೇ=ಹೇ! ಅಗ್ನಿಯೇ! ಇಮಾಃ ಇಷ್ಟಕಾಃ=ಈ ಉಪಧಾನ ಮಾಡಿರುವ ಇಷ್ಟಕೆಗಳು; ಮೇ=ನನಗೆ; ಧೇನವಃ ಸಂತು=ಕರೆಯುವ ಹಸುಗಳಂತೆ ಸಂತೋಷವನ್ನು ಉಂಟುಮಾಡುವುವುಗಳಾಗಲಿ. ಏಕಾ ಚ=ಒಂದು ಇಷ್ಟಕೆಯೂ; ಶತಮ್ ಚ=ನೂರೂ; ಸಹಸ್ರಮ್ ಚ=ಸಾವಿರವೂ; ಅಯುತಮ್ ಚ=ಹತ್ತು ಸಾವಿರವೂ; ನಿಯುತಮ್ ಚ=ಲಕ್ಷವೂ; ಪ್ರಯುತಮ್ ಚ=ಹತ್ತುಲಕ್ಷವೂ; ಅರ್ಬುದಮ್ ಚ=ಕೋಟಿಯೂ; ನ್ಯರ್ಬುದಮ್ ಚ=ಹತ್ತು ಕೋಟಿಯೂ; ಸಮುದ್ರಃ ಚ=ನೂರು ಕೋಟಿಯೂ; ಮಧ್ಯಮ್ ಚ=ಸಾವಿರ ಕೋಟಿಯೂ; ಅಂತಃ ಚ=ಹತ್ತು ಸಾವಿರ ಕೋಟಿಯೂ; ಪರಾರ್ಧಃ ಚ=ನೂರು ಸಾವಿರ ಕೋಟಿಯೂ ಆಗಿರುವ;

## ಮಾ ಮೇ ಅಗ್ನ ಇಷ್ಟಕಾ ಧೇನವಃ ಸಂತು ಷಷ್ಟಿಃ
## ಸಹಸ್ರಮಯುತಮಕ್ಷೀಯಮಾಣಾ ಋತಸ್ಥಾಃ
## ಸ್ಥರ್ತಾವೃಧೋ ಘೃತಶ್ಚುತೋ ಮಧುಶ್ಚುತ
## ಊರ್ಜಸ್ವತೀಃ ಸ್ವಧಾವಿನೀ

---

ಇಮಾಃ । ಮೇ । ಅಗ್ನೇ । ಇಷ್ಟಕಾಃ । ಧೇನವಃ । ಸಂತು । ಷಷ್ಟಿಃ । ಸಹಸ್ರಮ್ । ಅಯುತಮ್ । ಅಕ್ಷೀಯಮಾಣಾಃ । ಋತಸ್ಥಾ ಇತ್ಯೃತ-ಸ್ಥಾಃ । ಸ್ಥ । ಋತಾವೃಧ ಇತ್ಯೃತ-ವೃಧಃ । ಘೃತಶ್ಚುತ ಇತಿ ಘೃತ-ಶ್ಚುತಃ । ಮಧುಶ್ಚುತ ಇತಿ ಮಧು-ಶ್ಚುತಃ । ಊರ್ಜಸ್ವತೀಃ । ಸ್ವಧಾವಿನೀರಿತಿ ಸ್ವಧಾ-ವಿನೀಃ ।

---

**ಅಗ್ನೇ**=ಹೇ! ಅಗ್ನಿಯೇ! **ಇಮಾಃ ಇಷ್ಟಕಾಃ**=ಈ ಇಷ್ಟಕೆಗಳು; **ಮೇ ಧೇನವಃ ಸಂತು**=[ಇಷ್ಟಕೆಗಳು ಆ ಸಂಖ್ಯೆಯ ಧೇನುಗಳಂತಾಗಿ ನನ್ನನ್ನು ಸಂತೋಷಪಡಿಸಲಿ] ನನಗೆ ಧೇನುಗಳಂತೆ ಸಂತೋಷದಾಯಕಗಳಾಗಲಿ. [ಹೇ! ಇಷ್ಟಕೆಗಳೇ! ನೀವು;] **ಷಷ್ಟಿಃ**= ಅರವತ್ತು ಸಂಖ್ಯೆಯುಳ್ಳವುಗಳಾಗಿ; **ಸಹಸ್ರಮ್**=ಸಾವಿರಸಂಖ್ಯೆಯುಳ್ಳವುಗಳಾಗಿ; **ಅಯುತಮ್**=ಹತ್ತು ಸಾವಿರ ಸಂಖ್ಯೆಯುಳ್ಳವುಗಳಾಗಿ; **ಅಕ್ಷೀಯಮಾಣಾಃ**=ಕ್ಷಯ ವಿಲ್ಲದವುಗಳಾಗಿ; **ಋತಸ್ಥಾಃ ಸ್ಥ**=ಯಜ್ಞದಲ್ಲಿ ಇರುವವುಗಳಾಗಿರಿ; **ಋತಾವೃಧಃ**= ಯಜ್ಞವನ್ನು ವೃದ್ಧಿಗೊಳಿಸುವವರಾಗಿರಿ. **ಘೃತಶ್ಚುತಃ**=ತುಪ್ಪವನ್ನು ಸುರಿಸುವವರಾಗಿ; **ಮಧುಶ್ಚುತಃ**=ಮಧುರಸವನ್ನು ಸುರಿಸುವವರಾಗಿ; **ಊರ್ಜಸ್ವತೀಃ**=ಬಲವುಳ್ಳವರಾಗಿಯೂ; **ಸ್ವಧಾವಿನೀಃ**=ಅನ್ನವುಳ್ಳವರಾಗಿಯೂ [ಆಗಿರಿ].

---

**ಏಕಚಿತೀಕವಾದ ಈ ಚಯನದಲ್ಲಿ ಉಪಧಾನ ಮಾಡುವ ಈ ಇಷ್ಟಕೆಗಳ ಮಂತ್ರಗಳಲ್ಲಿ 'ಅಧಿಪತಿ' ಎಂಬ ಶಬ್ದವಿರುವುದರಿಂದ ಈ ಇಷ್ಟಕೆಗಳು 'ಅಧಿಪತ್ನೀಷ್ಟಕೆ'ಗಳು ಎನ್ನಿಸಿಕೊಳ್ಳುತ್ತವೆ.**

-ಸ್ತಾ ಮೇ ಅಗ್ನ ಇಷ್ಟಕಾ ಧೇನವಃ ಸಂತು ವಿರಾಜೋ ನಾಮ ಕಾಮದುಘಾ ಅಮುತ್ರಾಮುಷ್ಮಿಲ್ಲೋಕೇ ॥ ೩೨-11 ॥

[ಸವ್ರತಾ ರುದ್ರಾಣಾಮಯುತಂ ಚ ಪಂಚಚತ್ವಾರಿಗ್ಂಶಚ್ಚ ॥]

---

ತಾಃ । ಮೇ । ಅಗ್ನೇ । ಇಷ್ಟಕಾಃ । ಧೇನವಃ । ಸಂತು । ವಿರಾಜ ಇತಿ ವಿ-ರಾಜಃ । ನಾಮ । ಕಾಮದುಘಾ ಇತಿ ಕಾಮ-ದುಘಾಃ । ಅಮುತ್ರ । ಅಮುಷ್ಮಿನ್ । ಲೋಕೇ ॥ (೩೨) ॥

---

ಅಗ್ನೇ=ಹೇ! ಅಗ್ನಿಯೇ! ತಾಃ ಇಷ್ಟಕಾಃ=ಆ ಪ್ರಸಿದ್ಧವಾದ ಇಷ್ಟಕೆಗಳು; ಮೇ ಧೇನವಃ ಸಂತು=ನನಗೆ ಧೇನುಗಳಂತೆ ಪ್ರಿಯವಾಗಲಿ. ವಿರಾಜಃ ನಾಮ=ವಿಶೇಷಪ್ರಕಾಶವುಳ್ಳ ವುಗಳಾಗಿ ವಿರಾಜರೆಂದು ಪ್ರಸಿದ್ಧರಾದ ನೀವು; ಕಾಮದುಘಾಃ=ಇಷ್ಟಾರ್ಥಗಳನ್ನು ಸುರಿಸುತ್ತಾ; ಅಮುತ್ರ=ಸ್ವರ್ಗಲೋಕದಲ್ಲಿಯೂ; ಅಮುಷ್ಮಿನ್ ಲೋಕೇ=ಇಂದ್ರಾದಿ ಲೋಕಗಳಲ್ಲಿಯೂ; [ಯಜಮಾನನಿಗೆ ಸಂತೋಷದಾಯಕಗಳಾಗಿರಿ].

---

ಪೂರ್ವ-ದಕ್ಷಿಣ-ಪಶ್ಚಿಮ-ಉತ್ತರದಿಕ್ಕುಗಳಲ್ಲಿ ಉಪಧಾನ ಮಾಡಲ್ಪಡುವ ಇಷ್ಟಕೆಗಳು ಆಯಾ ದಿಕ್ಕಿನ ಸಾವಿರ ಇಷ್ಟಕೆಗಳಿಗೆ ಸಮಾನವಾಗಿವೆ.

ಚಿತ್ಯಾಗ್ನಿಯು ಊರ್ಧ್ವದಿಕ್ಕಿನಲ್ಲಿ ಸಹಸ್ರಸಂಬಂಧಿಯಾಗಿದೆ. ಈ ಸಹಸ್ರಸಿದ್ಧಿಗಾಗಿ ಬಂಗಾರದ ತುಣುಕುಗಳಿಂದ ಅಗ್ನಿಯನ್ನು [ಚಿತಿಯನ್ನು] ಪ್ರೋಕ್ಷಿಸಬೇಕು.

ಈ ಇಷ್ಟಕೆಗಳು ಒಂದರಿಂದ ದಶಗುಣಕಗಳಲ್ಲಿ ಹೆಚ್ಚಿ ಅವು ಧೇನುಗಳಂತೆ ನನಗೆ ಸಂತೋಷವನ್ನು ನೀಡಲಿ. ಅವುಗಳ ಗರಿಷ್ಠಸಂಖ್ಯೆಯು ನೂರು ಸಾವಿರ ಕೋಟಿಯೆಂದು ಶ್ರುತಿಯು ತಿಳಿಸುತ್ತದೆ.

ಹೀಗೆ ಇಷ್ಟಕೆಗಳು ಇಹಲೋಕದಲ್ಲಿಯೂ, ಸ್ವರ್ಗಲೋಕದಲ್ಲಿಯೂ, ಇಂದ್ರಾದಿ ಲೋಕಗಳಲ್ಲಿಯೂ ಇಷ್ಟಾರ್ಥಗಳನ್ನು ನೀಡುವ ಧೇನುಗಳಂತೆ ಇವೆ ಎಂದು ತಾತ್ಪರ್ಯ.

---

# ವಿನಿಯೋಗಸಂಗ್ರಹ

1-12 ಮಧುಶ್ಚ ದ್ವಾದಶರ್ತವ್ಯಾ ಅಗ್ನೇರಿತ್ಯನುಷಜ್ಯತೇ ।
13-17 ಸಂಯಚ್ಯೋಗ್ರಾ ಧ್ರುವಾ ಧರ್ತ್ರೀ ಪ್ರಾಚೀ ಪಂಚೇಷ್ಟಕಾ ಇಮಾಃ ॥
ಷಷ್ಠ್ಯಾಂ ಚಿತೌ ಸರ್ವಶೇಷಸ್ತ್ವೇ ತ ಇತ್ಯಾದಿಕೋ ಮತಃ ।
18-22 ಸಹಸ್ರ ಪಂಚಭಿರ್ಮಂತ್ರೈರ್ದಿಕ್ಷು ಮಧ್ಯೇ ಚ ತಾಂ ಚಿತಿಮ್ ॥
ಸಹಸ್ರಸ್ವರ್ಣಶಕಲೈಃ ಪ್ರೋಕ್ಷೇತ್ ತತ್23 ಇಮಾ ಇತಿ ।
ಸ್ವಾಮೀ ಧೇನೂಃ ಕರೋತ್ಯೇತಾಸ್ತ್ರಯೋವಿಂಶತಿಮಂತ್ರಕಾಃ ॥

ಅನುವಾಕದಲ್ಲಿರುವ ಮಂತ್ರಗಳ ಸಂಖ್ಯೆ–23

---

## ಅನುವಾಕದ ವಿಶೇಷವಿಷಯಗಳು

### ಅ) ಮೀಮಾಂಸಾ

**೧) ಷಷ್ಠೀ ಚಿತಿಯು [ಆರನೆಯ ಚಿತಿಯು] ನಿತ್ಯವೇ? ಅಲ್ಲವೇ?**

**[ಜೈ. ಸೂ. 4.4.10]**

**'ಯೋಽಗ್ನಿಂ ಚಿತ್ವಾ ನ ಪ್ರತಿತಿಷ್ಠತಿ ಪಂಚ ಪೂರ್ವಾಶ್ಚಿತಯೋ ಭವಂತ್ಯಥ ಷಷ್ಠೀಂ ಚಿತಿಂ ಚಿನುತೇ'** ಎಂದು ವಿಹಿತವಾಗಿರುವ ಆರನೆಯ ಚಿತಿಯು ಪಂಚ ಚಿತಿಗಳಂತೆ ನಿತ್ಯವೇ ಅಲ್ಲವೇ? ಇದು ಇಲ್ಲಿನ **ಸಂಶಯ.**

**'ಷಷ್ಠೀ'** ಎಂಬ ಪದವು ಷಣ್ಣಾಂ ಪೂರಣೀ ಎಂಬ ವಿಗ್ರಹವಾಕ್ಯದಂತೆ ಪೂರಣ ಪ್ರತ್ಯಯಾಂತವಾಗಿರುವುದರಿಂದ ಹಿಂದಿನ ಐದು ಚಿತಿಗಳನ್ನು ಈ ಚಿತಿಯು ಪೂರ್ಣಗೊಳಿಸಬೇಕಾಗಿರುವುದರಿಂದ ಅವುಗಳಂತೆ ಇದೂ ನಿತ್ಯವೇ. ಇದು ಇಲ್ಲಿನ **ಪೂರ್ವಪಕ್ಷ.**

**'ಯೋಽಗ್ನಿಂ ಚಿತ್ವಾ ನ ಪ್ರತಿತಿಷ್ಠತಿ'** ಅಂದರೆ ಯಾರು ಚಯನವನ್ನು ಅನುಷ್ಠಿಸಿದ ಬಳಿಕ ಪ್ರತಿಷ್ಠೆಯನ್ನು ಹೊಂದದಿದ್ದರೆ ಅಂತಹ ಯಜಮಾನನು ಬಳಿಕ ಆರನೆಯ ಚಿತಿಯನ್ನು ಚಯನ ಮಾಡಬೇಕು ಎಂದು ಅರ್ಥ. ಹೀಗಿರುವಾಗ ಚಯನವು ಅನುಷ್ಠಿತವಾಗಿದೆಯೆಂದರೆ ಐದು ಚಿತಿಗಳಿಂದಲೇ ಅದು ಪೂರ್ಣವಾಗಿರುವುದರಿಂದ ಪ್ರತಿಷ್ಠಾ

ಲಾಭದ ನಿಮಿತ್ತವಾಗಿ ಮಾಡಬೇಕಾದ ಈ ಚಯನವು ನೈಮಿತ್ತಿಕವಾದುದು. ಈ ಆರನೆಯ ಚಿತಿಯು ಇಷ್ಟಕೆಗಳಿಂದ ನಿರ್ಮಿತವಾದ ಪಕ್ಷಿಯ ಆಕಾರದ್ದಾಗಿರುತ್ತದೆ.

'**ಷಷ್ಠೀ**' ಎಂಬ ಪದವನ್ನು ಹೀಗೆ ವಿವರಿಸಬಹುದು. ಮೊದಲು ಐದು ಚಿತಿಗಳನ್ನು ಹೇಳಿದುದಾಯಿತು. ಈಗ ಆರನೆಯ ಚಿತಿಯನ್ನು ಹೇಳುತ್ತೇವೆ ಎಂಬರ್ಥವಾಗುವುದರಿಂದ ಆ ಪದದ ಸಮನ್ವಯವನ್ನು ಸಾಧಿಸಬಹುದು. ಹೀಗಾಗಿ ಆರನೆಯ ಚಿತಿಯು ನೈಮಿತ್ತಿಕವಾದುದು-ನಿತ್ಯವಾದುದಲ್ಲ. ಇದು ಇಲ್ಲಿನ ಸಿದ್ಧಾಂತ.

# ॥ ದ್ವಾದಶೋಽನುವಾಕಃ ॥

ಸಮಿದ್ದಿಶಾಮಾಶಯಾನಸ್ಸುವರ್ವಿನ್ಮಧೋರತೋ

ಮಾಧವಃ ಪಾತ್ವಸ್ಮಾನ್ ।

---

ಸಮಿದಿತಿ ಸಮ್-ಇತ್ । ದಿಶಾಮ್ । ಆಶಯಾ । ನಃ । ಸುವರ್ವಿದಿತಿ ಸುವಃ-ವಿತ್ ।

ಮಧೋಃ । ಅತಃ । ಮಾಧವಃ । ಪಾತು । ಅಸ್ಮಾನ್ ॥

---

ಹಿಂದಿನ ಹನ್ನೊಂದನೆಯ ಅನುವಾಕದಲ್ಲಿ ಋತವ್ಯೇಷ್ಟಕಾದಿಗಳು ಹೇಳಲ್ಪಟ್ಟಿವೆ. ಇಲ್ಲಿಗೆ ಚಿತಿಗಳು ಮುಗಿದವು. ಈ ಹನ್ನೆರಡನೆಯ ಅನುವಾಕದಲ್ಲಿ ಯಾಜ್ಯಾ-ಪುರೋನು ವಾಕ್ಯೆಗಳು ಹೇಳಲ್ಪಡುತ್ತವೆ. ಅಶ್ವಮೇಧಯಾಗದಲ್ಲಿ 'ಅಗ್ನಯೇ ಗಾಯತ್ರಾಯ' ಎಂದು ವಿಹಿತವಾಗಿರುವ ಹತ್ತು ಹವಿಸ್ಸುಗಳಿಂದ ಕೂಡಿದ ಇಷ್ಟಿಯ ಯಾಜ್ಯಾ-ಪುರೋನುವಾಕ್ಯೆಗಳು ಇಲ್ಲಿ ಇವೆ.

---

| ಮಂತ್ರ | ವಿನಿಯೋಗ |
|---|---|
| ಸಮಿದ್ದಿಶಾಮ್...ಅಸ್ಮಾನ್ ॥ | ಇಷ್ಟಿಯ ಆಗ್ನೇಯಪುರೋಡಾಶಯಾಗದ ಪುರೋನುವಾಕ್ಯೆ. |

---

▲ **ದಿಶಾಮ್**=ದಿಕ್ಕುಗಳಲ್ಲಿ; **ಸುವರ್ವಿತ್**=ದ್ಯುಲೋಕದಲ್ಲಿರುವ ಆದಿತ್ಯನನ್ನು ಹೊಂದಿರುವ; **ಸಮಿತ್**=ಪ್ರಕಾಶನಕಾರಿಯಾದ ಪೂರ್ವದಿಕ್ಕು; **ಆಶಯಾ**=[ನಮ್ಮ] ಧನಾದಿ ಆಶೆಗಳನ್ನು ಪೂರ್ಣಗೊಳಿಸುವುದರಿಂದ; **ನಃ**=ನಮ್ಮನ್ನು; **ಪಾತು**=ರಕ್ಷಿಸಲಿ. **ಅತಃ ಮಧೋಃ**=ಈ ಚೈತ್ರಮಾಸಕ್ಕಿಂತಲೂ [ಅಧಿಕವಾದ ಸೂರ್ಯತಾಪವನ್ನು ಹೊಂದಿರುವ] **ಮಾಧವಃ**=ವೈಶಾಖಮಾಸವು; **ಅಸ್ಮಾನ್**=ನಮ್ಮನ್ನು; ಪಾತು=ರಕ್ಷಿಸಲಿ.

ಅಗ್ನಿರ್ದೇವೋ ದುಷ್ಟರೀತುರದಾಭ್ಯ ಇದಂ ಕ್ಷತ್ರಗ್ಂ ರಕ್ಷತು ಪಾತ್ವಸ್ಮಾನ್ ॥ ರಥಂತರಗ್ಂ ಸಾಮಭಿಃ ಪಾತ್ವಸ್ಮಾನ್ಗಾಯತ್ರೀ ಛಂದಸಾಂ ವಿಶ್ವರೂಪಾ ।

---

ಅಗ್ನಿಃ । ದೇವಃ । ದುಷ್ಟರೀತುಃ । ಅದಾಭ್ಯಃ । ಇದಮ್ । ಕ್ಷತ್ರಮ್ । ರಕ್ಷತು । ಪಾತು । ಅಸ್ಮಾನ್ ॥ ರಥಂತರಮಿತಿ ರಥಮ್-ತರಮ್ । ಸಾಮಭಿರಿತಿ ಸಾಮ-ಭಿಃ । ಪಾತು । ಅಸ್ಮಾನ್ । ಗಾಯತ್ರೀ । ಛಂದಸಾಮ್ । ವಿಶ್ವರೂಪೇತಿ ವಿಶ್ವ-ರೂಪಾ ॥

---

| ಮಂತ್ರ | ವಿನಿಯೋಗ |
|---|---|
| ರಥಂತರಗ್ಂ...ಪಿಪರ್ತು ॥ | ಆಗ್ನೇಯಯಾಗದ ಯಾಜ್ಯಾನುವಾಕ್ಯೆ. |

---

**ದುಷ್ಟರೀತುಃ**=ದುಃಖದಿಂದ [ಮತ್ತೊಬ್ಬರನ್ನು] ಆವರಿಸುವ ಶತ್ರುವಿನಿಂದಲೂ; **ಅದಾಭ್ಯಃ**=ಹಿಂಸಿಸಲು ಸಾಧ್ಯವಾಗದವನಾದ; **ಅಗ್ನಿಃ ದೇವಃ**=ಅಗ್ನಿದೇವನು; **ಇದಮ್ ಕ್ಷತ್ರಮ್**=ಈ ನಮ್ಮ ಬಲವನ್ನು; **ರಕ್ಷತು**=ರಕ್ಷಿಸಲಿ. **ಅಸ್ಮಾನ್ ಪಾತು**=ನಮ್ಮನ್ನೂ ಕಾಪಾಡಲಿ. [ಅದಾಭ್ಯಃ ಅಗ್ನಿಃ ದೇವಃ=ಯಾರಿಂದಲೂ ಹಿಂಸಿಸಲಾಗದ ಅಗ್ನಿ ದೇವನು; ದುಷ್ಟರೀತುಃ=ದುಃಖವನ್ನು ಉಂಟುಮಾಡುವವನ ದೆಸೆಯಿಂದ; ಇದಮ್ ಕ್ಷತ್ರಮ್ ರಕ್ಷತು=ಈ ನಮ್ಮ ಬಲವನ್ನು ರಕ್ಷಿಸಲಿ ಎಂದೂ ಅನ್ವಯಿಸಬಹುದು, **ದುಷ್ಟರೀತುಃ** ಎಂಬುದು ಪಂಚಮೀವಿಭಕ್ತ್ಯಂತಪದ] 🔔 **ರಥಂತರಮ್**=ರಥಂತರ ಸಾಮವು; **ಸಾಮಭಿಃ**=ಬೇರೆಯ ಸಾಮಗಳಿಂದ [ಕೂಡಿ]; **ಅಸ್ಮಾನ್ ಪಾತು**=ನಮ್ಮನ್ನು ರಕ್ಷಿಸಲಿ. **ಛಂದಸಾಮ್**=ಛಂದಸ್ಸುಗಳ ಪೈಕಿ; **ವಿಶ್ವರೂಪಾ**=ಹಲವು ಬಗೆಗಳುಳ್ಳ; **ಗಾಯತ್ರೀ**=ಗಾಯತ್ರಿಯು; ಅಸ್ಮಾನ್ ಪಾತು=ನಮ್ಮನ್ನು ಕಾಪಾಡಲಿ.

---

ಚೈತ್ರ-ವೈಶಾಖಮಾಸಗಳಲ್ಲಿ ಸೂರ್ಯನ ತಾಪವು ಅಧಿಕವಾಗಿರುತ್ತದೆ. ಈ ಕಾಲದಲ್ಲಿ ಪೂರ್ವದಿಕ್ಕು ಅಧಿಕಪ್ರಕಾಶಯುಕ್ತವಾಗಿರುತ್ತದೆ. ಆ ದಿಕ್ಕೂ ಚೈತ್ರಮಾಸವೂ ನಮ್ಮನ್ನು ರಕ್ಷಿಸಲಿ. ವೈಶಾಖವು ಚೈತ್ರಕ್ಕಿಂತಲೂ ಅಧಿಕತಾಪಯುಕ್ತವಾಗಿರುತ್ತದೆ. ಆ

